Last Minutes of Sri Krishnavathara

Author: Pro. **K. S. Narayanacharya**

**Second Edition-1998**

**Price: Rs. 25=00**

ಎರಡನೇ ಮುದ್ರಣ-1998

**ಬೆಲೆ: ೨೫-೦೦**

ಮುದ್ರಕರು:
ಎಸ್.ಕೆ. ಕಾಟೋಟಿ
ಸಂಯುಕ್ತ ಕರ್ನಾಟಕ ಪ್ರೆಸ್
ಹುಬ್ಬಳ್ಳಿ

ಪ್ರಕಾಶಕರು
ಲೋಕಶಿಕ್ಷಣ ಟ್ರಸ್ಟ್
ಹುಬ್ಬಳ್ಳಿ-ಬೆಂಗಳೂರು
ಬೆಂಗಳೂರು-೨೫

# ಲೇಖಕನ ಮಾತು

ಬರೆದ ಲೇಖನಮಾಲೆಗಳೂ, ಕಾದಂಬರಿಗಳೂ ಅಪ್ರಕಟಿತವಾಗಿ ಬಹುದಿನ ಉಳಿದರೆ, ವಯಸ್ಸಿಗೆ ಬಂದ ಕನ್ಯೆಯೊಬ್ಬಳ ಮಾತಾಪಿತೃಗಳಿಗೆ, ಅವಳಿಗೆ ಸರಿಯಾದ ವರ ದೊರಕದ ಚಿಂತೆ ಬೆಳೆಯುವಂತೆ ಆಗುವುದೆಂಬ ಈ ಹೋಲಿಕೆಯಲ್ಲಿ ಅನುಚಿತವೇನಿಲ್ಲ! ಸೃಜನಶೀಲ ಸಾಹಿತ್ಯವನ್ನು ಬರೆಯುವ ಸಾಹಿತಿಗೆ ಅವನ ಕೃತಿಗಳೆಲ್ಲ ಅವನ 'ಮಕ್ಕಳ'ಲ್ಲವೆ? "ಅಪಾರೇ ಕಾವ್ಯಸಂಸಾರೇ ಕವಿರೇಕಃ ಪ್ರಜಾಪತಿಃ" ಎಂಬ ಸಾಹಿತ್ಯ ಮೀಮಾಂಸಕರ ಮಾತೇ ಇದೆ!

"ಶ್ರೀಕೃಷ್ಣಾವತಾರದ ಕೊನೆಯ ಗಳಿಗೆಗಳು" ಎಂಬ ಈ ನನ್ನ ಕೃತಿಯ ಪ್ರಕಟಣೆಯ ವಾರಸುದಾರಿಕೆಯ ಸರ್ವಸ್ವ ಹೊಣೆಹೊತ್ತ ಲೋಕ ಶಿಕ್ಷಣ ಸಂಸ್ಥೆಯ ಕಾರ್ಯಕಾರಿ ವರ್ಗದವರು ನನಗೆ ಈ ಚಿಂತೆಯನ್ನು ದೂರ ಮಾಡಿ, ಇದರ ಜವಾಬ್ದಾರಿ ಹೊತ್ತಿರುವುದು ನನಗೆ ತುಂಬ ಸಂತಸದ, ಹೃದಯ ಹಗುರ ಮಾಡುವ ಸಂಗತಿ.

ಕನ್ಯಾದಾನ ಮಾಡುವಾಗ "ತುಭ್ಯಂ ಇದಂ" ಎಂಬುದುಂಟೇ ಹೊರತು "ನ ಮಮ" ಎಂದು ಹೇಳುವ ವಾಡಿಕೆ ಇಲ್ಲ! (ಸಾಲಗ್ರಾಮ ದಾನಕ್ಕೂ ಇದೇ ನಿಯಮವನ್ನು ಶಾಸ್ತ್ರ ವಿಧಿಸುತ್ತದೆ! ಉಳಿದ ಭೂದಾನ, ಹಿರಣ್ಯದಾನ, ಗೋದಾನಾದಿಗಳಿಗೆ ದಾನ ಕೊಟ್ಟ ಮೇಲೆ ಹಳೆಯ ಯಜಮಾನರು 'ನನ್ನದು' ಎಂಬುದು ಹೋಯಿತು 'ನ ಮಮ' ಎಂದೆನ್ನಲೇಬೇಕು! ಪ್ರಕೃತದ ಕೃತಿಯ 'ಕನ್ಯಾದಾನ' ಅಥವಾ ಸಾಲಗ್ರಾಮದಾನ ಕಾಲದಲ್ಲಿ 'ನ ಮಮ' ಇಲ್ಲವಾದುದರಿಂದ, 'ಮಮ'ಕಾರಕ್ಕೆ ಸಾಕ್ಷಿಯಾಗಿ ಈ ನಾಲ್ಕು ಮಾತನ್ನು ನಾನು ಬರೆಯಬೇಕಾಗಿರುವುದೂ ಒಂದು ಭಾಗ್ಯವೇ! ಕೃತಿಯ ಜವಾಬ್ದಾರಿ, ವಾರಸುದಾರಿಕೆ, ಯಾರದ್ದಾದರೂ, ಕೃತಿಕಾರನ ಹೆಸರು, ಅಳಿಯದೇ ಅದರೊಡನೆಯೇ ಇರುತ್ತದೆಯಲ್ಲ! ಅದರ ಹೊಣೆಗಾಗಿ ಮಾತ್ರ ಈ ಉಪಕಾರ ಸ್ಮರಣೆಯ ಮಾತುಗಳು ಉಚಿತ!

ಶ್ರೀಕೃಷ್ಣಾವತಾರದ ಸಮಾಪ್ತಿಗೆ ಸಂಬಂಧಪಟ್ಟ ಈ ಕಥೆ, ಈ ಘಟನಾವಳಿ, ಮಹಾಭಾರತ ಭಾಗವತಾದಿಗಳಲ್ಲಿ ಓದಬಾರದ, ಕೇಳಬಾರದ, ಬರೆಯಬಾರದ, ಹೇಳಬಾರದ ಭಾಗವೆಂಬ ಹಿರಿಯರ ನಂಬಿಕೆಯುಂಟು! ಜೀವನದಲ್ಲಿ ಶ್ರದ್ಧೆ ಉಳಿಯಬೇಕಾದವರು, ಮಹಾಭಾರತವನ್ನು ಧರ್ಮಜನ ಪಟ್ಟಾಭಿಷೇಕದವರೆಗೂ, ಭಾಗವತವನ್ನು ಶ್ರೀಕೃಷ್ಣ-ರುಕ್ಮಿಣಿಯರ (ಅಥವಾ ಇನ್ನುಳಿದ ಅಷ್ಟಮಹಿಷಿಯರ) ವಿವಾಹದ ತನಕ ಮಾತ್ರ ಓದುವುದುಂಟು! ರಾಮಾಯಣದಲ್ಲೂ ಉತ್ತರಕಾಂಡವನ್ನು ಪಾರಾಯಣ ಮಾಡುವ ವಾಡಿಕೆ ಇಲ್ಲದಿರುವುದೂ ಇದೇ ಕಾರಣಕ್ಕೆ. ಆದರೆ ಈ 'ಬರೆಯಬಾರದ್ದೆಂಬ' ಹಣೆಪಟ್ಟಿ ಹೊತ್ತ ಈ ಕೃಷ್ಣ ಕಥಾಭಾಗವೂ ಉಳಿದವುಗಳಷ್ಟೇ ವ್ಯಾಸರ ಪ್ರಾಮಾಣಿಕ ರಚಿತ! ಅದರಲ್ಲೂ ಲೋಕಕ್ಕೆ ಬೋಧೆ ಇದೆ! ಒಂದು ಇಡೀ ಜನಾಂಗ ಹೇಗೆ, ಯಾವ ದುಶ್ಚಟಗಳಿಂದ, ಯಾವ ಕೆಟ್ಟ ನಡವಳಿಕೆಯಿಂದ, ಸಾಮೂಹಿಕವಾಗಿ ನಾಶವಾಗಬಹುದೆಂಬ ಎಚ್ಚರಿಕೆ ಈ ಭಾಗದಲ್ಲಿರುವುದು. ಮುಂದಿನ ಪೀಳಿಗೆ ನಮ್ಮಂತಹವರಿಗಲ್ಲವಾದರೆ, ಬೇರಾರು ಇದನ್ನು ಓದಲೆಂದು ವ್ಯಾಸರು ಬರೆದಿಟ್ಟರು? ಬರೆಯಬಾರದ್ದನ್ನು ವ್ಯಾಸರೇ ಏಕೆ ಬರೆದರು? ಬದುಕಬೇಕೆಂಬ ಪ್ರಜ್ಞೆ, ಆಸೆ, ಅದರ ಸರಿಯಾದ ದಿಕ್ಕು ನಾಶವಾಗುತ್ತಾ, ಹಣ, ಪದವಿ, ಪ್ರತಿಷ್ಠೆಗಳ ಪೂಜೆಯೂ, ಮೌಲ್ಯಗಳ ವಿನಾಶವೂ, ಸುವ್ಯವಸ್ಥಿತವಾಗಿ, ನಡೆಯುತ್ತಾ ಹೊರಟಿರುವ ಈ ನಮ್ಮ ಕಾಲದಲ್ಲಿ, ನಮ್ಮ ಇಡಿಯ ಸಾಮಾಜಿಕ,

ರಾಜಕೀಯ, ಶೈಕ್ಷಣಿಕ ದಿಕ್ಕುಗಳು ಸರಿಯಾಗಿಲ್ಲವೆಂಬುದನ್ನು ಈ ಕೃಷ್ಣಾವಸಾನ ಕಥಾಭಾಗ ಸಮರ್ಥವಾಗಿ ನಮಗೆ ತಿಳಿಸಿಕೊಡುವಂತೆ, ಬೇರೊಂದಿಲ್ಲ ಎಂಬುದು ಮನವರಿಕೆಯಾದಾಗ, ಈ ಕೃತಿಯ ಅರ್ಥಪೂರ್ಣತೆಯೂ, ಪ್ರಸ್ತುತತೆಯೂ, ವೈಶಿಷ್ಟ್ಯವೂ, ಬೋಧೆಯೂ ನಮ್ಮ ಓದುಗರಿಗೆ ಮನವರಿಕೆಯಾದೀತೆಂದು ನನ್ನ ದೃಢನಂಬಿಕೆ. ಕಥೆಯಲ್ಲಿ ರಂಜನೆ ಇರುವುದಾದರೆ ಅದು ಕಥಾಕಾರನ ಕೊಡುಗೆಯೇನಲ್ಲ!

ಈ ಕೃತಿಯನ್ನು ಬರೆಯುವಾಗ ಮೂಲಗ್ರಂಥಗಳ, ಆಕರಗಳ, ಮಾಹಿತಿಗಳನ್ನೆಲ್ಲ ಒಗ್ಗೂಡಿಸಿ, ಒಂದು ಚಿತ್ರ ಮಾಡಿಕೊಂಡು, ಅದು ಸಮಗ್ರವಾಗಲು ಬೇಕಾದ ಅಂಶಗಳನ್ನು ದಂತಕಥೆಗಳಿಂದಲೂ, ಸಾಹಿತಿಗೆ ಉಚಿತವಾದ ಸ್ವತಂತ್ರ ಕಲ್ಪನೆಯಿಂದಲೂ, ಕೊಂಡಿಯಂತೆ ನಿರ್ಮಿಸಿ ಜೋಡಿಸಿ 'ಕರ್ಮವೀರ'ದ ವಾರವಾರದ ಕಂತುಗಳಿಗೆ ಹೊರೆಯಾಗದಂತೆ, ಓದುಗರ ಕುತೂಹಲ ಕೆದರುವಂತೆ ಬರೆದ ಇಷ್ಟು ಮಾತ್ರದ ಸ್ವಾತಂತ್ರ್ಯವನ್ನು ನಾನು ವಹಿಸಿದ್ದೇನೆ. ಶ್ರೀಕೃಷ್ಣ ಭಗವಂತನು "ಅಸ್ವಸ್ಥಮನಸ್ಕನಾಗಿ ದೇಹ ಬಿಟ್ಟ" ("ನಾತಿ ಸ್ವಸ್ಥಮನಾ ಯಯೌ") ಎಂಬ ವ್ಯಾಸೋಕ್ತಿಯನ್ನು ಹಲವಾರು ವರ್ಷಕಾಲ ಚಿಂತಿಸಿ, ಅವ್ಯಕ್ತ ಯಾತನೆ ಪಟ್ಟವರಲ್ಲಿ ನಾನೂ ಒಬ್ಬ! ಆ ಅಸ್ವಸ್ಥಮನಸ್ಕತೆಗೆ ಕಾರಣವನ್ನು ವ್ಯಾಸರು ನೇರವಾಗಿ ಸ್ಪಷ್ಟಪಡಿಸಿಲ್ಲವಾದರೂ "ಅದು ದ್ರೌಪದಿಯ ನೆನವನ್ನು ಕುರಿತು" ಎಂಬ ಹಿರಿಯರ ವಿವರಣೆಯನ್ನು ಹಿಗ್ಗಿಸಿ, ಗಾಂಧಾರಿ, ಧೃತರಾಷ್ಟ್ರ, ದುರ್ಯೋಧನ, ಶಕುನಿ, ಕರ್ಣರನ್ನೂ, ಯಶೋಧೆ, ದೇವಕಿ, ಪೂತನೆ, ದ್ರೌಪದಿಯರನ್ನೂ ಭಗವಂತನ ಮಾನಸಪಟಲದಲ್ಲಿ ಸುಳಿದುಹೋಗುವಂತೆ ಮಾಡಿ, ಆ ಪಾತ್ರಗಳ ಹೊಸರೀತಿಯ, ಹೊಸ ಅಂಶಗಳನ್ನೊಳಗೊಂಡ, ಪರಾಮರ್ಶೆಯನ್ನು ನಾನು ಇಲ್ಲಿ ಬೆಳೆಸಿರುವುದೇ ಈ ಕೃತಿಯ ವೈಶಿಷ್ಟ್ಯವೆಂಬುದನ್ನು ಲೇಖಕನ ದೃಷ್ಟಿಯಿಂದ ಹೇಳಬಯಸುತ್ತೇನೆ. ಇದರಲ್ಲಿ ಸಮಗ್ರ ಮಹಾಭಾರತ, ಭಾಗವತಗಳ ಬಗೆಗೆ ಹೊಸ ದೃಷ್ಟಿಯೂ, ಹೊಸ ಮರ್ಮಗಳ ಉದ್ಘಾಟನೆಯೂ ಪುಷ್ಕಳವಾಗಿಯೆ ಇವೆ ಎಂದು ನನ್ನ ಹಿರಿಯ ಆಪ್ತ ಮಿತ್ರರಾದ ಶ್ರೀ ಎನ್ಕೆ ಅವರು ಈ ಕೃತಿಯ ಮುನ್ನುಡಿಯಲ್ಲಿ ಬರೆದಿರುವುದನ್ನು ಅಸಂಖ್ಯಾತ ಓದುಗರೂ ಮೆಚ್ಚಿ, ಅಭಿನಂದಿಸಿ ಬರೆದಿರುವುದು ನನಗೆ ತೃಪ್ತಿಯ, ಸಾರ್ಥಕ್ಯದ ಭಾವ ತಂದುಕೊಟ್ಟಿದೆ. 'ಕರ್ಮವೀರ' ಇದನ್ನು ಪ್ರಕಟಿಸದಿದ್ದರೆ ಈ ಭಾಗ್ಯ ನನಗೆ ಹೇಗೆ ಬರುತ್ತಿತ್ತು?

ಇದಕ್ಕೆ ಭಿನ್ನವಾದ ಒಂದು ದೃಷ್ಟಿಯೂ ಉಂಟೆಂಬುದು ಖೇದದ ಸಂಗತಿ! ಭಗವಂತನ ಅವತಾರವೇ ಆದ ಶ್ರೀಕೃಷ್ಣ ಸ್ವಾಮಿಯ ಈ ಕೊನೆಯ ಗಳಿಗೆಗಳ ವ್ಯಾಪಾರವು ಕೇವಲ 'ಅಭಿನಯವೇ' ಹೊರತು, ಅವನಿಗೆ ಶೋಕವೆಂದರೇನು? ಕೊರತೆಯೆಂದರೇನು? ರುಕ್ಮಿಣೀ ಮೊದಲಾದ ಮಹಿಷಿಯರಿಗಾದ ದುರ್ಗತಿಯು ಭಕ್ತರಿಂದ ವಿಮರ್ಶನೀಯವಲ್ಲ! ಅದನ್ನೆಲ್ಲ ನಿಜವೆಂದು ನಂಬುವುದಾದರೆ, ಈ ಅಸಹಾಯಕತೆಯು ಭಗವಂತನ ಗೌರವವನ್ನು ಕಡಿಮೆ ಮಾಡುವುದಲ್ಲವೇ? ಅಸಹಾಯ ಶೂರನೆನಿಸಿ, ಮಹಾಭಾರತ ಯುದ್ಧದಲ್ಲಿ ಕೃಷ್ಣಸಖನಾಗಿ, ದಿವ್ಯಶಕ್ತಿ ಪಡೆದು ದುಷ್ಟನಿರ್ನಾಮ ಮಾಡುವ ಮಹಾಕಾರ್ಯದಲ್ಲಿ ನೆರವಾದ ಅರ್ಜುನನಿಗೆ, ಕೊನೆಯಲ್ಲಿ ಗಾಂಡಿವವನ್ನೆತ್ತಲೂ ಆಗಲಿಲ್ಲವೆಂದರೆ ಅರ್ಥವೇನು? ಅರ್ಜುನನ ಅವಹೇಳನ ಇದು! ಕೃಷ್ಣಪುತ್ರರ ಗತಿಯೂ, ಮದ್ಯಪಾನದಿಂದ ಆ ವಂಶವೇ ನಾಶವಾಯಿತೆಂಬುದೂ, ಮಹಾಪುರುಷರ ಪುಣ್ಯಾತ್ಮರ ಗೌರವಕ್ಕೆ ತಕ್ಕುದಲ್ಲ! ಈ ಕಥೆಯನ್ನು ಬರೆದದ್ದರಿಂದ ಭಗವಂತನ ಮಹಿಮೆಗೆ ಕುಂದಾಯಿತು - ಎಂಬುದೇ ಈ ಇನ್ನೊಂದು ದೃಷ್ಟಿ.

ಇದಕ್ಕೆ ಸಂಕ್ಷೇಪವಾಗಿ ಈ ರೀತಿ ಇಲ್ಲಿ ಉತ್ತರಿಸೋಣ! ಮೊದಲನೆಯದಾಗಿ ವ್ಯಾಸರೇ ಬರೆದ ಈ ಕಥೆಯಲ್ಲಿ ಈ ಆಕ್ಷೇಪ ಎತ್ತುವವರು ವ್ಯಾಸರ ಬಗೆಗೇ ಆಕ್ಷೇಪ ಎತ್ತಿದಂತಾಗುವುದು. ಎರಡನೆಯದಾಗಿ, ಭಗವಂತನ ಗೌರವ, ಮಹಿಮೆ, ಮಹಾತ್ಮವನ್ನು ಎತ್ತಿಹಿಡಿದು ಘೋಷಿಸುವುದೇ ಮೂಲಕೃತಿಯ (ವಾಸುದೇವಸ್ಯ ಮಹಾತ್ಮ್ಯಂ) ಉದ್ದೇಶ್ಯವಿರುವಂತೆ, ಇಲ್ಲೂ ಅದೇ ಇದೆ ಎಂದು

ಮನಗಾಣಬೇಕಾಗಿ ವಿನಂತಿ. ಈ ಲೇಖಕನೂ ಶ್ರೀಕೃಷ್ಣ ಭಕ್ತನೇ! ದೇವರು ಮಾನವನಾಗಿ "ಇಳಿದು" (ಅವತರಿಸಿ) ಬರುವುದೇ ಅವನ ಘನತೆಗೆ ಕಡಿಮೆಯೆಂದು ಭಾವಿಸಿ ಅವೆಲ್ಲವನ್ನೂ "ಬರೀ ಮಾಯೆ, ಇಂದ್ರಜಾಲ, ಮೋಡಿ" ಎಂದೇ ವಿವರಿಸಿ ಬರೆದ ಭಾಷ್ಯಗಳೂ ಇವೆ!! ಈ ಮಡಿವಂತಿಕೆಯಿಂದ, ಈ ವಿವರಣಕಾರರು "ಅವತಾರ"ವನ್ನು ನಂಬಿದವರ ಸಾಲಿಗೆ ಸೇರುವರೋ, ನಂಬದವರ-ಶಿಶುಪಾಲ, ದುರ್ಯೋಧನಾದಿಗಳ- ಸಾಲಿಗೆ ಸೇರುವರೋ ಎಂಬುದನ್ನು ವಾಚಕರೇ ನಿರ್ಧರಿಸಿಕೊಳ್ಳಲಿ! "ಅವಜಾನನ್ತಿ ಮಾಂ ಮೂಢಾ: ಮಾನುಷೀಂ ತನುಮಾಶ್ರಿತಂ" ಎಂಬ ಶ್ರೀಕೃಷ್ಣೋಕ್ತಿಗೆ "ಪಾತ್ರ"ರಾರು? ಅವತಾರತತ್ತ್ವವಿದರೊ? ಅಪಲಾಪಕಾರರೋ? ಇಳಿದುಬಂದರೆ "ಬರೀ ಮಾನವನಾಗಿ ಹೋದ!" ಎನ್ನುವುದೂ, ಬಾರದೇ ಇದ್ದರೆ "ಅವನೇ ಇಲ್ಲ!" ಎಂಬುದೂ ಯಾರ ರೀತಿ? ಇತಿಹಾಸದ ತಿರುವುಗಳಲ್ಲಿ ಸಾಕ್ಷಾತ್ತಾಗಿಯೇ ಭಾಗವಹಿಸುವ ಸರ್ವೇಶ್ವರನ ಹೃದಯವೆಂಥದು? ಸುಲಭವಾಗಿ, ಭಕ್ತರ ಅಭಕ್ತರ ಕಂಗಳಿಗೂ ಗೋಚರನಾಗಿ ನಿಂತು, ಅತಿಮಾನುಷ ವ್ಯಾಪಾರಗಳನ್ನೂ, ಮಾನುಷ ಸಹಜವೆಂಬಂತೆಯೇ ಮಾಡಿ, ಮೆರೆದು, ಇತಿಹಾಸಕ್ಕೆ ಹೊಸ ತಿರುವು ಕೊಟ್ಟು ಸಂರಕ್ಷಿಸುವ ಭಗವಂತನ ಸೌಲಭ್ಯವನ್ನು ಅರಿಯಲು ಯತ್ನಿಸದೆ, ಸುಮ್ಮನೆ 'ಪರತ್ವ'ವನ್ನೇ (ಅವನು ದೊಡ್ಡವನು, ದೂರದವನು ಎಂಬುದನ್ನೇ) ಜಪ ಮಾಡುತ್ತಾ ಕೂಡುವ ಬಗೆಯ ಭಕ್ತರಿಗೆ, ಸೌಲಭ್ಯದ ಪರಾಕಾಷ್ಠೆಯಾದ ಅವತಾರತತ್ತ್ವದಿಂದಾಗಬೇಕಾದುದೇನಿದೆ? ಗೊಲ್ಲರ ಕುಲದಲ್ಲಿ ಬೆಳೆದುದೂ, ಬಂದೀಖಾನೆಯಲ್ಲಿ ಜನಿಸಿದುದೂ, ಅಧಿಕಾರವನ್ನು ಬಯಸದೆ, ಸಜ್ಜನರ ಸೇವಕನಾಗಿ ನಡೆದುದೂ, ದೌತ್ಯ, ಸಾರಥ್ಯ ಮಾಡಿದುದೂ, ವಿದುರನ ಮನೆಯಲ್ಲಿ ಉಂಡುದೂ, ಗೋವಲರೊಡನೆ ತಂಗಳುಂಡುದೂ, ಸ್ನಾನ ಜಪತಪ ಸಂಧ್ಯೆ ತಿಳಿಯದ ಮುಗ್ಧ ಆಭೀರಸ್ತ್ರೀಯರ ಪ್ರೀತಿಗೆಟುಕಿದುದೂ, ಜ್ಞಾನಿಗಳೆಂಬ ಬೀಗಿನ ಬ್ರಾಹ್ಮಣರ ತಿಳುವಳಿಕೆಗೆ ಬಾರದುದೂ, ಕೊನೆಗೆ ದುರಾಚಾರದ ತನ್ನವಂಶದವರಿಗೇ ಅರ್ಥವಾಗದೆ, ಅವರನ್ನು ಮುಗಿಸಿದ್ದೂ, ಭಕ್ತನೇ ಆಗಿದ್ದರೂ, ಗರ್ವಿಯಾದ ಅರ್ಜುನನ ಗರ್ವಭಂಗ ಮಾಡಿದುದೂ, ನಿರ್ವಿಕಾರನಾಗಿ ತನ್ನ ಪರಂಜ್ಯೋತಿಗೆ ತೆರಳಿದುದೂ - ಆದ ಈ ಕೃಷ್ಣ ಕಥೆಯಲ್ಲಿ ಮನಕರಗದವರು ಎಂಥ ಭಕ್ತರು? ಈ ಲೋಕವು ತುಚ್ಛವಲ್ಲವೆಂದೂ, ತನ್ನನ್ನರಿಯಲು, ಸೇರಲು, ಇದು ಸಾಧನಭೂಮಿಯೆಂದೂ ಬೋಧಿಸಿ, ಆಚರಿಸಿ ತೋರಿಸಿದ ಈ ಅವತಾರದ ಹೃದಯವನ್ನೇ ಅರಿಯದೆ, ಸುಮ್ಮನೆ ಪೀಠದ ಎತ್ತರಕ್ಕೆ ಅವನನ್ನಿಟ್ಟು ಎಷ್ಟು ಕುಂಕುಮ, ಅರಿಶಿಣ, ಹೂಗಳಿಂದ, ಧೂಪದೀಪದಿಂದ ಅರ್ಚಿಸಿದರೇನು ಫಲ? ಭಾಗ್ಯ? ದೇವರು ಹತ್ತಿರ ಬಂದೊಡನೆ ಭಯಪಡುವ ಭಕ್ತರಿಗೆ ಏನೆನ್ನೋಣ? "ಅವತಾರ ನಿಮಗಲ್ಲ!" ಎಂದೇ ಅಲ್ಲವೇ? ಹತ್ತಿರದ ಅವನನ್ನು ಪ್ರೀತಿಸಿ, ಅರಿತು, ಹೃದಯದಲ್ಲಿ ಸ್ಥಾನ ಕೊಡುವುದೇ ನಿಜವಾದ ಪೂಜೆ ಅಲ್ಲವೇ? ಇದು ಮಾಡಿ ಆದ ಮೇಲೆ ಅರಿಶಿಣ-ಕುಂಕುಮಗಳಿಗೆ ಅವಕಾಶ ನಿಂತರೆ ತಪ್ಪೇನು?

ಶ್ರೀಕೃಷ್ಣಾವತಾರದ ಕಾಲದಿಂದ ಇಂದಿನವರೆಗೆ ಈ ಮರ್ಮವರಿಯದ "ಭಕ್ತ"ರೂ ಕೃಷ್ಣದ್ವೇಷಿಗಳೂ ಒಂದೇ ಸಮ, ಒಂದೇ ರೀತಿ ಇರುವುದೇ ವಿಚಿತ್ರ!

"ಶ್ರೀಕೃಷ್ಣಾವತಾರ ಕಾಲದಲ್ಲಿ ನಾನು ಇರಲಿಲ್ಲ!" ಎಂದು ನೊಂದುಕೊಳ್ಳುವ ಭಕ್ತ ಹೃದಯದ ಭಾಗ್ಯಶಾಲಿಗಳ ಹೃದಯಕ್ಕೆ ಈ ಕಾದಂಬರಿ, ಆ ಕಾಲದ ಒಂದು ಚಿತ್ರವನ್ನು ಸ್ವಲ್ಪಮಟ್ಟಿಗಾದರೂ ತಂದುಕೊಟ್ಟರೆ ನಾನು ಧನ್ಯ! ನನಗೆ ಇನ್ನೇನು ಬೇಕು?

ಶ್ರೀ ಕೆ. ಶಾಮರಾಯರು, ಶ್ರೀ ಎಸ್.ವಿ. ಜೋಷಿ ಮೊದಲಾದ ಪತ್ರಿಕೆಯ ನಿರ್ವಾಹಕ ಕಾರ್ಯಕರ್ತರು ಈ ಕೃತಿಯನ್ನು ಧಾರಾವಾಹಿಯಾಗಿಯೂ, ಸ್ವತಂತ್ರ ಪುಸ್ತಕ ರೂಪದಲ್ಲೂ, ಹೊರತರುವಲ್ಲಿ ಅಪಾರಶ್ರದ್ಧೆಯನ್ನೂ, ನನ್ನಲ್ಲಿ ತುಂಬು ಗೌರವವನ್ನೂ ತೋರಿಸಿರುವುದಲ್ಲದೆ, ಯೋಗ್ಯವಾಗಿ ಸಂಮಾನಿಸಿಯೂ ಇದ್ದಾರೆ! "ತೃಪ್ತೋಽಸ್ಮಿ", "ಧನ್ಯೋಽಸ್ಮಿ".

ಕೃತಜ್ಞತೆ ತೋರಿಸುವ ದಾರಿ ಹುಡುಕುತ್ತಿರುವಾಗ, ಇದೇ ಈಗ ಬರೆದು ಮುಗಿಸಿದ "ಶ್ರೀ ರಾಮಾವತಾರ ಮುಗಿಯುತ್ತಾ ಬಂದಾಗ!" ಎಂಬ ಶ್ರೀ ರಾಮಾವತಾರವನ್ನು ಕುರಿತ ಇದೇ ಮಾದರಿಯ ಇನ್ನೊಂದು ಧಾರಾವಾಹಿಯನ್ನು ಸ್ವೀಕರಿಸಿ, ಸದ್ಯದಲ್ಲೇ ಪ್ರಕಟಿಸುವ ಗೌರವ ತೋರಿದ್ದಾರೆ!! **"The reward for good work is more work"** ಎಂಬ ಆಂಗ್ಲ ಗಾದೆಯೊಂದಿದೆ! (ಒಳ್ಳೆಯ ಕೆಲಸಕ್ಕೆ ಪ್ರತಿಫಲವೆಂದರೆ, ಹೆಚ್ಚು ಹೆಚ್ಚು ಕೆಲಸ ಕೊಡುವುದು, ಅಥವಾ ಪಡೆಯುವುದು" ಎಂದರ್ಥ!" ಇಂಥ ಕೆಲಸ ಮತ್ತೆ ಮತ್ತೆ ನನ್ನ ಪಾಲಾದರೆ, ಇಹಪರಗಳಲ್ಲಿ ಎಂಥ ಸಾರ್ಥಕ್ಯ!

ಗ್ರಂಥಕ್ಕೆ ಮುನ್ನುಡಿ ಬರೆದು ಕೊಟ್ಟು, ಆತ್ಮೀಯವಾಗಿ, ಸಹೃದಯರಾಗಿ ಸ್ಪಂದಿಸಿ, ಸೌಜನ್ಯ ತೋರಿದ ಹಿರಿಯರು ಶ್ರೀ ಎನ್ಕೆ ಅವರು ನನ್ನಲ್ಲಿ ತುಂಬಾ ವಾತ್ಸಲ್ಯವುಳ್ಳವರು. "ಪ್ರೀತಿ ಇರುವಲ್ಲಿ ತಪ್ಪು ಕಾಣಿಸದು" ಎಂಬುದು ವಾತ್ಸಲ್ಯದ ಅರ್ಥ! ಸ್ವಯಂ ಕತೆಗಾರರೂ, ಕಾದಂಬರಿಗಾರರೂ, ಈ ಕಲೆಯಲ್ಲಿ ಸಿದ್ಧಹಸ್ತರೂ, ಸಿದ್ಧಪುರುಷರೂ ಆದ ಈ ಮಹಾನುಭಾವರು ಈ ಲೇಖಕನ ಈ ಸಾಹಸದ ಕಾದಂಬರಿಗೆ ಅಪೂರ್ವವೂ ಅದ್ಭುತವೂ, ಮಹಾಪ್ರವೇಶ ರೂಪವೂ ಆದ ಈ ಸುಂದರ ಮುನ್ನುಡಿ ಬರೆದು ಕೊಟ್ಟು ನನ್ನನ್ನು ಪ್ರೋತ್ಸಾಹಿಸಿದ್ದಾರೆ! ಉದ್ಯೋಗದಿಂದ ನಿವೃತ್ತಿಯಾದ ಮೇಲೆ ನಾನು ಬರೆದ ಈ ಕಾದಂಬರಿಗೆ, ಅದೇ ಕೃಷಿಯಲ್ಲಿ ನಿಷ್ಣಾತರಾಗಿರುವ, ಖ್ಯಾತನಾಮರೊಬ್ಬರು ಹೀಗೆ ಆಶೀರ್ವಾದ ಬರೆದದ್ದು ನನಗೇ ಭಾಗ್ಯವಾದರೂ ಒಂದು ಬಗೆಯ ಸಂಕೋಚವೂ ಇದೆ! ಕಥಾಸಂವಿಧಾನ, ಪಾತ್ರಕಲ್ಪನೆ, ಸಂಭಾಷಣೆಗಳು, ಸೂತ್ರಪೋಣಿಕೆ ಮೊದಲಾದ ತಾಂತ್ರಿಕ ವಿಧಾನಗಳಲ್ಲಿ ಇರಬಹುದಾದ ನ್ಯೂನತೆಗಳನ್ನು ಕಾಣದೆ, ಇರಬಹುದಾದ ಗುಣಾಂಶಗಳನ್ನು ಎತ್ತಿತೋರಿರುವುದು ಅವರ ಹಿರಿತನಕ್ಕೆ ಸಾಕ್ಷಿ. ಅವರಿಗೆ 'ವಂದನೆಗಳು' ಎಂಬುದು ತೀರ ಅತೃಪ್ತಿಯ ಮಾತಾದರೂ ತುಂಬು ಹೃದಯದಿಂದ ಹೇಳುತ್ತಿರುವೆ, ಬೇರೆ ಮಾತು ಸಿಗದೆ!

ಲೋಕ ಶಿಕ್ಷಣ ಟ್ರಸ್ಟಿನ ಪದಾಧಿಕಾರಿಗಳಿಗೆ ನಾನು ಸದಾ ಕೃತಜ್ಞನಾಗಿರಬೇಕು. ನಾನು ಹುಟ್ಟಿ ಬೆಳೆದುದು ಬೆಂಗಳೂರು ಮೈಸೂರು ಜಿಲ್ಲೆಗಳಲ್ಲಾದರೂ, ಉದ್ಯೋಗ ಮಾಡಿದ್ದೂ, ವ್ಯಕ್ತಿತ್ವ ರೂಪಿಸಿಕೊಂಡಿದ್ದು ಧಾರವಾಡದಲ್ಲಿ, ಉತ್ತರ ಕರ್ನಾಟಕದಲ್ಲಿ. ಇತರರ ಗುಣಗಳನ್ನು ಕಂಡು, ಗೌರವಿಸಿ, ಪ್ರೋತ್ಸಾಹಿಸಿ, ಒಳ್ಳೆಯ ಮಾತಾಡುವ ಸ್ವಭಾವ ಧಾರವಾಡದ, ಉತ್ತರ ಕರ್ನಾಟಕದ ವೈಶಿಷ್ಟ್ಯ! ಪ್ರವಚನಗಳಿಗೆ ಸುಮಾರು ಮೂವತ್ತು ವರ್ಷಗಳಿಗೂ ಮಿಕ್ಕು ನನಗೆ ಪ್ರೋತ್ಸಾಹ ಕೊಟ್ಟ ಈ ಕನ್ನಡದ ನೆಲ, ಬರಹಗಳಿಗೂ ಅಷ್ಟೇ ಕಾಲದಿಂದ ಒತ್ತಾಸೆ ನೀಡುತ್ತಾ ಬಂದಿದ್ದು, ಪ್ರಕೃತ ಕಾದಂಬರಿಯು ಉತ್ತರ ಕರ್ನಾಟಕದ ಮೂಲದ್ದೇ ಆದ, ಸರ್ವಸಾಮಾನ್ಯವಾದ ವಾರ ಪತ್ರಿಕೆ, 'ಕರ್ಮವೀರ'ದ ಮೂಲಕವೂ, ಈಗ ಲೋಕ ಶಿಕ್ಷಣ ಟ್ರಸ್ಟಿನ ಮೂಲಕವೂ ಪ್ರಕಟವಾಗುತ್ತಿರುವ ಈ ಔಚಿತ್ಯವನ್ನು ಎತ್ತಿ ತೋರುತ್ತಿದೆ ಅಲ್ಲವೇ?

ಗ್ರಂಥದ ಮಾತೃಕೆಯನ್ನು ಓದಿ ಸಂತೋಷಿಸಿ, ಪ್ರೋತ್ಸಾಹಿಸಿದ ಮಿತ್ರ-ಪ್ರಾಚಾರ್ಯ. ಪ್ರೊ. ಶ್ರೀ ಎ.ಎಂ. ಜಾಲಿಹಾಳ ಅವರಿಗೂ, ಇದನ್ನು ಬರೆಯಲು ಮನೆಯಲ್ಲಿ ಸೂಕ್ತ ವಾತಾವರಣ ಕಲ್ಪಿಸಿ ಸಹಕರಿಸಿದ ನನ್ನ ಶ್ರೀಮತಿಗೂ, ಪ್ರಕಟಿತವಾಗುತ್ತಿದ್ದಂತೆ ಮೆಚ್ಚಿ ಅಭಿನಂದಿಸಿ ಬರೆದ ನೂರಾರು ವಾಚಕರಿಗೂ, ನನ್ನ ಕೃತಜ್ಞತೆಗಳು ಸಲ್ಲಬೇಕು.

ಈ ಲೇಖನ ಕೈಂಕರ್ಯದಿಂದ ಭಗವಾನ್ ಶ್ರೀಕೃಷ್ಣನು ತುಷ್ಟನಾಗಿ ಕನ್ನಡ ವಾಚನಲೋಕದಲ್ಲಿ, ಲೇಖನ ಲೋಕದಲ್ಲಿ ಸದಭಿರುಚಿಯನ್ನು ಬೆಳೆಸಲೆಂದು ಹಾರೈಸುವುದು ಅನುಚಿತವಾಗಲಾರದಲ್ಲವೇ?

ಇಂತು ಕನ್ನಡಿಗರಡಿಯಾಳು

**ಪ್ರೊ. ಕೆ.ಎಸ್. ನಾರಾಯಣಾಚಾರ್ಯ**

# ಪ್ರಕಾಶಕರ ಮಾತು

ಶ್ರೀಕೃಷ್ಣನ ಕಥೆ ಲೋಕಪ್ರಿಯ. ಅವನ ಬಾಲ್ಯದ ತುಂಟಾಟ, ಯೌವನದ ಹೋರಾಟ, ರಾಜಕೀಯ ಕೌಶಲ, ತಂತ್ರ, ದೂರದೃಷ್ಟಿ ಎಲ್ಲರಿಗೂ ಚಿರಪರಿಚಿತ.

ಶ್ರೀಕೃಷ್ಣನ ಪಾತ್ರವೇ ಒಂದು ಅದ್ಭುತ. ತನ್ನ ಬಾಲಲೀಲೆಗಳಿಂದ ಜನಮನ ರಂಜಿಸಿದ ಕೃಷ್ಣ ಶೈಶವಾವಸ್ಥೆಯಿಂದಲೇ ದುಷ್ಟ ಶಿಕ್ಷಣ-ಶಿಷ್ಟ ರಕ್ಷಣ ತತ್ವವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡ ಅಂದಿನ ರಾಜಕೀಯದ ಸೂತ್ರಧಾರನೆನಿಸಿ ಅಮರ ಭಗವದ್ಗೀತೆಯ ಮೂಲಕ ಜೀವನ ಧರ್ಮವನ್ನು ಬೋಧಿಸಿದ. ಸಾತ್ವಿಕಶಕ್ತಿ ತಾತ್ವಿಕ ಪ್ರೇರಣೆ ನೀಡಿದ ಕೃಷ್ಣ ಅಗತ್ಯ ಸಂದರ್ಭಗಳಲ್ಲಿ ನಯವಾದ ತಂತ್ರಗಾರಿಕೆ ತೋರಿದ. ಜನಮಾನಸದಲ್ಲಿ ಅಚ್ಚಳಿಯದ ನಿಚ್ಚಳ ಪ್ರಭಾವ ಬೀರಿದ.

ಕನ್ನಡ ಸಾಹಿತ್ಯದಲ್ಲಿ ಕೃಷ್ಣನ ಬದುಕಿಗೆ ಸಿಕ್ಕಷ್ಟು ಪ್ರಚಾರ ಅವನ ಅಂತಿಮ ಗಳಿಗೆಗೆ ಸಿಕ್ಕಿಲ್ಲ. ಬದುಕಿನುದ್ದಕ್ಕೂ ಹೋರಾಟ ನಡೆಸಿದ ಕೃಷ್ಣನ ಕೊನೆಯ ಗಳಿಗೆಗಳು ಹೇಗಿದ್ದವು ಎಂಬ ಕುತೂಹಲಕಾರೀ ಪ್ರಶ್ನೆಗೆ ಪ್ರೊ. ಕೆ.ಎಸ್. ನಾರಾಯಣಾಚಾರ್ಯರು 'ಶ್ರೀಕೃಷ್ಣಾವತಾರದ ಕೊನೆಯ ಗಳಿಗೆಗಳು' ಎಂಬ ತಮ್ಮ ಈ ಕೃತಿಯಲ್ಲಿ ಸೂಕ್ತ ಉತ್ತರ ನೀಡಿದ್ದಾರೆ.

ತಮ್ಮ ಆಧ್ಯಾತ್ಮಿಕ ಗ್ರಂಥಗಳು, ವೇದಾಂತ ಪಾಂಡಿತ್ಯದ ಮೂಲಕ ವಿದ್ವಜ್ಜನರಿಗೆ ಚಿರಪರಿಚಿತರಾಗಿರುವ ಆಚಾರ್ಯರು ಸರಳ ಸುಂದರ ಹಾಗೂ ಮೌಲಿಕ ಬರಹಗಳ ಮೂಲಕ ಶ್ರೀಸಾಮಾನ್ಯರ ಮೆಚ್ಚುಗೆಗೂ ಪಾತ್ರರಾಗಿದ್ದಾರೆ.

ಸಂಕೀರ್ಣ ಘಟನೆಗಳನ್ನು ಸರಳವಾಗಿ ಚಿತ್ರಿಸಿ ಅದರ ಮಹತ್ವವನ್ನು ಮನದುಂಬುವಂತೆ ಬಿಂಬಿಸುವ ಕಲೆಯಲ್ಲಿ ಸಿದ್ಧಹಸ್ತರಾಗಿರುವ ಆಚಾರ್ಯರು ಸಾಮಾನ್ಯ ಗ್ರಹಿಕೆಯಲ್ಲಿ ರೂಢಿಗತವಾಗಿ ಉಳಿದು ಬೇರೂರಿರುವ ತಪ್ಪು ನಂಬಿಕೆ ಅಭಿಪ್ರಾಯಗಳನ್ನು ಸೈದ್ಧಾಂತಿಕವಾಗಿ ನಿರಾಕರಿಸಿ ನಿವಾರಿಸುವ ಎದೆಗಾರಿಕೆಯುಳ್ಳವರು. ಇದು ಅವರ ಆಳ ಅಧ್ಯಯನ, ಅವಿರತ ಸಂಶೋಧನೆ ಹಾಗೂ ಅನನ್ಯ ಆಧ್ಯಾತ್ಮಿಕ ನಿಷ್ಠೆಯ ಫಲ.

ಈಗಾಗಲೇ ರಾಮಾಯಣ, ಮಹಾಭಾರತ ಮಹಾಕಾವ್ಯಗಳ ಪಾತ್ರ ಪ್ರಪಂಚವನ್ನು ಕನ್ನಡಿಗರಿಗೆ ಪರಿಚಯಿಸಿರುವ ಆಚಾರ್ಯರ ಶ್ರೀಕೃಷ್ಣಾವತಾರದ 'ಕೊನೆಯ ಗಳಿಗೆಗಳು' ಕೃತಿಯನ್ನು ಕನ್ನಡಿಗರ ಕೈಗೆ ಒಪ್ಪಿಸುತ್ತಿರುವುದು ಲೋಕ ಶಿಕ್ಷಣ ಗ್ರಂಥ ಮಾಲೆಯ ಭಾಗ್ಯವೆಂದೇ ನಮ್ಮ ನಂಬಿಕೆ.

ಈ ಕೃತಿಯನ್ನು ನಮ್ಮ ಪ್ರಕಟಣೆಗಳಲ್ಲೊಂದಾದ 'ಕರ್ಮವೀರ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಲು ಹಾಗೂ ಪುಸ್ತಕ ರೂಪದಲ್ಲಿ ಹೊರತರಲು ಅನುಮತಿ ನೀಡಿದ ಪ್ರೊ. ನಾರಾಯಣಾಚಾರ್ಯರರಿಗೆ ನಮ್ಮ ಗ್ರಂಥಮಾಲೆ ಆಭಾರಿ.

ಕರ್ಮವೀರದಲ್ಲಿ ಬಿಡಿಬಿಡಿಯಾಗಿ ಬಂದ ಈ ಲೇಖನ ಮಾಲಿಕೆಯನ್ನು ಈಗ ಇಡಿಯಾಗಿಯೇ ಓದುಗರ ಕೈಗಿಡುತ್ತಿದ್ದೇವೆ. ನಮ್ಮ ಈ ಹಿಂದಿನ ಕೃತಿಗಳಿಗೆ ದೊರೆತ ಪ್ರೋತ್ಸಾಹವೇ ಇದಕ್ಕೂ ದೊರೆಯುವದೆಂಬ ಆಶಯ ನಮ್ಮದು.

**ಬಿ.ಡಿ. ಜತ್ತಿ**
ಅಧ್ಯಕ್ಷರು

ಬೆಂಗಳೂರು
೨೫-೮-೧೯೯೪

# ಕೃತಿ ಪರಿಚಯ

ಪ್ರೊ. ಕೆ.ಎಸ್. ನಾರಾಯಣಾಚಾರ್ಯರು ರಾಮಾಯಣ ಪ್ರವಚನಿಸಿ, ಅದರ ಪಾತ್ರ ಪ್ರಪಂಚ ಸಮೀಕ್ಷಿಸಿ 'ರಾಮಾಯಣಾಚಾರ್ಯ' ರೆಂಬ ವಾಚಕ ಪ್ರಿಯತೆ, ಖ್ಯಾತಿಗಳನ್ನು ಗಳಿಸಿದರು. ಅದೇ ರೀತಿ ಮಹಾಭಾರತ ಪಾತ್ರ ಚಿತ್ರಣ ವೈವಿಧ್ಯ ವೈಪುಲ್ಯಗಳ ಅಪೂರ್ವ ಆಯಾಮಗಳನ್ನು ನಿರ್ಮಿಸಿ 'ಬಾದರಾಯಣ' ಸ್ಥಾನ-ಮಾನ ಪಡೆದರು. ಈಗ ಈ ಅಪೂರ್ವ ಅತ್ಯಮೂಲ್ಯ ಭಾಗವತ ಪುನಃ ಸೃಷ್ಟಿಯಿಂದಾಗಿ 'ಶುಕಾಚಾರ್ಯ' ರೆಂಬ ಹೆಸರು ಪಡೆಯಲಿದ್ದಾರೆ. 'ವೇದ ಸಂಸ್ಕೃತಿ ಪರಿಚಯ'ದ ದಶ ಸಂಪುಟಗಳಿಂದಾಗಿ ಅವರ ವೇದ ಸಂಶೋಧನೆ, ಪಾಂಡಿತ್ಯಪೂರ್ಣ ಅರ್ಥೈಕೆಗಳು ವ್ಯಾಸ ಭಾಷ್ಯಕಾರರೆಂಬ ಮಟ್ಟಿಗೆ ಪ್ರಸಿದ್ಧಿ ಬೆಳೆಯಿಸಿದವು.

ಈ 'ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು' ಎಂಬ ವಿದ್ವತ್ ಪ್ರಚುರ ವಿದ್ಯುತ್ ಸಮ ಲೇಖನಾಂಕಗಳಿಂದ ಶ್ರೀಕೃಷ್ಣನ ಮಾನುಷ ನಾಟಕದ ಭರತ ವಾಕ್ಯವನ್ನು ಹೇಳ ಹೊರಟಿದ್ದಾರೆ. ಒಂದು ದೃಷ್ಟಿಯಿಂದ ಭಾಗವತದ ಮೇಲೆ ಪೂಜ್ಯ ಆಚಾರ್ಯರದು ಕೊನೆಯ ವಾಕ್ಯ **(Last word)** ಎಂಬರ್ಥದಲ್ಲಿಯೂ ಈ ಮೌಲಿಕ ಲೇಖಾಂಕ ಮಾಲಿಕೆ ಶ್ರೀಮದ್ ಭಾಗವತ ದರ್ಶನದ ಮೇಲೆ ಅಭೂತಪೂರ್ವ ಪ್ರಕಾಶ ಬೀರುತ್ತಿದೆ.

ಇಲ್ಲೀ ಚಿತ್ರಿತವಾಗಿರುವ ಶ್ರೀಕೃಷ್ಣನ ಮಾನುಷ ನಾಟಕ ದುಃಖಾಂತವಾಗಿದೆ. ಅದು ಎಷ್ಟು ಮಾನವೀಯವಾಗಿದೆಯೆಂದರೆ ಒಬ್ಬ ಅಸಹಾಯ ಶೂರನ ಅನಿವಾರ್ಯದ ದುರಂತಕ್ಕೆ ಕಂಬನಿ ಮಿಡಿಯುವ ರೀತಿಯಲ್ಲಿ ನಾವು ವ್ಯಥೆಪಡುತ್ತೇವೆ. ಮನಸ್ಸು ಮಾಡಿದ್ದರೆ ಕೃಷ್ಣನಿಗೆ ಈ ಮಾನುಷ ಸೀಮಿತಗಳನ್ನು ಮೀರಿ ನಿಲ್ಲುವುದು ಸಾಧ್ಯವಿತ್ತು. ಮನಸ್ಸು ಮಾಡಿದ್ದರೆ ದ್ರೌಪದಿಯ ಮಾನಭಂಗವನ್ನೂ ತಪ್ಪಿಸಬಹುದಾಗಿತ್ತು. ಅಭಿಮನ್ಯುವಿನ ಜೀವವನ್ನೂ ಉಳಿಸಬಹುದಾಗಿತ್ತು. ಒಂದೇ ಮಾತಿನಲ್ಲಿ ಕುರುಕ್ಷೇತ್ರದ ರಕ್ತಸ್ನಾನವನ್ನೇ ತಡೆಯಬಹುದಾಗಿತ್ತು. ದ್ವಾರಕೆಯ ಮುಳುಗಡೆಯನ್ನೂ ಯಾದವ ನಾಶವನ್ನೂ ಸ್ವಜನಮೃತಿ-ಸ್ವಮೃತಿಯನ್ನೂ ನಿಲ್ಲಿಸಬಹುದಿತ್ತು. ಆದರೆ ಹಾಗೆ ಮಾಡಲಿಲ್ಲ.

**"ಈಸು ಮಹಿಮೆಯ ಮರೆಸಿ ಲೋಕವಿಲಾಸ ಚೇಷ್ಟೆಯನನುಸರಿಸಿ**
**ನರ ವೇಷವನು ನಟಿಸಿದನು ಹರಿ, ಹೂಳಿದ ನಿಜೋನ್ನತಿಯ"**

ಎಂದು ಕುಮಾರವ್ಯಾಸನು ಹೇಳುವಂತೆ ಪೂರ್ತಿ ಮಾನುಷ ನಾಟಕವನ್ನಾಡುವುದಕ್ಕಾಗಿಯೇ ತನ್ನ ಮಹಿಮೆ, ಮಹತಿಗಳನ್ನು ತೋರಗೊಟ್ಟಿಲ್ಲ. ತನ್ನವರೆಂಬ ತನ್ನ ಭಕ್ತರಿಗೆ ಅಲ್ಲಲ್ಲಿ ಮಹಿಮಾವಲಂಬನ ಮಾಡಿದ್ದರೂ, ವಿಶ್ವರೂಪದರ್ಶನ ಮಾಡಿಸಿದ್ದರೂ ಉದ್ದಕ್ಕೂ ಭಾರತ-ಭಾಗವತ ಸೂತ್ರಧಾರಿಯಾಗಿ ನಾಟಕವನ್ನು ನಿರ್ವಹಿಸಿದ್ದಾನೆ.

ಕನ್ನಡ ವಿಶಾಲ ಸಾಹಿತ್ಯದಲ್ಲಿ ರಾಮಾಯಣ ಭಾರತಗಳಿಗೆ ಬಂದಿರುವ ಪ್ರಾಚುರ್ಯ ಭಾಗವತಕ್ಕೆ ಬಂದಿಲ್ಲ. ಕ್ರಿ.ಶ. ೧೫೩೦ ರ ಸುಮಾರು ಭಾಗವತ ಕಾವ್ಯವೊಂದು ಅವತಾರ ಮಾಡಿತ್ತು. ಆದರೆ ಇದರ ಕರ್ತೃ ಸದಾನಂದಯೋಗಿಯೋ ನಿತ್ಯಾತ್ಮ ಶುಕನೋ, ಚಾಟು ವಿಠ್ಠಲನೊ ಎಂಬುದೇ ಖಂಡಿತವಾಗಿ ಖಚಿತವಾಗಿ ನಿರ್ಧಾರಗೊಂಡಿಲ್ಲ.

**"ನಿರುಪಮಾಚ್ಯುತ ಕೃಷ್ಣರಾಯನ ಪರಮ ತೇಜಃ**
**ಪುಂಜವೇ ಚೇತರಸಿ..."**

ಗುರು ರೂಪವಾಗಿ ಭಾಗವತಾಂತರಂಗವನು ಧರೆಗೆ ಕನ್ನಡವಾಗಿ ತೆಗೆದುದ್ಧರಿಸಿ ಕಡೆ ಗಾಣಿಸಿದ-ಎಂದು ಕವಿ ಹೇಳಿಕೊಂಡಿದ್ದರೂ ಆತನ ಸಮಗ್ರ ಕಾವ್ಯ ಇನ್ನೂ ಸಂಪಾದಿತವಾಗಿ ಪ್ರಕಟಗೊಂಡಂತಿಲ್ಲ. ಪ್ರೊ. ಕೆ. ವೆಂಕಟರಾಮಪ್ಪನವರು ಕೆಲವು ಸ್ಕಂದಗಳನ್ನು ಮಾತ್ರ ಸಂಶೋಧನಾತ್ಮಕವಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ.

ನಮ್ಮ ನಚ್ಚಿನ ನಾರಾಯಣಾಚಾರ್ಯರು 'ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು' ಎಂಬ ಈ ಇಪ್ಪತ್ತು ಲೇಖಾಂಕ ಮಾಲಿಕೆಯಲ್ಲಿ ಭಾಗವತ ಕೃಷ್ಣ ಕಥೆಯನ್ನು ಶ್ರೀಕೃಷ್ಣ ಮಹಾತ್ಮೆಯನ್ನೂ, ಶ್ರೀಕೃಷ್ಣನ ಗೀತಾಬೋಧೆಯ ಸಾರಸರ್ವಸ್ವವನ್ನೂ ಹೊಸದೊಂದು ತಂತ್ರದ ಮೂಲಕ ನಮ್ಮ ಕಣ್ಮುಂದೆ ಹಿಡಿದು ನಾಟಕ ಮತ್ತೊಮ್ಮೆ ನಡೆಯುವಂತೆ ನುಡಿ ಮುತ್ತುಗಳಲ್ಲಿ ಪಡಿಮೂಡಿಸಿದ್ದಾರೆ. ಕನ್ನಡ ಸಾಹಿತ್ಯದ ಒಂದು ದೊಡ್ಡ ಕೊರತೆಯನ್ನು ನೀಗಿದ್ದಾರೆ, ಈ ಮಹತ್ಕೃತಿಯನ್ನು ನಮ್ಮ ಕೈಗೆ ನೀಡಿ.

ಲೇಖಕರು ಭಾಗವತದ ತತ್ವಜ್ಞಾನವು ಎಷ್ಟು ಶ್ರೇಷ್ಠವಾದದ್ದು ಎಂಬುದನ್ನು ಭಾಷ್ಯ ರೂಪದಲ್ಲಿ ವಿವೇಚಿಸಿರುವುದಲ್ಲದೆ ಪರಮ ಭಕ್ತರಾದ ಅಕ್ರೂರ-ಉದ್ಧವರಿಗೆ ಉಪದೇಶಾಮೃತವನ್ನು ನೀಡುವ ಮೂಲಕ, ಅರ್ಜುನನಿಗೆ ಗೀತೆ, ಅನುಗೀತೆ, ಅಣುಗೀತೆಗಳ ತರುವಾಯ ಮತ್ತೆ ಇಲ್ಲಿಯೂ ಬೋಧಿಸುವ ಮೂಲಕ ತೋರಿಸಿಕೊಟ್ಟಿದ್ದಾರೆ. ಶ್ರೀಕೃಷ್ಣನ ಬಾಲ-ಲೀಲೆಗಳಲ್ಲೂ ಉನ್ನತ ತತ್ವಾರ್ಥವಿದೆ. 'ಕಾಲಿಯಮರ್ದನ' ಎಂದರೆ ಬರೀ ಒಂದು ಹಾವಿನ ಹೆಡೆ ತುಳಿದದ್ದಷ್ಟೇ ಅಲ್ಲ, ತಾಮಸಿಗೆಯ ಕಾಮರೂಪೀ ಸರ್ಪವನ್ನೂ ಮೆಟ್ಟಿದನೆಂಬ ಧ್ವನಿ. ಪರಮ ಭಕ್ತೆಯರಾದ ಗೋಪೀಜನರೊಡನೆ ರಾಸಲೀಲೆ ಮಾಡಿದ್ದು 'ರಸ' ತತ್ವಕ್ಕೆ ಸಂಬಂಧಿಸಿದೆಯೇ ಹೊರತು, ರಾಜಸಕ್ಕೆ ಸಂಬಂಧಿಸಿಲ್ಲ. ಯಶೋದೆಗೆ ಎರಡು ಸಲ ಬಾಯಲ್ಲಿ ಬ್ರಹ್ಮಾಂಡ ತೋರಿ ತನ್ನ ಅವತಾರ ರಹಸ್ಯವನ್ನೇ ತಿಳಿಸುತ್ತಾನೆ. ಹೀಗೆ ಈ ಭಾಗವತ ನಾಟಕದ ಕೊನೆಯ ಅಂಕವನ್ನು ಅರ್ಥೈಸುತ್ತ ಫ್ಲಾಶ್‌ಬ್ಯಾಕ್ ರೂಪದಲ್ಲಿ ಸಂಪೂರ್ಣ ಭಾಗವತ ತಾತ್ಪರ್ಯವನ್ನು ತಿಳಿ ತಿಳಿಯಾಗಿ; ತೊಳೆ ತೊಳೆಯಾಗಿ, ತಿಳಿಹೇಳಿದ್ದಾರೆ ಈ ಅಭಿನವ ಶುಕಾಚಾರ್ಯರು.

ಮಹಾಭಾರತ ಯುದ್ಧ ಮುಗಿದು ೩೬ ವರ್ಷಗಳು ಸಂದಿವೆ ಎಂಬಲ್ಲಿಂದ ಆರಂಭವಾಗುತ್ತದೆ, ಈ ಕೃಷ್ಣಾವತಾರ ಮಾನುಷ ನಾಟಕದ ಕೊನೆಯ ಅಂಕ. ಧರ್ಮರಾಯನೇನೊ ನೆಮ್ಮದಿಯಿಂದ ಆಳುತ್ತಿದ್ದಾನೆ. ಋಷಿಗಳು ನಿರ್ವಿಘ್ನರಾಗಿ ತಪ ಆಚರಿಸುತ್ತಿದ್ದಾರೆ. ಆದರೆ ನಿತ್ಯಾನಂದಮಯ ಶ್ರೀಕೃಷ್ಣನಿಗೆ ಮಾತ್ರ ನೆಮ್ಮದಿ ಇಲ್ಲ! ಏಕೆ? ಇದೇ ಈ ಕೊನೆಯ ಗಳಿಗೆಯ ನಾಟಕದ ಬೀಜಾಂಕುರ. ಅವತಾರಿ ಶ್ರೀ ಕೃಷ್ಣನ ವಿಶ್ವಚಕ್ಷುವಿಗೆ ಪಾಂಡವರ ಸ್ವರ್ಗಾರೋಹಣ, ಯಾದವ ಸರ್ವನಾಶ, ಸ್ವ-ಅಂತ್ಯವೂ ಕೂಡ ಗೋಚರಿಸತೊಡಗಿದವು. ಕಲಿಯ ಪ್ರವೇಶವಾಗಿ ಆತನ ಕರಾಳ ಛಾಯೆ ಪಸರಿಸತೊಡಗಿತ್ತು. ಇನ್ನು ದ್ವಾಪರನು ಕಲಿಗೆ ಮಾರ್ಗಮಾಡಿ ಕೊಡಲಿ ಎಂದು ಶ್ರೀಕೃಷ್ಣನು ಆಲೋಚಿಸಿದ. ಉತ್ಪಾತಗಳು, ೩೬ ವರ್ಷಗಳ ಹಿಂದಿನ ಅಪಲಕ್ಷಣದ ಗ್ರಹಗತಿ-ತ್ರಯೋದಶಿ, ಚತುರ್ದಶಿ, ಅಮಾವಾಸ್ಯೆಗಳು-ತಿಥಿಗಳ ಹೆಚ್ಚು ಕಡಿಮೆಯಿಂದಾಗಿ ಒಂದೇ ದಿನ ಗೋಚರಿಸಲಿರುವುದನ್ನು ಮುಂಗಂಡ. ಅಂತೆಯೇ ಧರ್ಮಪತ್ನಿ ರುಕ್ಮಿಣಿಗೆ ಮುಂಬರುವ ಅನರ್ಥದ ಮುನ್ಸೂಚನೆಕೊಡುತ್ತಾನೆ. 'ಲೋಕ ನಿಯಮಗಳಿಗೆ ನಾವೂ ಬದ್ಧರು' ಎಂದು ಹೇಳುತ್ತಾನೆ.

ಮಹಾಭಾರತ ಯುದ್ಧದಲ್ಲಿ ಬದುಕಿ ಉಳಿದ ಕೃತವರ್ಮ ಸಾತ್ಯಕಿಯರನ್ನು ಅವರವರ ಅಹಂಕಾರ ಆಟವಾಡಿಸುತ್ತದೆ. ಸ್ಯಮಂತಕ ರತ್ನವನ್ನು ಸೂರ್ಯನಿಂದ ದಾನವಾಗಿ ಪಡೆದ ಸತ್ಯಭಾಮೆಯ ತಂದೆ ಸತ್ರಾಜಿತ, ಶ್ರೀಕೃಷ್ಣನ ಮೇಲೆಯೇ ಸಂಶಯತಾಳಿ ಅದನ್ನು ತಮ್ಮನಾದ ಪ್ರಸೇನನಿಗೆ ಒಪ್ಪಿಸುತ್ತಾನೆ. ಅಂತಿಮದಲ್ಲಿ ಅದು ಸಿಂಹನಿಂದ, ಜಾಂಬುವಂತನಿಂದ ಕೃಷ್ಣನಿಗೆ, ಕೊನೆಗೆ ಅಕ್ರೂರನ ವಶವಾಗುವವರೆಗೆ ಎಷ್ಟೋ ಅಹಿತ ಘಟನೆಗಳು ನಡೆದು ಹೋಗುತ್ತವೆ. ಜಾಂಬುವತಿಯಿಂದ ಶ್ರೀ ಕೃಷ್ಣನಿಗೆ ಮಗನಾಗಿ ಜನಿಸಿದ ಸಾಂಬ ಇತರ ಯಾದವರನ್ನು ಕೂಡಿಕೊಂಡು, ಗೇಲಿ, ಸ್ವೈರಾಚಾರ, ಮದ್ಯ, ಜೂಜು ಸ್ವಜನ ಕಲಹದ ಕಿಡಿಗಳನ್ನು ಹುಟ್ಟಿಸುತ್ತಾನೆ. ದ್ವಾರಕೆಯು ಮುಳುಗಡೆಯಾಗುತ್ತದೆಂಬುದನ್ನು ಕಂಡುಕೊಂಡ ಶ್ರೀಕೃಷ್ಣ ಸರ್ವಯಾದವರನ್ನೂ ಅವರವರ ಸಿರಿಸಂಪತ್ತಿನೊಡನೆ ಪ್ರಭಾಸದ ಬಳಿಯ ಪಿಂಡಾರಕಕ್ಕೆ ಕಳುಹಿಸುತ್ತಾನೆ. ಸಾಂಬ ಮತ್ತು ಕುಚೋದ್ಯಗಾರ ಯಾದವರು ಸೇರಿ ದೂರ್ವಾಸರನ್ನು ಕೆಣಕಿ ಅವರ

ಶಾಪಕ್ಕೆ ಗುರಿಯಾದ ಪರಿಣಾಮವಾಗಿ ಪಿಂಡಾರಕದಲ್ಲಿ ಯಾದವರ ದುಷ್ಕೃತ್ಯಗಳು ಯಾದವೀ ಕಲಹದ ಜ್ವಾಲೆಯನ್ನು ಹೊತ್ತಿಸಿ ಅವರನ್ನು ಉರಿದು ಬಿಡುತ್ತವೆ.

ಇನ್ನು ಆರಂಭವಾಗುತ್ತದೆ ಕೃಷ್ಣನ ಕೊನೆಗಾಲ. ಅರ್ಜುನನಿಗೆ ಹೇಳಿಕಳಿಸಿ ತಾನು ಪಿಂಡಾರಕಕ್ಕೆ ಅಂತಿಮ ಮಹಾ ಪ್ರಯಾಣ ಹೊರಡುತ್ತಾನೆ. ನಡುವೆ ತನ್ನ ದಿವ್ಯ ರಥವನ್ನು ಅಗ್ನಿ ದೇವನಿಗೆ ಅರ್ಪಿಸಿ ಬಿಡುತ್ತಾನೆ. ಹೀಗಾದ ಮೇಲೆ ತನ್ನ ಮಹಿಮೆಯನ್ನೇ ಕಳೆದುಕೊಂಡವನಾಗಿ ಅಲೆಯುತ್ತಾನೆ. ಬಲಭದ್ರನ ಚಮತ್ಕಾರಿಕ ಅಂತ್ಯವನ್ನು ವೀಕ್ಷಿಸುತ್ತಾನೆ. ಆತನ ದೇಹದಿಂದ ಶ್ವೇತ ಶೇಷವೊಂದು ಹೊರಬಿದ್ದು ಸಮುದ್ರ ಪ್ರವೇಶ ಮಾಡುತ್ತದೆ. ಎಂತಹ ದಿವ್ಯ ಸಂಕೇತ!

ಮರದಡಿಯಲ್ಲಿ ವಿಶ್ರಮಿಸುತ್ತ ಮರಣದ ನಿರೀಕ್ಷೆಯಲ್ಲಿದ್ದ ಕೃಷ್ಣನು ಆತ್ಮ ನಿರೀಕ್ಷಣೆ ಮಾಡಿಕೊಳ್ಳುತ್ತಾನೆ! ತಾನು ತನ್ನ ಬದುಕಿನ ಬಟ್ಟೆಯಲ್ಲಿ ಎಲ್ಲೆಲ್ಲಿ ತಪ್ಪು ಹೆಜ್ಜೆ ಇಟ್ಟೆ-ಎಂಬುದನ್ನು ನೆನಪಿಸಿಕೊಳ್ಳುತ್ತ ಅದಕ್ಕಾಗಿ ಪರಿತಪಿಸುತ್ತಾನೆ, ಪಶ್ಚಾತ್ತಾಪ ಪಡುತ್ತಾನೆ. ದೈವದ ದಾಯವೇನು ನಿಯತಿಯ ನಿಯಮವೇನು ಎಲ್ಲಾ ಲೆಕ್ಕ ಹಾಕುತ್ತಾನೆ. ತನ್ನ ತಾಯನ್ನು ನೆನೆದುಕೊಂಡಾಗ ಮೊದಲು ದೇವಕಿ ಪ್ರತ್ಯಕ್ಷಳಾಗುತ್ತಾಳೆ. ಸೆರೆಮನೆಯಲ್ಲಿ ಸಿಲುಕಿದ ತಂದೆ ತಾಯಿಗಳ ಕ್ಷಮೆ ಕೋರುತ್ತಾನೆ- ಅವರನ್ನು ತ್ಯಜಿಸಿ ಯಶೋದೆಯ ಮಡಿಲಲ್ಲಿ ಬಿದ್ದು ಬೆಳೆದು ಬಂದುದಕ್ಕೆ. ವೃದ್ಧ ವಸುದೇವ ದೇವಕಿಯರು ಪಿತೃ ವಾತ್ಸಲ್ಯದಿಂದಲೇ ಈ ಅವತಾರಿಯನ್ನು ಕಂಡು ಆನಂದಿಸುತ್ತಾರೆ. ದುಃಖಿಸುತ್ತಾರೆ. ಕರ್ಣನೂ ಈ ಸನ್ನಿವೇಶದಲ್ಲಿ ಕಾಣಿಸಿಕೊಂಡು ತನ್ನ ಪರಮಾತ್ಮ ಭಕ್ತಿ, ಪಶ್ಚಾತ್ತಾಪ ಭಾವಗಳಿಂದ ನಮ್ಮ ಒಳಗಣ್ಣು ತೆರೆಯುತ್ತಾನೆ. ಯಶೋದೆ ಪ್ರತ್ಯಕ್ಷವಾದಾಗ ಮತ್ತೊಮ್ಮೆ ಬಾಯಿ ತೆರೆದು ವಿಶ್ವದರ್ಶನ ಮಾಡಿಸುತ್ತಾನೆ. ಬಲರಾಮನ ಶೇಷಾಂತ್ಯವನ್ನು ನೋಡುತ್ತಾಳೆ ಯಶೋದೆ. ಮೂರನೆಯ ತಾಯಿಯೊಬ್ಬಳೂ ಕಾಣಿಸಿಕೊಳ್ಳುತ್ತಾಳೆ! ಯಾರು ಬಲ್ಲಿರಾ? ಬಾಲಗೋಪಾಲನಿಗೆ ವಿಷದ ಮೊಲೆಯುಣಿಸಿದ ಪೂತನಿ! ಬಾಲಕೃಷ್ಣನನ್ನು ಕಂಡಾಗ ಪೂತನಿಗೆ ತನ್ನ ಸತ್ತ ಮಗನ ನೆನಪಾಗಿ ಹಾಲು ತೊರೆದು ಬಂತಂತೆ! ಅದರ ಒಂದೊಂದು ಹನಿಯಲ್ಲಿ ವಾತ್ಸಲ್ಯದ ಬಿಂದುಗಳನ್ನು ಸವಿದನಂತೆ! ಪೂತನಿ ಆಮೇಲೆ ಕಂಸನ ಗುಲಾಮಗಿರಿಯಿಂದ ಮುಕ್ತಿ ಪಡೆದು ಅಗ್ನಿ ಸಂಸ್ಕಾರ ಹೊಂದಿದಾಗ ಆಕೆಯ ಮೃತದೇಹವೆಲ್ಲಾ ಪರಿಮಳಮಯವಾಗುತ್ತದೆ. ಆ ಪಶ್ಚಾತ್ತಾಪ ಪೂತ, ಪೂತನಿಯಿಂದಾಗಿ ಕೃಷ್ಣ ಮೂರನೆಯ ತಾಯಿಯನ್ನು ಕಾಣುತ್ತಾನೆ ಆಕೆಯಲ್ಲಿ! ಇದೊಂದು ಅದ್ವಿತೀಯ ಪರಿವರ್ತನೆಯ ಮಾತೃ ಹೃದಯದ ದೃಷ್ಟಾಂತ! ಆಮೇಲೆ ಕಾಣಿಸಿಕೊಳ್ಳುತ್ತಾಳೆ ಕರುಳಿನ ತಂಗಿ ದ್ರೌಪದಿ! ತನ್ನ ತಂಗಿಯನ್ನು ಅಸಹಾಯಳನ್ನಾಗಿ, ತಬ್ಬಲಿಯನ್ನಾಗಿ, ಅವಿವೇಕಿಗಳ ದುರ್ವ್ಯವಹಾರಕ್ಕೆ ಗುರಿಪಡಿಸಿದೆನಲ್ಲ ಎಂಬ ವಿಷಾದಭಾವ ಶ್ರೀಕೃಷ್ಣನನ್ನು ಹಣ್ಣುಮಾಡಿ ಬಿಡುತ್ತದೆ. ಕೊನೆಯಲ್ಲೂ "ಓ ದ್ರೌಪದೀ" ಎಂದು ಹಂಬಲಿಸುವಾಗ-'ಕಮಲಮುಖಿ ಸುಲಿವಡೆದು ಲಕ್ಷ್ಮೀರಮಣ, ಲಕ್ಷ್ಮೀರಮಣ, ಲಕ್ಷ್ಮೀರಮಣ-ಎಂದೊರಲಿದಡೆ ಸಂಜಯಾ ನೊಂದೆ ನಾನೆಂದ' ಎಂಬ ಕುಮಾರವ್ಯಾಸನ ಸಾಲುಗಳು ನೆನಪಾಗಿ ಕಂಬನಿ ತುಳುಕುತ್ತದೆ! ಶ್ರೀಕೃಷ್ಣನು ತನ್ನ ಅಂತಿಮಾವಸ್ಥೆಯಲ್ಲಿ 'ಅಮ್ಮಾ' ಎಂದು ಅಸಹಾಯ ಶಿಶುವಿನಂತೆ ಕೂಗಿಕೊಳ್ಳುವಾಗ, ತಂಗಿಯನ್ನು 'ಕ್ಷಮಿಸುಕ'ಎಂದು ಗೋಗರೆಯುವಾಗ ಲೇಖಕರು ವಾಚಕರ ಹೃನ್ಮನಗಳನ್ನೂ, ಕಣ್ಣುಗಳನ್ನೂ ತೋಯಿಸಿ ಬಿಡುತ್ತಾರೆ! ಕವಿಯೊಬ್ಬ 'ತನಗೆ ರಾಜನ ಆಸ್ಥಾನದ ಕಂಕಣಬೇಡ ವಾಚಕನ ಹೃದಯ ಸ್ಥಾನದ ಕಣ್ ಕಣ ದೊರೆತರೆ ಸಾಕು ತಾನು ಧನ್ಯ' ಎಂದು ಉದ್ಗರಿಸಿದನಂತೆ. ಹಾಗೆ ನಮ್ಮ ಆಚಾರ್ಯರು ತಮ್ಮ ರಸಪ್ರಸರ ಲೇಖನಿಯಿಂದ ವಾಚಕ ಕೋಟಿಯ ಕಣ್ ಕಣಗಳನ್ನು ಸೆಳೆದುಕೊಳ್ಳುತ್ತಾರೆ.

ಅಯಿತು, 'ನಿಮಿತ್ತಮಾತ್ರಂಭವ' ಎಂಬಂತೆ ವ್ಯಾಧನೊಬ್ಬನ ನಿಮಿತ್ತ ಬೇಕಾಗಿತ್ತು. ಮರದಡಿಯಲ್ಲಿ ಕಾಲಮೇಲೆ ಕಾಲು ಹಾಕಿ ಕೂತಾಗ ಅದು ನೀಲನವಿಲಿನ ಮುಖವೆಂದು ಬಗೆದ ವ್ಯಾಧ ಬಾಣ ಪ್ರಹಾರ ಮಾಡುತ್ತಾನೆ. ನೀಲ ಅಂಗಾಲಿನಿಂದ ಆರಕ್ತ ರಕ್ತಧಾರೆ! ತನ್ನನ್ನು ತಾನೇ ಸಂತೈಸಿಕೊಳ್ಳುತ್ತಾನೆ ಶ್ರೀಕೃಷ್ಣ. ಪ್ರತ್ಯಕ್ಷಳಾದ ತಾಯಿ ದೇವಕಿ ಈ ದೃಶ್ಯವನ್ನು ಕಂಡು ಮೂರ್ಛೆಗೆ

ಸಂದಾಳೆಂದು ಸಂದೇಹಿಸಿ, 'ಇನ್ನು ತೆರಳು ತಾಯೇ' ಎಂದು ಈ ತರಳ, ತಾಯಿಯನ್ನು ದೂರಮಾ ತ್ತಾನೆ. ಕಣ್ಣಿಗೆ ಬಟ್ಟೆಯ ಪಟ್ಟಿ ಕಟ್ಟಿಕೊಂಡು ಬಂದ ಗಾಂಧಾರಿಯ ಶಾಪಕ್ಕೋಸ್ಕರವಾಗಿ ಆ ಶಾಪಕ್ಕನುಗುಣವಾಗಿ ಮಾನುಷ ಕೃಷ್ಣ ಸಂಕಟಪಟ್ಟರೂ ಆಕೆಯ ಕುರುಡುತನದ ಕೃತ್ರಿಮವನ್ನು ಜರಿದು ಆಕೆಗೆ ನೇತ್ರ ಚಿಕಿತ್ಸೆ ಮಾಡಿ ಕಣ್ಣು ತೆರೆಯಿಸುತ್ತಾನೆ. ಕೊನೆಯಲ್ಲಿ ತಾನು ಕಣ್ಣುಮುಚ್ಚಿದರೂ ಬುದ್ಧಿಗುರುಡರೆಲ್ಲರ ಕಣ್ಣು ತೆರೆಯಿಸುತ್ತಾನೆ. ದ್ವಾಪರ ಕಲಿಗಳಾಗಿ ಕಾಣಿಸಿಕೊಳ್ಳುವ ದುರ್ಯೋಧನ ಶಕುನಿಯರು ಸ್ಮಶಾನ ಕುರುಕ್ಷೇತ್ರ ನಾಟಕದಲ್ಲಿ ತಾವು ನಿರ್ವಹಿಸಿದ ಯಶಸ್ವೀ ಪಾತ್ರಕ್ಕೆ ಪ್ರಶಸ್ತಿಯನ್ನು ಬೇಡ ಬಂದವರಂತೆ ಕಾಣಿಸಿಕೊಳ್ಳುತ್ತಾರೆ. ನಾಟಕದಲ್ಲಿ ಇದೊಂದು ನಾಟಕ. ಕೃಷ್ಣನು ಅಂತ್ಯಾವಸ್ಥೆ ಮುಟ್ಟಿದರೂ ಅರ್ಜುನನಿನ್ನೂ ಬಂದಿರಲಿಲ್ಲ. ಆದರೆ ಮಾನುಷ ನಾಟಕದ ಈ ನಾಯಕನ ನಿಷ್ಕ್ರಮಣವಾಗಬೇಕಿತ್ತು.

"ಒಂದು ಕ್ಷಣ ಸೂರ್ಯ ಬಹು ಪ್ರಕಾಶಮಾನವಾಗಿ ಮಿಂಚಿ ಮೇಲೆದ್ದ. ದೇವತೆಗಳೆಲ್ಲ ಪುಷ್ಪವೃಷ್ಟಿಗೈದರು! ನೆಲಕ್ಕೊರಗಿದ್ದ ಆ ಸುಂದರ ಕೃಷ್ಣಮೂರ್ತಿಯ ಪಾದಗಳಿಂದ ಮುಡಿಯವರೆಗೆ ನಾನಾವರ್ಣದ ಹೂಗಳು ಶರೀರದ ಮೇಲೆ ಬೀಳುತ್ತಾ ಅದೊಂದು ಪುಷ್ಪಶಯನವೆನಿಸಿತು. ಚತುರ್ಭುಜನೂ, ನೀಲ ಮೇಘಶ್ಯಾಮನೂ, ಪೀತಾಂಬರಧಾರಿಯೂ, ಶಂಖ ಚಕ್ರಾದಿ ಆಯುಧ ಸಮೇತನೂ, ಕೋಟಿ ಕೋಟಿ ಸೂರ್ಯ ಪ್ರಕಾಶನೂ ಆದ ದಿವ್ಯ ಪುರುಷನೊಬ್ಬ ಶ್ರೀಕೃಷ್ಣ ವಿಗ್ರಹದಿಂದ ಮೇಲೇಳುತ್ತಾ ಅಭಯಹಸ್ತ ಚಾಚುತ್ತಾ ಆಗಸದಲ್ಲಿ ಅಂತರ್ಧಾನನಾದ! ವಿಮಾನಗಳಲ್ಲಿ ದೇವತೆಗಳೂ ಗಂಧರ್ವ ಅಪ್ಸರೆಯರೂ ಮಹರ್ಷಿಗಳೂ ಹಿಂಬಾಲಿಸಿದರು" ಹೀಗೆಂದು ಲೇಖಕರು ಕೃಷ್ಣನ ಅಂತ್ಯವನ್ನು ಬಣ್ಣಿಸಿದ್ದಾರೆ.

ನಿಜವಾಗಿಯೂ ಕರುಳನ್ನು ಚುರುಗುಟ್ಟಿಸುವ ಕೊನೆ! ಶ್ರೀಕೃಷ್ಣನ ಮರಣಾನಂತರ ಅಲ್ಲಿಗೆ ಬಂದು ಮುಟ್ಟಿದ ಅರ್ಜುನನ ಮನಃಸ್ಥಿತಿ, ದೇಹಸ್ಥಿತಿಗಳು ಆತನಿಗೆ ಸೋಲನ್ನೇ ತಂದು ಕಳವಳಿಸುವಂತೆ ಮಾಡಿದವು. ಈ ಪ್ರಕರಣ ಈ ಮಾಲಿಕೆಯ ಒಂದು ಮಾಣಿಕ್ಯ.

ಭಾಗವತವು, ಅದರಲ್ಲೂ ಈ ಕೃಷ್ಣನ ಕೊನೆಯ ದಿನಗಳ ಇಪ್ಪತ್ತು ಅಧ್ಯಾಯಗಳು ಉಚ್ಚ ಶ್ರೇಷ್ಠ ತತ್ವಜ್ಞಾನ ಗ್ರಂಥವಾಗಿರುವಂತೆ, ನವರಸಭರಿತವಾದ ಪ್ರತಿ ಅಧ್ಯಾಯ ರಸೋತ್ಕರವಾದ ಗದ್ಯ ಕಾವ್ಯವಾಗಿದೆ. ವ್ಯಾಸರ ಕಣ್ಣಾಗಿ ನಾರಾಯಣಾಚಾರ್ಯರು ಮಹಾಭಾರತದ ಕನೆಯನ್ನು ಈ ಗದ್ಯ ಕಾವ್ಯಕ್ಕೆ ಸುವರ್ಣ ರಸದಂತೆ ಲೇಪಿಸಿದ್ದಾರೆ. ಈ ಇಪ್ಪತ್ತು ಅಧ್ಯಾಯಗಳ ಹೃದಯಸ್ಪರ್ಶಿ ಗದ್ಯಗಾಥೆಯ ದರ್ಶಿಸುವ ಸಾರದಲ್ಲಿ ವ್ಯಕ್ತಿ ವ್ಯಕ್ತಿಯ ಜೀವನದಲ್ಲಿ ನಡೆಯುವ ದೇವಾಸುರ ಸಂಗ್ರಾಮದ ಇಷ್ಟಾನಿಷ್ಟಗಳ ಗುಟ್ಟು ಅಡಗಿದೆ.

ಪೂಜ್ಯ ಆಚಾರ್ಯರ ಸಂಸ್ಕೃತ, ಕನ್ನಡ, ಇಂಗ್ಲಿಷ್, ತಮಿಳು ಚತುರ್ ಭಾಷಾ ಪ್ರೌಢಿಮೆ, ಕಲ್ಪನಾ ಪ್ರಾಗಲ್ಭ್ಯ, ಜೀವಂತ ಪಾತ್ರ ನಿರೂಪಣೆ, ಮುಖ್ಯವಾಗಿ ಅವರ ವೇದ ತತ್ವಜ್ಞಾನ ಪಾಂಡಿತ್ಯ, ರಾಮಾಯಣ, ಮಹಾಭಾರತ, ಭಾಗವತಗಳ ಮೇಲಿನ ಪ್ರಭುತ್ವ, ಗೌರೀಶಂಕರ ಶಿಖರದಷ್ಟು ಎತ್ತರದ ತತ್ವಜ್ಞಾನವನ್ನು ನಮ್ಮಂತಹ ನೆಲದ ಮೇಲೆ ಓಡಾಡುವ ಮಣ್ಣಿನ ಮನುಷ್ಯರಿಗೆ ಉಣ್ಣಿಸುವ ಔದಾರ್ಯಮಯ ಜ್ಞಾನ ಸಂಪತ್ತು ಇವುಗಳಿಗೆ ಆಗರವಾಗಿರುವ ಈ ಲೇಖಾಂಕ ಮಾಲೆಯ ಒಂದಿಷ್ಟು ಸವಿಯನ್ನು ಮೂಗಿಗೆ ಭಾರವೆನಿಸುವ ಈ ಮುನ್ನುಡಿ ನೀಡಿರಲಾರದು. ಇದನ್ನು ನಾನು ಬಲ್ಲೆ. ಈ ಅಶಕ್ತತೆಗಾಗಿ ಲೇಖಕರ, ವಾಚಕರ ಕ್ಷಮೆ ಬೇಡುತ್ತೇನೆ.

ಎನ್ಕೆ

'ಪರಿಮಳ'
ಧಾರವಾಡ.

# ಪ ರಿ ವಿ ಡಿ


೧. ಕಾಲನ ನಡೆಯಲ್ಲಿ ಉರುಳಿದ ಇತಿಹಾಸ! ೧
೨. ಗೇಲಿ ತಂದ ಸರ್ವನಾಶ! ೭
೩. ಉಗ್ರಸೇನ ರಾಜನ ಸಭೆ ೧೪
೪. ಶ್ರೀಕೃಷ್ಣನ ಅಂತಃಪುರದಲ್ಲಿ ೨೩
೫. ಉದ್ಧವ, ಅಕ್ರೂರರೊಡನೆ ಸಮಾಲೋಚನೆ ೩೦
೬. ಕೊನೆಯ ಉಪದೇಶ ೩೯
೭. ಮಹಾಪ್ರಸ್ಥಾನ ೪೭
೮. ಮಹಾಪಾನ ಸರ್ವನಾಶ ೫೪
೯. ಬಲಭದ್ರನ ನಿರ್ಯಾಣ ೬೫
೧೦. ಶ್ರೀಕೃಷ್ಣಾವಸಾನಕಾಲ-ಕೊನೆಯ ನೆನಪುಗಳು, ಗಾಂಧಾರಿ ೭೧
೧೧. ಶ್ರೀಕೃಷ್ಣನ ವೈಫಲ್ಯ ಸ್ಮರಣೆಗಳು-ಕರ್ಣ! ೮೧
೧೨. ಶ್ರೀಕೃಷ್ಣ "ಅಮ್ಮಾ"! ಎಂದ! ೯೦
೧೩. ಶ್ರೀಕೃಷ್ಣ ಕಂಡ ಮೂರನೆಯ ತಾಯಿ ೯೭
೧೪. ಶ್ರೀಕೃಷ್ಣನ ಕೊನೆಯ ಸ್ಮರಣೆ-ದ್ರೌಪದಿ ೧೦೭
೧೫. ಅತ್ತ, ಹಸ್ತಿನಾವತಿಯಲ್ಲಿ! ೧೧೬
೧೬. ಯುಧಿಷ್ಠಿರನ ನಿಶ್ಚಯ! ೧೨೬
೧೭. ಯಾದವರ ಅನ್ವೇಷ್ಟಿ! ೧೩೫
೧೮. ಅರ್ಜುನನ ಸೋಲು! ೧೪೩
೧೯. ವಜ್ರ, ಪರೀಕ್ಷಿತರ ಪಟ್ಟಾಭಿಷೇಕ,-ಪಾಂಡವರ ಮಹಾಪ್ರಸ್ಥಾನ! ೧೫೦
೨೦. ಧರ್ಮಜ ಸ್ವರ್ಗಕ್ಕೇರಿದ್ದು! ೧೫೮

# ೧. ಕಾಲನ ನಡೆಯಲ್ಲಿ ಉರುಳಿದ ಇತಿಹಾಸ!

ಸಪ್ತರ್ಷಿ ಶಕೆ ಆರಂಭಗೊಂಡು ಎಪ್ಪತ್ತನಾಲ್ಕು ವರ್ಷವಾಗಿದೆ! ಮಹಾಭಾರತ ಯುದ್ಧ ಮುಗಿದು ಧರ್ಮರಾಜ ಹಸ್ತಿನಾವತಿಯಲ್ಲಿ ಅರಸಾಗಿ ಅಧಿಕಾರ ವಹಿಸಿಕೊಂಡು ಈಗ ಮುವ್ವತ್ತಾರು ವರ್ಷಗಳೇ ಉರುಳಿಯಾಗಿದೆ.

ಶ್ರೀಕೃಷ್ಣ ಅಷ್ಟಮಹಿಷಿಯರೊಡನೆಯೂ, ನರಕಾಸುರನ ಸೆರೆಯಿಂದ ತಾನು ಬಿಡಿಸಿ ತಂದು ಪರಿಗ್ರಹಿಸಿದ್ದ ಸಹಸ್ರಾರು ಸ್ತ್ರೀಯರೊಡನೆಯೂ ದ್ವಾರಕೆಯಲ್ಲಿ ನಿಂತು, ಮಕ್ಕಳು ಮೊಮ್ಮಕ್ಕಳನ್ನು ಪಡೆದು ಮಾನುಷ ಲೀಲೆಯನ್ನೆಲ್ಲ ಮೆರೆದು, ಎಲ್ಲರನ್ನೂ ರಂಜಿಸಿ ಆಗಿದೆ.

ಋಷಿಗಳು ನೆಮ್ಮದಿಯಿಂದ ತಪಸ್ಸು ಮಾಡಲಾರಂಭಿಸಿ ಎಷ್ಟೋಕಾಲ ಆಗಿದೆ.

ಈಗ ಜರಾಸಂಧ ಇಲ್ಲ! ದುರ್ಯೋಧನ, ಅವನ ತಮ್ಮಂದಿರಿಲ್ಲ! ಶಕುನಿಯ ನೆನಪೇ ಜನರಿಗೆ ಮರೆತಿದೆ! ಶಿಶುಪಾಲ, ಕಾಲಯವನ, ಪೌಂಡ್ರಕ, ಕಂಸ-ಯಾರೂ ಇಲ್ಲ!

ವಸುದೇವ ದೇವಕಿಯರು ಈಗ ಹಣ್ಣು ಮುದುಕರು! ಶ್ರೀಕೃಷ್ಣನ ಬಾಲ ಲೀಲೆಗಳನ್ನು ನೋಡಲಾಗದೆ, ಕಂಸನಿಂದ ವಂಚಿತಳಾದ ಕೊರತೆ ದೇವಕಿಯನ್ನು ಇನ್ನೂ ಕಾಡುತ್ತಿರುವಂತಿದೆ!

ಶ್ರೀಕೃಷ್ಣನಿಗೆ ನೆಮ್ಮದಿಯೇ? ಯಾರು ಉತ್ತರಿಸಿಯಾರು? ವೇದಾನ್ತಿಗಳು ಅವನನ್ನು ಅಂದೂ ನಿತ್ಯಾನಂದಮಯನನ್ನಾಗಿಯೇ ಕಂಡರು! ಅವನ ಚೇಷ್ಟಿತಗಳನ್ನೆಲ್ಲ ಲೀಲೆ, ಅಭಿನಯ ಎಂದರು. ಮಾನುಷ ಭಾವದಲ್ಲೇ ಮಗ್ನರಾದ ಮುಗ್ಧಭಕ್ತರು ಶ್ರೀಕೃಷ್ಣನಿಗಿನ್ನೂ ಏನೋ ತವಕ, ಏನೋ ಆತಂಕ, ಇರುವುದನ್ನು ಕಂಡರು. ಈ ಕಥೆಯನ್ನೋದುವ ಭಾವುಕ ಓದುಗರ ಕಣ್ಣೂ ಅಂಥದೇ!

ಜೀವನ ಒಂದು ದೇವಾಸುರ ಯುದ್ಧ. ಅದು ನಿರಂತರ. ದೇವರೇ ಬಂದರೂ ಅಸುರರ ಶಕ್ತಿಗಳನ್ನು ಕಡಿಮೆ ಮಾಡಿ, ಆ ಯುದ್ಧ ಮತ್ತೆ ದೇವತೆಗಳ ಕಡೆ ವಾಲುವಂತೆ ಮಾಡುವನೇ ಹೊರತು ಅಸುರರನ್ನು ಸುತರಾಂ ಇಲ್ಲದಂತೆ ಮಾಡುವುದಿಲ್ಲ! ಹಾಗೆ ಮಾಡಿದರೆ ಲೀಲೆಯೇ ಇಲ್ಲವಾಗುತ್ತದೆ ಎಂಬ ಗ್ರಹಿಕೆ ಅವನದಿರಬೇಕು! ದಶಾವತಾರಗಳ ಹಿನ್ನೆಲೆಯನ್ನೂ, ಅವತಾರಗಳು ಮುಗಿದ ಬಳಿಕ ಉಂಟಾದ ಪರಿಸ್ಥಿತಿಯನ್ನೂ ಪುರಾಣಗಳು ವರ್ಣಿಸಿರುವುದೇ ಹೀಗೆ.

*****

....... ದುರ್ಯೋಧನ ಭೀಮನ ಗದಾದಂಡದ ಹೊಡೆತದಿಂದ ತೊಡೆ ಮುರಿದು ಯುದ್ಧಭೂಮಿಯಲ್ಲಿ ಬಿದ್ದಿದ್ದಾನೆ! ರಾತ್ರಿ ವೇಳೆ ನರಿನಾಯಿಗಳು ಅವನ ಹೆಣಪ್ರಾಯ ಶರೀರವನ್ನು ಬಾಯಿಗಳಿಂದ ಅತ್ತಿತ್ತ ಎಳೆದಾಡಲು ಯತ್ನಿಸಿವೆ. ಅವನ್ನು ಓಡಿಸಲೂ ಅವನಿಗೆ ಶಕ್ತಿಯಿಲ್ಲ! ಇದ್ದ ಸೊಕ್ಕಿನ ಶಕ್ತಿಯೆಲ್ಲ ಎತ್ತ ಹೋಯಿತು? ಸೋಲಿನ ಅಪಮಾನದಿಂದ ಅವನ ಹೃದಯ ಕುದಿಯುತ್ತಿದೆ. ಸೇಡಿಗೆ ಹಾತೊರೆಯುತ್ತಿದ್ದಾನೆ....

ಆಗ ಬಂದ ಅಶ್ವತ್ಥಾಮ! ದುರ್ಯೋಧನ ತನ್ನ ಅಳಲನ್ನು ಅವನಲ್ಲಿ ತೋಡಿಕೊಂಡ. ಅವನಿಗೆ ಕೌರವ ಸೇನಾಧಿಪತ್ಯ ಪಟ್ಟವನ್ನೂ ಕಟ್ಟಿದ! ಎಂಥ ಹುಚ್ಚು!! ದೊರೆಯೇ ಸಾಯುತ್ತಿದ್ದಾನೆ! ಸೈನ್ಯವೇ ಇಲ್ಲ! ಎಲ್ಲ ಸತ್ತಾಯ್ತು! ಸೇನಾಧಿಪತ್ಯವಂತೆ! ಪಾಂಡವರನ್ನು ಕೊಂದು ಅವರ ತಲೆಗಳನ್ನು ತಂದು

ತೋರಿಸುವುದಾಗಿ ಹೇಳಿ ಅಶ್ವತ್ಥಾಮ ದುರ್ಯೋಧನನನ್ನು ಸಮಾಧಾನ ಪಡಿಸುತ್ತಾನೆ. ಆಗ ಅಲ್ಲಿ ಕೃಪಾಚಾರ್ಯನೂ, ಯಾದವ ವೀರ ಕೃತವರ್ಮನೂ ಇರುತ್ತಾರೆ!!

ಅದೇ ರಾತ್ರಿ ಅಶ್ವತ್ಥಾಮ ಪಾಂಡವ ಶಿಬಿರವನ್ನು ಹೊಕ್ಕು ಮಲಗಿದ್ದವರನ್ನು ಪಾಂಡವರೆಂದು ಭ್ರಮಿಸಿ ಐವರ ತಲೆಗಳನ್ನು ತುಂಡರಿಸಿದ! ಆದರೆ ಅವು ಉಪಪಾಂಡವರ, ದ್ರೌಪದೇಯರ ತಲೆಗಳೆಂಬುದನ್ನು ಅವನು ತಿಳಿಯಲಿಲ್ಲ! ಬಿಸಿ ರಕ್ತ ಸುರಿಯುತ್ತಿದ್ದ ಅವನ್ನು, ತೊಟ್ಟಿಕ್ಕುವ ರಕ್ತದ ಹನಿಗಳೊಂದಿಗೇ ಒಯ್ದು ದುರ್ಯೋಧನನಿಗೆ ಅವನು ತೋರಿಸಿದ. ದುರ್ಯೋಧನ ನೆಮ್ಮದಿಯಿಂದ ಸತ್ತ.

ಅಶ್ವತ್ಥಾಮನ ಅಕಾರ್ಯಕ್ಕೆ ಪ್ರೇರಣೆ ಇತ್ತುದು ಒಂದು ಗೂಗೆ! ಎಂಥ 'ದಿವ್ಯ' ಸ್ಫೂರ್ತಿ! ಮಲಗಿದ್ದ ಕಾಗೆಗಳ ಗೂಡಿಗೆ ಹೊಕ್ಕು ಗೂಗೆಯೊಂದು ನಿರ್ದಯವಾಗಿ ಅವನ್ನು ಸಂಹಾರ ಮಾಡಿದ್ದು ಇವನಿಗೆ ಪಾಂಡವ ಶಿಬಿರದಲ್ಲಿ ಹಾಗೆ ಮಾಡಲು ಪ್ರೇರಣೆ ಆಯಿತು.

*ಉಪದೇಶಃ ಕೃತ್ತೋಽನೇನ ಪಕ್ಷಿಣಾ ಮಮ ಸಂಯುಗೇ!*

ಎಂದವನೇ ಆ ಗೂಗೆಯನ್ನು ತನ್ನ ಆಚಾರ್ಯನೆಂದು ಈ ನೀಚ ಗ್ರಹಿಸಿದ! ತನ್ನ ನೀಚ ನಿಶ್ಚಯವನ್ನು ಒಡನೆಯೇ ಕೃತವರ್ಮನಿಗೂ ಕೃಪಾಚಾರ್ಯನಿಗೂ ಹೇಳಿದ! ನಿದ್ರೆಗಣ್ಣಿನಲ್ಲೂ ಕೃಪ ಅದನ್ನು ಅಧರ್ಮವೆಂದೂ ಅಕಾರ್ಯವೆಂದೂ ಹೇಳಿ ತಡೆದ. ಆದದ್ದೆಲ್ಲ ದೈವ ಪ್ರೇರಿತವೆಂದೂ, ದೈವವೇ ಕೌರವರನ್ನು ಕೊಂದಿತೆಂದೂ ಹೇಳಿದ. ಮುಂದೇನೆಂಬುದನ್ನು ವಿದುರನನ್ನು ಕೇಳೋಣವೆಂದ. ಬ್ರಾಹ್ಮಣನಾಗಿಯೂ ತಾನು ಯುದ್ಧಕ್ಕಿಳಿದುದೇ ತಪ್ಪೆಂದು ಕೃಪ ಒಪ್ಪಿ, ತನ್ನನ್ನೇ ಹಳಿದುಕೊಂಡ. ಆದರೆ ಮಲಗಿರುವ ಪಂಚಾಲರನ್ನು ನಿದ್ರೆಯಲ್ಲಿ ಕೊಲ್ಲುವುದಕ್ಕಿಂತ, ಎಬ್ಬಿಸಿ, ಯುದ್ಧದಲ್ಲಿ ಕೊಲ್ಲುವುದೇ ವಾಸಿ ಎಂದೂ ಹೇಳಿದ. ಜಡನಾದ ಶೂರನೊಬ್ಬ, ಪಂಡಿತನನ್ನೇ ಬಹುಕಾಲ ಆಶ್ರಯಿಸಿದರೂ ಅವನಿಗೂ ಜ್ಞಾನ ಬರುವುದಿಲ್ಲವೆಂದೂ, ಸೌಟನ್ನು ಪಾಯಸದಲ್ಲೋ, ತೊವ್ವೆಯಲ್ಲೋ ಬಹು ಹೊತ್ತು ಇಟ್ಟರೂ ಅದಕ್ಕೆ ಆ ರುಚಿ ತಿಳಿಯದಿರುವುದೇ ಇದಕ್ಕೆ ಉದಾಹರಣೆ ಎಂದೂ, ಪ್ರಾಜ್ಞನಾದವನು ಅದೇ ಪಂಡಿತನಲ್ಲಿ ಒಂದೇ ಮುಹೂರ್ತದಲ್ಲಿ ಧರ್ಮವನ್ನು ಗ್ರಹಿಸುವುದು, ನಾಲಗೆಯು ಬೇಗ ರುಚಿ ತಿಳಿಯುವಂತೆ ಎಂದೂ ಹೇಳಿ, ಅಶ್ವತ್ಥಾಮನಿಗೆ "ನೀನು ಸೌಟಾಗ ಬೇಡ, ನಾಲಗೆಯಾಗು" ಎಂದು ಉಪದೇಶಿಸಿದ. ಮಲಗಿದವರನ್ನು ಕೊಲ್ಲುವುದು ಪಾಪವೆಂದ. ಅಷ್ಟು ದೇವಾಂಶ ಅವನಲ್ಲಿನ್ನೂ ಇತ್ತು.

ಅಶ್ವತ್ಥಾಮ ಕೇಳಲಿಲ್ಲ. ಏನೇನೋ ಹರಟಿದ. ನಿಶ್ಚಯ ಬಿಡಲಿಲ್ಲ.

ಕೃತವರ್ಮ ಏನೂ ಹೇಳಲಿಲ್ಲ! ಅಶ್ವತ್ಥಾಮನನ್ನು ತಡೆಯಲೂ ಇಲ್ಲ! ಇವನೋ ಯಾದವ; ಭೋಜ ವೀರ; ಸಾತ್ವತ ಕುಲದವನು; ನಾರಾಯಣ ಸೇನೆಯ ನೇತಾ!

"ನನ್ನ ಸೈನ್ಯವೆಲ್ಲ ಒಂದು ಕಡೆ; ನಾನೊಬ್ಬನೇ ಒಂದು ಕಡೆ" ಎಂದು ಶ್ರೀಕೃಷ್ಣ ಹೇಳಿ "ಯಾವುದು ಬೇಕು?" ಎಂದು ಕೇಳಿದಾಗ. ದುರ್ಯೋಧನ "ನಿನ್ನ ಸೈನ್ಯವೇ ಇರಲಿ" ಎಂದನಲ್ಲ! ಆ ಸೈನ್ಯದ ನಾಯಕನಾದ ಕೃತವರ್ಮನಿಗೆ ದುರ್ಯೋಧನನತ್ತ ನಿಂತು ಯುದ್ಧ ಮಾಡುವುದರಲ್ಲಿ ಸಂಕೋಚವಾಗಲಿಲ್ಲವೆ?

ಸಾತ್ಯಕಿ ಏಕೆ ಕೃಷ್ಣನತ್ತಲೇ ಉಳಿದ? ನಮಗೇ ತಿಳಿಯುವ ಈ ವ್ಯತ್ಯಾಸ ಶ್ರೀಕೃಷ್ಣನಿಗೆ ತಿಳಿದಿರಲಾರದೆ?

"ನೀನೆತ್ತ ಬೇಕಾದರೂ ನಿಲ್ಲು" ಎಂದು ಅವನೇನೋ ಹೇಳುತ್ತಾನೆ. ಕೇಳುವವನಿಗೆ ತಿಳಿಯಬಾರದೆ? ಲೋಕಲೀಲಾ ವಿಹಾರಿಯ ತಂತ್ರ ಅದು! ಸ್ವಾತಂತ್ರ್ಯ ಕೊಟ್ಟು ನಮ್ಮ ನಿಜ ಸ್ವರೂಪವನ್ನು ಬಹಿರಂಗ ಮಾಡುವುದು! ಸ್ವರೂಪಕ್ಕೆ ಸರಿಯಾಗಿ ಫಲಕೊಡುವುದು!

ಕೃಪ-ಕೃತವರ್ಮರಲ್ಲಿ ಈ ಭೇದ ಉಳಿಯಿತು.... ಮುಂದೆ ಅಶ್ವತ್ಥಾಮನಿಗೆ ಶಿಕ್ಷೆ ಆಯಿತು. ತಲೆಯೇ ಹೋಗಬೇಕಾದಲ್ಲಿ ಮಣಿ ಹೋಗಿ ಚರಿತಾರ್ಥವಾಯಿತು. ಸಾಯುವುದಕ್ಕಿಂತ ಕೆಟ್ಟದಾಗಿ,

ದುರ್ಗಂಧವಾಸಿತವಾದ, ರೋಗಗ್ರಸ್ತ ಶರೀರದೊಡನೆ ಮೂರುವರೆ ಸಾವಿರ ವರ್ಷ ಬಾಳುವ ಚಿರಂಜೀವಿತ್ವ ಪ್ರಾಪ್ತವಾಗಿ ಅವನು ಕೆಟ್ಟ.

ಕೃಪ ಚಿರಂಜೀವಿಯಾದದ್ದು ಬೇರೆ ರೀತಿಯಲ್ಲಿ.

ಕೃತವರ್ಮ ಉಳಿದ! ದ್ವಾರಕೆಯಲ್ಲೇ ಉಳಿದಿದ್ದ ಹಲವು ಯಾದವರು ಮತ್ತೆ ಅವನ ಸುತ್ತ ಸೇರಿದರು. ಕ್ಷುದ್ರ ರಾಜಕಾರಣ ಬೆಳೆಯಿತು. ಯಾದವರು ಮದ್ಯಪ್ರಿಯರೂ, ಸ್ತ್ರೀಕಾಮರೂ ಆದರು. ಕೃತವರ್ಮನ ಕರ್ಮ ಬೆಳೆಯಿತು. ಬೆಳೆಯುತ್ತಲೇ ಹೋಯಿತು.

ಸಾತ್ಯಕಿಯೂ ಮಹಾಭಾರತ ಯುದ್ಧಾನಂತರ ಉಳಿದ ಯಾದವ ವೀರ. ಕೃಷ್ಣ ಶಿಷ್ಯ, ಕೃಷ್ಣಸಖಾ; ಪಾಂಡವಪ್ರಿಯನೆನಿಸಿದ್ದ ಇವನೂ ಯಾದವರ ದಾರಿಯನ್ನೇ ಹಿಡಿದಿದ್ದ! ಏನು ಕಾಲ ವಿಪರ್ಯಯ!

ಯುದ್ಧದಲ್ಲೂ ಇವನದೊಂದು ಅನಿಷ್ಟ ದಾಖಲೆ ಇತ್ತು.

******

ಮಹಾಭಾರತ ಯುದ್ಧದ ಹದಿಮೂರನೆಯ ದಿನದ ಯುದ್ಧ ನಡೆದಿತ್ತು. (ಮರು ದಿನ ಸಂಜೆ ಸೈಂಧವ-ಜಯದ್ರಥ ಅರ್ಜುನನ ಕೈಲಿ ಸಾಯುವುನಿದ್ದ) ದ್ರೋಣನ ಕೈಲಿ ಪಾಂಡವ ಸೈನ್ಯ ನುಚ್ಚು ನೂರಾಗಿತ್ತು. ಆದರೂ ಅಂದು ಸಾತ್ಯಕಿ ಪಾಂಡವ ವಿಜಯ ಶಿಲ್ಪಿಯಾಗಿದ್ದ. ಅಲಂಬುಷನನ್ನು ಕೊಂದು ದುಃಶಾಸನನ ರಥದ ಕುದುರೆಗಳನ್ನು ಅವನು ಸಂಹರಿಸಿದ್ದ. ಇತ್ತ ಭೂರಿಶ್ರವಸ್ಸಿನೊಡನೆ ಸಾತ್ಯಕಿಗೆ ಯುದ್ಧ ತೊಡಗಿತು. ಈ ಭೂರಿಶ್ರವಸ್ಸು ಸೋಮದತ್ತನ ಮಗ. ಮಹಾಯಜ್ಞಶೀಲ. ನಿತ್ಯ ಶ್ರೀಮದಷ್ಟಾಕ್ಷರ ಮಂತ್ರವನ್ನು ಜಪಿಸುತ್ತಿದ್ದ ಮಹಾವೈಷ್ಣವ. ಇತ್ತ ಸಾತ್ಯಕಿಯು ಶಿನಿ ಎಂಬ ಸತ್ಯಕನ ಮಗ. (ಶಿನಿಯ ಅಣ್ಣನೇ ವಸುದೇವ!) ಹಿಂದೆ ದೇವಕಿಯ ಸ್ವಯಂವರದಲ್ಲಿ ಶಿನಿಯು ಸೋಮಕ (ಸೋಮದತ್ತ)ನನ್ನು ಜುಟ್ಟು ಹಿಡಿದೆಳೆದು ಒದ್ದಿದ್ದ. ಈ ಅಪಮಾನವನ್ನು ತಾಳಲಾರದೆ ಸೋಮದತ್ತನು ತಪಸ್ಸು ಮಾಡಿ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡ, ತನ್ನ ಅಪಮಾನವನ್ನು ತೀರಿಸಿ ತೊಡೆಯುವ ಪುತ್ರನೊಬ್ಬ ಬೇಕೆಂದು ವರ ಯಾಚಿಸಿದ. ಹಾಗೆ ಹುಟ್ಟಿದವನೇ ಈ ಭೂರಿಶ್ರವಸ್.

ಈಗ ದ್ರೋಣನ ನೇತೃತ್ವದ ಅಂದಿನ ಯುದ್ಧದಲ್ಲಿ ಭೂರಿಶ್ರವಸ್ಸಿಗೆ ತನ್ನ 'ಜನ್ಮ ಸಾರ್ಥಕ್ಯ' ಮಾಡಿಕೊಳ್ಳುವ ಮಹಾವಕಾಶ ದೊರೆಯಿತು. ಸಾತ್ಯಕಿಯ ಜುಟ್ಟನ್ನೆಳೆದು ಕೊಲ್ಲಲು ಹೊರಟ. ಹಳೆಯ ವೈರದ ಲೆಕ್ಕಾಚಾರ ತೀರಿಸಿಯೇ ಬಿಡುವ ಸಂದರ್ಭ ಅದು. ಇವನ ತಂದೆಗೂ, ಸಾತ್ಯಕಿಯ ತಂದೆಗೂ ವೈರವಿದ್ದರೆ, ಇವರ ಮಕ್ಕಳೇಕೆ ಕಾದಾಡಿ ಸಾಯಬೇಕೆಂಬ ಚಿಂತನೆ ಅಂದು ಯಾರ ವಿಚಾರ ಪ್ರಣಾಲಿಯೂ ಆಗಿರಲಿಲ್ಲ. ಸೇಡಿಗೆ ಸೇಡೆಂಬ, ಅದೇ ನ್ಯಾಯವೆಂಬ ಬರ್ಬರಕ್ಷತ್ರದ ಕಾಲ ಅದು. ಶ್ರೀಕೃಷ್ಣ ಅತ್ತ ನೋಡದಿದ್ದರೆ ಸಾತ್ಯಕಿಯ ಕಥೆ ಅಂದು ಮುಗಿದೇ ಹೋಗುತ್ತಿತ್ತು.

ಆದರೆ ಅತ್ತ ಶ್ರೀಕೃಷ್ಣನ ದೃಷ್ಟಿ ಬಿತ್ತು! "ಅರ್ಜುನ, ಅಲ್ಲಿ ನೋಡು! ಸಾತ್ಯಕಿ ಈಗ ನಿರಾಯುಧ; ರಥ ಹೀನ; ಆದರೆ ಅವನು ಮಹಾರಥ. ಅವನನ್ನುಳಿಸು" ಎಂದಪ್ಪಣೆಯಿತ್ತ.

ಸಾತ್ಯಕಿ ದಣಿದೂ ಇದ್ದ, ಅವನು ಅರ್ಜುನನಲ್ಲೂ ಶಸ್ತ್ರಾಭ್ಯಾಸ ಮಾಡಿ, ಶಿಷ್ಯ ವೃತ್ತಿ ಮಾಡಿದ್ದವನು. ಶಿಷ್ಯ ರಕ್ಷಣೆ ಈಗ ಗುರುವಿನ ಕರ್ತವ್ಯವೂ ಆಗಿ, ಅದು ಶ್ರೀಕೃಷ್ಣಾಜ್ಞೆಯೂ ಆಗಿ ಅನುಲ್ಲಂಘನೀಯವೂ ಆಯಿತು. ಅರ್ಜುನ ಅತ್ತ ಧಾವಿಸಿದ.

ಭೂರಿಶ್ರವಸ್ ಒರೆಯಿಂದ ಖಡ್ಗ ಬಿಚ್ಚಿ, ಸಾತ್ಯಕಿಯ ಜುಟ್ಟನ್ನು ಎಡಗೈಲಿ ಹಿಡಿದು ಬಲಗೈ ಕತ್ತಿಯಿಂದ ಇನ್ನೇನು ಅವನನ್ನು ಕೊಲ್ಲುವುದರಲ್ಲಿದ್ದ. ನಿರಾಯುಧನನ್ನು ಕೊಲ್ಲಬಹುದೇ ಎಂದು ಅವನು ಯೋಚಿಸಲಿಲ್ಲ. ಸರಿಯೋ ತಪ್ಪೋ, ತಂದೆಯ ಆಸೆಯನ್ನು ನೆರವೇರಿಸಬೇಕೆಂಬುದು ಅವನ ತವಕ! ಸರಿ ತಪ್ಪು ಅಂದು ಯಾರಿಗೆ ಬೇಕಿತ್ತು? ದ್ರೋಣನೇ ಮರ್ಯಾದಾಮುಕ್ತ ಯುದ್ಧಕ್ಕೆ ಪ್ರಕಟವಾಗಿ ಸಂಮತಿ ಇತ್ತಿರಲಿಲ್ಲವೇ? ಇಲ್ಲವಾಗಿದ್ದರೆ ಅಭಿಮನ್ಯುವನ್ನು ಹಾಗೆ ನಿರ್ದಯವಾಗಿ, ಯುದ್ಧ ನೀತಿ ವಿರುದ್ಧವಾಗಿ ಕೊಲ್ಲುತ್ತಿದ್ದರೇ? ಈ ಭೂರಿಶ್ರವಸನೂ ಆಗ ಆ ಬಾಲವಧೆಯಲ್ಲಿ ಭಾಗವಹಿಸಿದ್ದನಲ್ಲವೇ?

ಅರ್ಜುನನಿಗೆ ಅದು ಆಗ ನೆನಪೂ ಆಯಿತು. ನಿಶಿತಬಾಣಬಿಟ್ಟು ಕತ್ತಿಯೊಡನೆ ಮೇಲೆತ್ತಿದ್ದ ಭೂರಿಶ್ರವಸನ ಬಲಗೈಯ್ಯನ್ನು ಕತ್ತರಿಸಿ ಹಾಕಿದ. ಸಾತ್ಯಕಿ ಬದುಕಿದ. ಆದರೆ ಭಯಂಕರ ಬೈಗುಳಕ್ಕೆ ತುತ್ತಾದ, ಭೂರಿಶ್ರವಸನಿಂದ. ರಾಜಕಾರಣಿಗಳ ರೀತಿಯೇ ಹಾಗೆ! ಯಾವುದು ಯಾವಾಗ ಯಾರಿಗೆ ಅನುಕೂಲವೋ ಆ ದಾರಿಗೇ ಮಾತಾಡುವುದು!! ಧರ್ಮಾಧರ್ಮದ ಮೂಲಶೋಧ ಯಾರಿಗೆ ಯಾವಾಗಲಾದರೂ ಬೇಕಾಗಿದೆಯೇ! "ಇನ್ನೊಬ್ಬನೊಡನೆ ಹೋರಾಡುತ್ತಿದ್ದ ನನ್ನನ್ನು ಬೇರೊಂದತ್ತಣಿಂದ ಹೀಗೆ ಹೊಡೆಯುವ ದುರ್ವಿದ್ಯೆಯನ್ನು ನೀನು ಇಂದ್ರನಿಂದ ಕಲಿತೆಯೋ? ರುದ್ರನಿಂದಲೋ, ದ್ರೋಣನಿಂದಲೋ?

*ನ ಪ್ರಮತ್ತಾಯ ಭೀತಾಯ ವಿರಥಾಯ ಪ್ರಯಾಚತೇ!*
*ವ್ಯಸನೇ ವರ್ತಮಾನಾಯ ಪ್ರಹರನ್ತಿ ಮನಸ್ವಿನಃ!'*

ಎಂದು ಮೂದಲಿಸುವಾಗ, ತಾನು ಸಾತ್ಯಕಿಯನ್ನು ಕೊಲ್ಲ ಹೊರಟ ತಪ್ಪೂ ಇದೇ ನ್ಯಾಯಾನ್ಯಾಯದ ವ್ಯಾಪ್ತಿಯಲ್ಲೇ ಬರುವುದೆಂಬುದನ್ನು ಭೂರಿಶ್ರವಸ್ ಮರೆತ! ಸಾರಥಿ ವಿರಥನಾಗಿದ್ದನಷ್ಟೆ? "ಕೃಷ್ಣನಿಗೆ ನೀನು ಮಾಡಿದ್ದು ಹಿಡಿಸುವುದೇ?" ಎಂದ ಮರುಮಾತಿನಲ್ಲೇ ಕೃಷ್ಣನನ್ನೂ ಸೇರಿಸಿ, "ಇವರೆಲ್ಲ-ಈ ಯಾದವರು-ದಾರಿ ಬಿಟ್ಟವರು" (ವ್ರಾತ್ಯಾಃ ಸಂಕ್ಲಿಷ್ಟ ಕರ್ಮಾಣಃ) ಎಂದು ಬೈಯ್ಯುತ್ತಾನೆ.

ಅರ್ಜುನ ಬಿಡಲಿಲ್ಲ! "ವಯಸ್ಸಾಗುತ್ತಾ ಬುದ್ಧಿ ಕೆಡುತ್ತದೆಯೇ ವಿನಾ, ಬಲಿಯುವುದಿಲ್ಲವೆಂಬುದಕ್ಕೆ ನೀನೇ ಸಾಕ್ಷಿ" ಎನ್ನುತ್ತಾನೆ. "ಕೃಷ್ಣಮತ ತಿಳಿದೂ ನನ್ನನ್ನು ಬೈಯುತ್ತೀಯಾ? ಸಾತ್ಯಕಿ ನನ್ನ ಶಿಷ್ಯ. ಅವನ ರಕ್ಷೆ ನನಗೆ ಕರ್ತವ್ಯ. ನನಗೆ ಅವನು ಬಲತೋಳಿನಂತೆ! ನಾನು ನನ್ನ ತೋಳನ್ನೇ ರಕ್ಷಿಸಿಕೊಂಡೆ, ಮಾತ್ರ!! ದಣಿದವನೂ, ನಿಃಶಸ್ತ್ರನೂ, ವಿರಥನೂ ಆದ ಈ ಶಿಷ್ಯನನ್ನು ಈ ದುಃಸ್ಥಿತಿಯ ದುರುಪಯೋಗದಿಂದ ಕೊಂದಿದ್ದರೆ ನೀನು ವೀರನೆನಿಸುತ್ತಿದ್ದೆಯಾ?" ಎಂದು ಅರ್ಜುನ ಉತ್ತರಿಸಿದಾಗ, ಭೂರಿಶ್ರವಸ್ ನಾಚಿಕೆ ಪಟ್ಟು ಪ್ರಾಯೋಪವೇಶಕ್ಕೆ ಕೂಡುತ್ತಾನೆ. ಎಡಗೈಯ್ಯಿಂದ ಬತ್ತಳಿಕೆಯ ಬಾಣಗಳನ್ನೆಲ್ಲ ಹೊರ ತೆಗೆದು ದರ್ಭೆಯಂತೆ ಆಸನ ಹಾಸಿ, ಅದರ ಮೇಲೆ ಕುಳಿತು, ಸೂರ್ಯನನ್ನೇ ನೋಡುತ್ತಾ "ಮಹೋಪನಿಷತ್" ಎಂಬ ಅಷ್ಟಾಕ್ಷರ ಮಂತ್ರವನ್ನು ಜಪಿಸುತ್ತಾ, ಯೋಗಾರೂಢನಾಗಿ, ಧ್ಯಾನಾಸಕ್ತನಾಗುತ್ತಾನೆ. (ಭೀಷ್ಮ ಸತ್ತದ್ದೂ, ದ್ರೋಣ ಸತ್ತದ್ದೂ ಹಾಗೆಯೇ.)

ಕೌರವರೆಲ್ಲ ಕೃಷ್ಣಾರ್ಜುನರನ್ನೇ ಬೈಯ್ಯುತ್ತಿದ್ದರು! ಅವರ ಚಟ ಅದು! ಅರ್ಜುನ, ಅಭಿಮನ್ಯುವನ್ನು ಅವರೆಲ್ಲ ಸೇರಿ ಕೊಂದದ್ದನ್ನು ನೆನಪಿಸಿದಾಗ ಅವರ ಅಬ್ಬರದ ಬಾಯಿ ತಾತ್ಕಾಲಿಕವಾಗಿ ಮುಚ್ಚಿತು!

"ನೀನು ಈಗ ಯೋಗಾರೂಢನಾಗಿಲ್ಲದಿದ್ದರೆ ನಿನ್ನ ಕಥೆಯೇ ಮುಗಿಯುತ್ತಿತ್ತು" ಎಂದು ಭೂರಿಶ್ರವಸ್ಸಿಗೆ ಹೇಳಿದ ಅರ್ಜುನ, ಅವನ ಯೋಗನಿಷ್ಠೆಗೆ ಮೆಚ್ಚಿ ಪರವಶನಾಗಿ, ತನ್ನ ಪರಮ ಸಾತ್ವಿಕತೆಯನ್ನು ಮೆರೆಯುತ್ತಾನೆ.

"ನನಗೆ ಅಣ್ಣ ಧರ್ಮಜನ ಮೇಲೂ, ಭೀಮನ ಮೇಲೂ, ತಮ್ಮಂದಿರಾದ ನಕುಲ ಸಹದೇವರ ಮೇಲೂ ಏನು ಪ್ರೀತಿಯುಂಟೋ, ಆ ಬಲದಿಂದ ನಿನಗೆ ಆಣತಿಯಿಡುತ್ತೇನೆ; ಇದು ಕೃಷ್ಣನ ಆಣತಿಯೂ ಆದೀತು: ನನ್ನ ಅಪ್ಪಣೆಯಂತೆ ಪುಣ್ಯಲೋಕವನ್ನು ಹೊಂದು" ಎಂದು ಹರಸುವ ಅರ್ಜುನ ಎಂಥ ಧರ್ಮಶೀಲ! ಕೃಷ್ಣ ಹೃದಯದೊಡನೆ ಎಷ್ಟು ತಾದಾತ್ಮ್ಯ ಅವನಿಗೆ! ಧರ್ಮಪಕ್ಷ ಪಾತಿಯಾದ ಅವನ ಮಾತಿಗೆ ಶ್ರೀಕೃಷ್ಣನೂ ಧ್ವನಿಗೂಡಿಸುತ್ತಾನೆ.

"ಬ್ರಹ್ಮಾದಿಗಳೂ, ಸುರಶ್ರೇಷ್ಠರೂ ಬಯಸಿದರೂ ದೊರೆಯದ ನನ್ನ ಯಾವ ದಿವ್ಯಲೋಕವುಂಟೋ, ನೀನು ಅಲ್ಲಿಗೆ ಹೋಗಿ ಸೇರು! ನನಗೆ ಸಮನಾದ ವೈಭವವುಳ್ಳವನಾಗಿ ಗರುಡಾರೂಢನಾಗಿ ಮೆರೆ. ಮುಕ್ತರು ಹೋಗಿ ಸೇರುವ ಆ ಲೋಕಕ್ಕೆ ಹೋಗು" ಎಂದು. ಅಂದರೆ

ಭೂರಿಶ್ರವಸನನ್ನು ಶ್ರೀಕೃಷ್ಣ ಪರಮ ಭಕ್ತನನ್ನಾಗಿ, ಯೋಗಿಯನ್ನಾಗಿಯೇ ಕಂಡ. ಅವನು ಸಾತ್ಯಕಿಯನ್ನು ಕೊಲ್ಲ ಹೊರಟದ್ದು ಹಳೆಯ ವೈರ ಪ್ರೇರಿತನಾಗಿ ಆದರೂ, ಅದಕ್ಕೆ ಶಿಕ್ಷೆ ಅರ್ಜುನನಿಂದ ಆಗಿತ್ತು. ತನ್ನ ತಪ್ಪಿಗೆ ಅವನಿಗೆ ನಾಚಿಕೆಯೂ, ಪಶ್ಚಾತ್ತಾಪವೂ ಆಗಿಯೇ ಪ್ರಾಯೋಪವೇಶಕ್ಕೆ ಅವನು ಕುಳಿತದ್ದು. ಇದು ಕೃಷ್ಣನಿಗೆ ಪ್ರೀತಿಯಾಯಿತು.

ಆಗ ಸಾತ್ಯಕಿ ಮಾಡಿದ ಅವಿವೇಕ ನೋಡಿ! ಕತ್ತಿ ಬಿಚ್ಚಿ, ಯೋಗದಲ್ಲಿ ಕುಳಿತ ಭೂರಿಶ್ರವಸನನ್ನು ಕೊಲ್ಲ ಹೊರಟ!! ಕೃಷ್ಣಾರ್ಜುನರಿಬ್ಬರೂ ಎಷ್ಟು ತಡೆದರೂ ಸಾತ್ಯಕಿಯ ಕೋಪ ಅಡಗಲಿಲ್ಲ! ಭೀಮನೂ ಬುದ್ಧಿ ಹೇಳಿದ. ಯಾರೆಲ್ಲ ಹೇಳಿದರೂ ಸಾತ್ಯಕಿ ಬಿಡಲಿಲ್ಲ, ಭೂರಿಶ್ರವಸ್ಸನ್ನು ಒಂದೇ ಏಟಿಗೆ ಕೊಂದೇ ಬಿಟ್ಟ!! "ಈಗ ನನಗೇಕೆ ಬುದ್ಧಿ ಹೇಳುವಿರಿ? ಅಭಿಮನ್ಯುವನ್ನು ಇವನೂ ಉಳಿದವರೂ ಕೊಂದಾಗ ಅವರಿಗೇಕೆ ಹೇಳಲಿಲ್ಲ?" ಎಂದು ಗರ್ಜಿಸಿದ್ದ. ಸಾತ್ಯಕಿ ಇದನ್ನು ಮಾಡಿ ಈಗ ಮುವ್ವತ್ತಾರು ವರ್ಷಗಳಾಗಿವೆ. ಕಲಿಪುರುಷ ಅವನಲ್ಲೀಗ ಬೀಡು ಬಿಟ್ಟಿದ್ದಾನೆ!

ಮದ್ಯಪಾನದ ಚಟ ಯಾದವರಿಗೀಗ ಬಲವಾಗಿ ಅಂಟಿಕೊಂಡಿದೆ! ಅದರ ಅಮಲಿನಲ್ಲಿ ಯಾದವರಿಗೆ ಎಲ್ಲವನ್ನೂ, ಯಾವುದನ್ನೂ ಗೇಲಿಮಾಡುವ, ದುಷ್ಟ ಹಾಸ್ಯದ ರುಚಿಯೂ ಅಂಟಿದೆ. ಕೃಷ್ಣಪುತ್ರರಿಗೂ ಪೌತ್ರರಿಗೂ ಈ ರೋಗ ಹಬ್ಬಿದೆ!!

ಹಾಸ್ಯ ಪ್ರಜ್ಞೆ ಉತ್ತಮವಾದುದೇ ಹೌದು. ಆದರೆ ಜೀವನದಲ್ಲಿ ಪವಿತ್ರ ವಸ್ತುಗಳೂ ಭಾವನೆಗಳೂ ಇವೆಯಲ್ಲವೆ? ಮನುಷ್ಯನ ಮನದ ಸಮತೋಲ ಕೆಡದಂತೆ, ದುಗುಡ ಕಳೆಯುವಂತೆ, ತಿಳಿ ಹಾಸ್ಯ ಎದ್ದು ನಗೆಗಡಲಿನಲ್ಲಿ ಒಬ್ಬನು ಈಸಾಡಿದರೆ ಅದು ಆರೋಗ್ಯ. ಅದು ಆಗಬೇಕು. ಗಂಭೀರವಾಗಿ, ಉತ್ತಮ ವಿಷಯಗಳನ್ನೂ, ವ್ಯಕ್ತಿಗಳನ್ನೂ, ಶಕ್ತಿಗಳನ್ನೂ, ಚಿಂತಿಸಿ ಆತ್ಮೋನ್ನತಿಯತ್ತ ಸಾಗಬೇಕಾದಾಗ ಈ ಹಾಸ್ಯಪ್ರವೃತ್ತಿ ಈ ವಿಷಯಗಳಲ್ಲೇ ಎದ್ದರೆ, ಅದು ಗತಿಕೆಡಿಸಿ, ನೀಚವಾದ ನಗೆಯಲ್ಲಿ ನಮ್ಮನ್ನು ದಾರಿತಪ್ಪಿಸಿ ವಿವೇಕವನ್ನೇ ನಾಶಪಡಿಸಿ, ಪರಾಪರಜ್ಞಾನವನ್ನೂ, ಪುರುಷಾರ್ಥ ಪ್ರಜ್ಞೆಯನ್ನೂ ಹಾಳು ಮಾಡುತ್ತದೆ.

ಯಾದವ ಯುವಕರ ಸಾರ್ವತ್ರಿಕ ಸ್ಥಿತಿ ಅಂದು ಅದೇ ಆಗಿತ್ತು. ಅವರಿಗೆ ದೇವರ ಬಗೆಗೆ, ಧರ್ಮದ ಬಗೆಗೆ, ಋಷಿಗಳ ಬಗೆಗೆ, ಶಾಸ್ತ್ರಗಳ ಬಗೆಗೆ, ನೀತಿಯ ಬಗೆಗೆ ಬಹು ಲಘುವಾದ, ಕ್ಷುಲ್ಲಕ, ತಿರಸ್ಕಾರ ಬುದ್ಧಿ ಬೆಳೆದಿತ್ತು.

ಒಂದು ಮಹಾಯುದ್ಧವಾದ ನಂತರ ಬರುವ ಮುಂದಿನ ಪೀಳಿಗೆಗೆ ಎರಡು ಕುತ್ತುಗಳು ಬುದ್ಧಿಗೆ ಅಡರುವುದು ಶಕ್ಯ; (೧) ಸರ್ವನಾಶವಾಯಿತೆಂಬ ದುಗುಡದ ಗ್ರಹಣ ಹಿಡಿದು ನಿರಾಶಾವಾದದ ಅತಿರೇಕದಲ್ಲಿ ನಿಂತು ಜೀವನವನ್ನೂ, ನಂಬಿ ಬಂದ ಎಲ್ಲ ಮೌಲ್ಯಗಳನ್ನೂ ಅಲ್ಲಗಳೆದು ನಿರಾಶಾವಾದದ ಹೊಸ ಹೊಸ ಭೂತಗಳು ಆಯಾಮಗಳು ಹುಟ್ಟಿಕೊಳ್ಳುವುದು; (೨) ಇಲ್ಲವೆ, ಒಂದು ಹುಚ್ಚು, ಬೇಜವಾಬ್ದಾರ, ಮರ್ಯಾದಾಹೀನ ಹಾಸ್ಯ ಪ್ರಜ್ಞೆ ಹುಟ್ಟಿ ಯಾವುದನ್ನೂ ಲೆಕ್ಕಿಸದೆ ಎಲ್ಲವನ್ನೂ ಗೇಲಿ ಮಾಡುವ ಪ್ರವೃತ್ತಿ ಹುಟ್ಟಿಕೊಳ್ಳುವುದು!

ಇದೇ ಅಂದಿನ ಯಾದವರ ಪರಿಸ್ಥಿತಿಯಿತ್ತು. ಇದನ್ನು ಪರಾಮರ್ಶಿಸುವ ಪ್ರಜ್ಞೆಯೂ ಸಾಹಿತ್ಯವೂ ಅವರಲ್ಲಿರಲಿಲ್ಲ. (ವೇದವ್ಯಾಸರಿನ್ನೂ ಮಹಾಭಾರತವನ್ನು ಬರೆದಿರಲಿಲ್ಲ.)

ಕೃತವರ್ಮ ಸಾತ್ಯಕಿಯರು ಸಮಾಜದ ಮಾದರಿ ಎನಿಸಿದ್ದರು! ಮಹಾಭಾರತ ಯುದ್ಧದಲ್ಲಿ ಸಾಯದೇ ಬದುಕಿ ಉಳಿದು ಬಂದ ವೀರರೆಂಬ ಗರ್ವ ಅವರನ್ನು ಆವರಿಸಿತ್ತು. ಶ್ರೀಕೃಷ್ಣನ ಘನತೆ, ಧ್ಯೇಯ, ಅವನ ದಿವ್ಯ ವ್ಯಕ್ತಿತ್ವ, ಯಾವುದರ ನಲುವಾಗಿ ಅವನು ತನ್ನೆಲ್ಲವನ್ನೂ ಮುಡಿಪಿಟ್ಟು ಬಾಳಿದ್ದನೋ-ಇದೊಂದನ್ನೂ ಆ ಹೊಸ ಪೀಳಿಗೆ ಅರಿಯುವ ಗೋಜಿಗೇ ಹೋಗಲಿಲ್ಲ. ಹಿಂದಿನ ಪೀಳಿಗೆಯವರಿಗೆ ಅವುಗಳಲ್ಲಿ ಶ್ರದ್ಧೆ ನಶಿಸಿತ್ತು.

ಹೆಂಡದ ಹೊಳೆ ಹರಿದಲ್ಲಿ ಸ್ತ್ರೀವ್ಯಾಮೋಹವೂ ಜೂಜಾಟದ ವ್ಯಸನವೂ ಇದ್ದೇ ಇರುವುದು ಸಾರ್ವಕಾಲಿಕ ಸತ್ಯ.

ರುಕ್ಮಿಣಿಯ ಮಗಳು ಚಾರುಮತಿಯನ್ನು ಕೃತವರ್ಮನ ಮಗ ಮೋಹಿಸಿದ್ದ. ಮದುವೆಗೆ ಯತ್ನ ನಡೆದಿತ್ತು. ಇತ್ತ ರುಕ್ಮಿ ತನ್ನ ಮೊಮ್ಮಗಳನ್ನು-ರೋಚನಾ ಎಂಬುವಳನ್ನು-ಅನಿರುದ್ಧನಿಗೆ (ಕೃಷ್ಣನ ಮೊಮ್ಮಗನಿಗೆ) ಕೊಟ್ಟು ವಿವಾಹ ನಡೆಸಲೂ ಏರ್ಪಾಟಾಗಿತ್ತು. ಇಷ್ಟು ಹತ್ತಿರದ ಸಂಬಂಧವು ಅನಪೇಕ್ಷಿತವೂ ಅಧರ್ಮಯುಕ್ತವೂ ಆಗಿದ್ದರೂ ಕೃಷ್ಣ ಬಲರಾಮರೂ ಅವರ ಪತ್ನಿಯರೂ, ಸಕಲ ಯಾದವರೂ ಭೋಜಕಟದಲ್ಲಿ ಸೇರಿದ್ದರು. ಅದು ರುಕ್ಮಿ ಕಟ್ಟಿಕೊಂಡ ಹೊಸ ಊರಾಗಿತ್ತು. (ರುಕ್ಮಿಣಿಯನ್ನು ಕೃಷ್ಣ ವಿವಾಹವಾದಾಗ, ಅದನ್ನೊಪ್ಪದೆ, ಅವಳನ್ನು ಶಿಶುಪಾಲನಿಗೇ ಕೊಡಲು ಪ್ರತಿಜ್ಞೆ ಮಾಡಿ, ವಿಫಲನಾಗಿ, ಕುಂಡಿನಪುರವನ್ನು ತೊರೆದ ಮೇಲೆ ಅವನು ನಿಂತ ಊರು ಅದೇ)

ಅಲ್ಲಿ ಕಲಿಂಗ ಅರಸು ಕಾಲಿಂಗನೂ ಬಂದಿದ್ದ. “ಬಲಭದ್ರನಿಗೆ ಜೂಜು ಬಾರದು. ನೀನು ಅವನನ್ನು ಎಳೆದು ಸೋಲಿಸು” ಎಂದು ಅವನು ರುಕ್ಮಿಯನ್ನು ಪುಸಲಾಯಿಸಿದ್ದ. ದಡ್ಡನಾದ ರುಕ್ಮಿ ಹಾಗೇ ಮಾಡಿದ! ಒಂದೊಂದು ಸಲ ಬಲಭದ್ರ ಸೋತಾಗಲೂ ಕಾಲಿಂಗ ಕಿಸಕಿಸನೆ ಮುವ್ವತ್ತೆರಡು ಹಲ್ಲುಗಳನ್ನು ತೋರಿಸಿ ನಕ್ಕ. ಬಲರಾಮನಿಗೆ ಸಿಟ್ಟು ಬಂತು. ತಡೆದುಕೊಂಡ. ಮತ್ತೊಂದು ಸಲ ಬಲರಾಮನೇ ಗೆದ್ದರೂ, “ಇಲ್ಲ ನಾನೇ ಗೆದ್ದೆ” ಎಂದು ರುಕ್ಮಿ ಭಂಡಾಟ ಹೂಡಿದ. ಆಕಾಶವಾಣಿ “ಬಲಭದ್ರನೇ ಗೆದ್ದ” ಎಂದು ಹೇಳಿದರೂ ರುಕ್ಮಿ ಒಪ್ಪಲಿಲ್ಲ. ಎಲ್ಲರೂ ಕೂಡಿ ಬಲಭದ್ರನನ್ನು ಹಾಸ್ಯ ಮಾಡಿದರು. “ನಿಮಗೆ ದನ ಮೇಯಿಸುವುದು ಗೊತ್ತೇ ವಿನಾ, ಯುದ್ಧವಲ್ಲ” ಎಂದರು.

ಕೋಪಗೊಂಡ ರಾಮ ರುಕ್ಮಿಯನ್ನು ಅಲ್ಲೇ ಕೊಂದುಹಾಕಿದ! ನಗುತ್ತಿದ್ದ ಕಾಲಿಂಗನನ್ನು ಹಿಡಿಯಲು ಹೋದಾಗ ಅವನು ಓಡಲು, ಹತ್ತು ಹೆಜ್ಜೆಯಲ್ಲಿ ಹಿಡಿದು, ಅವನ ಹಲ್ಲುಗಳನ್ನೆಲ್ಲಾ ಉದುರಿಸಿ ಕೊಂದು, ಮುಂದೆ ಜೂಜಾಡುವಾಗ ಆ ಹಲ್ಲುಗಳನ್ನೇ ಪಣವನ್ನಾಗಿಯೂ, ಎಣಿಕೆಯ ಗುರುತುಗಳನ್ನಾಗಿಯೂ ಉಪಯೋಗಿಸಿದ. ಮದುವೆ ಮನೆ ಮಸಣವಾದದ್ದು ಹಾಳು ಜೂಜಿನಿಂದ. ಪಾಂಡವರ ನಾಶದಿಂದ ಯಾದವರು ಪಾಠ ಕಲಿಯಲಿಲ್ಲ!

ಇಂಥವರಲ್ಲಿ ಹಾದರದ ಚಾಪಲ್ಯ ಹೇಗಿದ್ದೀತೆಂದು ವರ್ಣಿಸಬೇಕೋ? ಒಟ್ಟಿನಲ್ಲಿ ಶ್ರೀಕೃಷ್ಣ ಪ್ರತಿನಿಧಿಸಿದ್ದ ಎಲ್ಲ ಮೌಲ್ಯಗಳನ್ನೂ ಯಾದವರು ಗಾಳಿಗೆ ತೂರಿದ್ದರು! ಅವರ ವಿನಾಶ ಸನಿಹದಲ್ಲೇ ಬಂದಿತು ಕೃಷ್ಣ ಅದನ್ನು ತಡೆಯಲಿಲ್ಲ!

*** *** ***

# ೨. ಗೇಲಿ ತಂದ ಸರ್ವನಾಶ!

ಧರ್ಮಜ ಹಸ್ತಿನಾವತಿಯಲ್ಲಿ ಆಳಲಾರಂಭಿಸಿ ಮುವ್ವತ್ತಾರು ವರ್ಷವಾಗಿತ್ತು. ಕಾಲಪುರುಷ ನಿರಾಬಾಧವಾಗಿ ಇತ್ತ ದ್ವಾರಕೆಯಲ್ಲಿ ಎಲ್ಲರ ಮನೆಯಲ್ಲೂ ತನ್ನ ದರ್ಬಾರು ನಡೆಸಿದ್ದ.

ತಲೆಯೇ ಇಲ್ಲದ ಕರಾಳವಾದ ಒಂದು ಮುಂಡಾಕೃತಿಯು ಒಂದು ದಿನ ಕೃತವರ್ಮನ ಮನೆಯ ಮುಂದೆ ಕಾಣಿಸಿಕೊಂಡಿತು! ಕಾವಲುಗಾರರು ಭಯಭ್ರಾಂತರಾಗಿ, ಅದನ್ನು ನೋಡನೋಡುತ್ತಲೇ ಸತ್ತರು!! ಉಳಿದವರು ಅದನ್ನು ಬೆನ್ನಟ್ಟಿ, ನಿರಾಶರಾಗಿ ಹಿಂದಿರುಗಿದರು. ಅದು ಅದೃಶ್ಯವಾಯಿತು.

ನಾಲ್ಕು ದಿನ ಬಿಟ್ಟು ಅದೇ ಸಾತ್ಯಕಿಯ ಮನೆಯ ಮುಂದೆ ಕಾಣಿಸಿಕೊಂಡಿತು! ಸ್ವಯಂ ಸಾತ್ಯಕಿಯೇ ಅದನ್ನು ಕಂಡು ಬೆಚ್ಚಿದ! ಯುದ್ಧದಲ್ಲಿ ಅಸಂಖ್ಯೇಯ ಮುಂಡ, ರುಂಡಗಳನ್ನು ಕಂಡು ಹೆದರದಿದ್ದ ರಣಧೀರನಿಗೆ ಈ ಮುಂಡ ಅಂದು ಭಯಹಿಡಿಸಿತು. ಹಿಡಿಯಲು ಕೈಗೆ ಬಾರದೆ ಅದೃಶ್ಯವಾದರೆ ಇನ್ನೇನು ಮಾಡಬೇಕು?

ಗೂಢವಾಗಿ, "ಇದು ಯಾರದಾದರೂ ಕೃತ್ಯವೋ!' ಎಂದು ಸಾತ್ಯಕಿ ವಿಚಾರಿಸಲಾರಂಭಿಸಿದ. ಯುದ್ಧದಲ್ಲಿ ತಾನು ಕೌರವರ ವಿರುದ್ಧ ನಿಂತದ್ದರಿಂದ, ಈಗ ಕೌರವ ಕಡೆಯಲ್ಲಿ ಉಳಿದ ಏಕಾಕೀ ವೀರ ಕೃತವರ್ಮ ಇದನ್ನು ಮಾಡಿಸಿರಬಹುದೆಂಬ ಶಂಕೆಯಾಯಿತು.

ದಿಢೀರನೆ ದ್ವಾರಕೆಯಲ್ಲಿ ಇಲಿಗಳ ಹಾವಳಿ ಹೆಚ್ಚಾಯಿತು! ಸಾತ್ಯಕಿಯ ಹೆಂಡತಿ, ರಾತ್ರಿ ಮಲಗಿದ್ದು ಬೆಳಿಗ್ಗೆ ಎದ್ದವಳೇ ಕನ್ನಡಿಯಲ್ಲಿ ಮುಖ ನೋಡಿಕೊಂಡು ಭಯಂಕರವಾಗಿ ಚೀರಿದಳು! ಚೇಟಿಯರು ಬಂದು ದಿಗಿಲಾಗಿ ಅವಳನ್ನು ಕಂಡು ಬೆದರಿದರು. ಅವಳ ತಲೆಯ ಕೂದಲನ್ನೆಲ್ಲಾ ರಾತ್ರಿ ಇಲಿಗಳು ತಿಂದುಹಾಕಿದ್ದವು!!

ಮರುದಿನ ಚೇಟಿಯರಿಗೂ ಹಾಗೇ ಆಯಿತು... ಕೃತವರ್ಮ, ಪ್ರದ್ಯುಮ್ನ, ಸಾಂಬ, ಬಭ್ರು ಎಲ್ಲರ ಮನೆಯಲ್ಲೂ ಇಂಥವೇ ಪ್ರಸಂಗಗಳು! ಮಲಗಿದ್ದವರ ಉಗುರುಗಳನ್ನೂ, ಸೀರೆ ಪಂಚೆಗಳನ್ನೂ ಅಷ್ಟು ನಿರ್ಭೀತಿಯಿಂದ ಇಲಿಗಳು ತಿನ್ನುವುದೆಂದರೇನು?

ಗೂಗೆಗಳು ಮನೆಗಳೊಳಗೆ ನುಗ್ಗಿ ಅಶುಭವಾಗಿ ಶಬ್ದ ಮಾಡಲಾರಂಭಿಸಿದವು. ನಾಯಿಗಳು ಬೆಕ್ಕುಗಳಲ್ಲೂ ಕತ್ತೆಗಳು ಕುದುರೆಗಳಲ್ಲೂ ಮರಿಹಾಕಲಾರಂಭಿಸಿದ್ದವು!

ದೇವಾಲಯಗಳಲ್ಲಿ ಕಳವು ಆರಂಭವಾದವು. ಸಣ್ಣ ಹುಡುಗರು ಇದ್ದಲು ಚೂರುಗಳಿಂದ ದೇವಾಲಯಗಳ ಪಟಾಂಗಳದಲ್ಲಿ ಪಗಡೇ ಹಾಸಿನ ಚಿತ್ರ ಬರೆದು ಜೂಜಾಡಲಾರಂಭಿಸಿ, ಅವು ದೇಗುಲಗಳ ಬದಲು ಜೂಜಿನ ಅಡ್ಡೆಗಳಾದವು. ಪ್ರತಿಭಟಿಸಿದ ಪೂಜಾರರಿಗೆ, ಬ್ರಾಹ್ಮಣರಿಗೆ, ಬೈಗಳೂ ಒಮ್ಮೊಮ್ಮೆ ಹೊಡೆತವೂ ಬಿದ್ದವು! ಯಾದವರು ಶ್ರಾದ್ಧ ಕರ್ಮಗಳನ್ನು ಬಿಡಲಾರಂಭಿಸಿದರು. "ಕೋಟ್ಯಂತರ ಜನ ಮಹಾಭಾರತ ಯುದ್ಧದಲ್ಲಿ ಸತ್ತರಲ್ಲ! ಅವರಿಗೆಲ್ಲ ಧರ್ಮರಾಜ ಅರಮನೆ ಖರ್ಚಿನಲ್ಲಿ ಶ್ರಾದ್ಧ, ತರ್ಪಣ ಮಾಡಿದನಲ್ಲ! ಅವರೆಲ್ಲ ಸ್ವರ್ಗಕ್ಕೆ ಹೋದರೇ? ಸತ್ತೊಡನೆಯೇ ಯೋಧನಿಗೆ ವೀರಸ್ವರ್ಗವೆನ್ನುವುದಾದರೆ ಈ ಶ್ರಾದ್ಧ ಏಕೆ? ಶ್ರಾದ್ಧ ಮಾಡಿದ ಹೊರತು ಸ್ವರ್ಗವಿಲ್ಲವಾದರೆ, ಯುದ್ಧದಲ್ಲಿ ಸತ್ತವರಿಗೆ ಸ್ವರ್ಗ ಎಂಬುದಕ್ಕೇನರ್ಥ? ಇದೆಲ್ಲ ಬ್ರಾಹ್ಮಣರ

ತಂತ್ರ-ಶ್ರಾದ್ಧಾದಿಗಳ ಹೆಸರಲ್ಲಿ ಇತರರ ವಸ್ತುಗಳನ್ನು ಲಪಟಾಯಿಸುವುದು!" ಎಂಬೀ ತೆರನ ಮಾತುಗಳು ಯಾದವ ಗೃಹಗಳಲ್ಲಿ ಕೇಳಿಬರಲಾರಂಭಿಸಿದವು.

"ದುರ್ಯೋಧನನೇ ಸುಖಿ! ಇರುವ ತನಕ ವೈರಿಗಳನ್ನು ಮೆಟ್ಟಿ ಆಳಿ, ಬಾಳಿ, ಸಕಲಭೋಗಗಳನ್ನು ಅನುಭವಿಸಿ ಸತ್ತ! ಇಲ್ಲದ ಸತ್ಯ-ಧರ್ಮಗಳನ್ನು ನಂಬಿ ಪಾಂಡವರು ಇಹ-ಪರಗಳಲ್ಲೂ ಕೆಟ್ಟರು" ಎಂಬ ಪ್ರಚಾರ ಆರಂಭವಾಗಿ ಶ್ರೀಕೃಷ್ಣನ ಕಿವಿಗೂ ಮುಟ್ಟಿತ್ತು!

ತಾನು ಮಾಡಿದ್ದೆಲ್ಲ ಇವರಿಗೆ ನಿರರ್ಥಕವೆನಿಸಿ, ಅರಿಯಲಾರದ ದು:ಖ ಶ್ರೀಕೃಷ್ಣನನ್ನು ಕಾಡಲಾರಂಭಿಸಿತ್ತು. "ಅವಜಾನನ್ತಿ ಮಾಂ ಮೂಢಾ: ಮಾನುಷೀಂ ತನುಮಾಶ್ರಿತಂ! ಪರಂ ಭಾವಮಜಾನನ್ತ:...." ಎಂದು ಅರ್ಜುನನಿಗೆ ಹೇಳಿದುದು ಎಷ್ಟು ವ್ಯಾಪಕ ಸತ್ಯವೆಂಬುದನ್ನು ಮನಗಂಡ ಅವತಾರೀ, ಲೋಕದ ಮೌಢ್ಯದ ಬಗೆಗೆ, ಅದರ ಮೌಲ್ಯವಿಮುಖತೆಯ ಬಗೆಗೆ ದಿನದಿನವೂ ಚಿಂತಿಸಿದ.

ದ್ರೌಪದೀದೇವಿಯ ಬಗೆಗೆ ಯಾದವ ಯುವಕರು ಆಡುತ್ತಿದ್ದ ಗೇಲಿಮಾತುಗಳನ್ನೂ ಶ್ರೀಕೃಷ್ಣ ಕೇಳಿ ದು:ಖಿಸಿದ!

"ತಾನೇ ಹದಿನಾರು ಸಾವಿರ ಹೆಂಡಂದಿರನ್ನು ಮಾಡಿಕೊಂಡವನು, ದ್ರೌಪದಿಗೆ ಐವರು ಗಂಡಂದಿರನ್ನೇರ್ಪಡಿಸಿದ್ದು ಆಶ್ಚರ್ಯವೇ? ಸಂಖ್ಯೆ ಕಮ್ಮಿಯೇ ಆಯಿತು" ಎಂದು ಯಾದವರಲ್ಲಿ ಪುಂಡುಪೋಕರಿಗಳು ಆಡುತ್ತಿದ್ದುದು ಸ್ವಯಂ ಅವತಾರಿಯ ಕಿವಿಗೇ ಬಿದ್ದಿತು!

* * * * *

ಒಂದು ರಾತ್ರಿ ಎರಡು ನಕ್ಷತ್ರಗಳು ಪರಸ್ಪರ ಅಪ್ಪಳಿಸಿ, ಆಕಾಶವೇ ಭುಗಿಲೇಳುವಂತೆ ಜ್ವಾಲೆ ಉರಿದೆದ್ದ ಭಯಾನಕ ದೃಶ್ಯವನ್ನು ಶ್ರೀಕೃಷ್ಣ-ರುಕ್ಮಿಣಿಯರು ಮಾಳಿಗೆಯ ಮೇಲಿಂದ ಕಂಡರು! ರುಕ್ಮಿಣಿ ಮೂರ್ಛೆ ಹೋದಳು. ಶೈತ್ಯೋಪಚಾರ ಆಗಿ, ಪ್ರಜ್ಞೆ ಬಂದ ಮೇಲೆ ಭಗವಾನ್ ಕೃಷ್ಣನ ಮುಖವನ್ನು ದಿಟ್ಟಿಸಿ ನೋಡಿ "ಇದರರ್ಥ ಏನು?" ಎಂಬಂತೆ ಕಂಗಳಲ್ಲೇ ಕೇಳಿದಳು.

ಶ್ರೀಕೃಷ್ಣ: "ದೇವಿ! ಇದರರ್ಥ, ನಿನಗೆ ನಾನು, ನನಗೆ ನೀನು; ಬೇರಾರೂ ನಿನಗೂ ನನಗೂ ಇಲ್ಲ; ಯಾರಿಗೆ ಯಾರೂ ಇಲ್ಲ ಎಂದು."

ರುಕ್ಮಿಣಿ: "ಇದೇನು ಪ್ರಭು! ತುಂಬಿದ ಕುಟುಂಬವಲ್ಲವೇ ನಮ್ಮದು?"

ಶ್ರೀಕೃಷ್ಣ: "ಹೌದು! ಕೊಡ ತುಂಬಿದ್ದರೂ ಸಹ, ಒಂದು ತೂತು ಅಷ್ಟು ನೀರನ್ನೂ ಹೊರಹಾಕಿ ಬಿಡಬಹುದಲ್ಲವೆ?"

ರುಕ್ಮಿಣಿ: "ಇಂದು ನೀವು ಹೇಳುತ್ತಿರುವುದೇನೂ ತಿಳಿಯುತ್ತಿಲ್ಲ ಪ್ರಭು!"

ಶ್ರೀಕೃಷ್ಣ: 'ತಿಳಿಯದೆ ಏನು? ನೀನೇ ಯೋಚಿಸಿ ತಾಳೆ ಹಾಕು... ನಡೆಯುತ್ತಿರುವುದೆಲ್ಲವನ್ನೂ ಪರಾಮರ್ಶಿಸು.... ನಮ್ಮ ಜನ ಮತ್ತೆ ದುರ್ಯೋಧನನನ್ನು ಹೊಗಳಲಾರಂಭಿಸಿದ್ದಾರೆ! ಜರಾಸಂಧ, ಶಿಶುಪಾಲ, ಕಂಸ, ಪೌಂಡ್ರಕರು ದಿಢೀರನೆ, ಸತ್ತ ಮೇಲೂ ಜನಪ್ರಿಯರಾಗುತ್ತಿದ್ದಾರೆ. ನಾನು ನೀಚನೆಂದೂ, ಕುಟಿಲನೆಂದೂ, ಧರ್ಮಬಿಟ್ಟವನೆಂದೂ ಅಪಪ್ರಚಾರ ನಡೆಯುತ್ತಿದೆ. ಪಾಂಡವರೂ ನಾನೂ ಈವರೆಗೆ ಪ್ರತಿನಿಧಿಸಿದ ಮೌಲ್ಯಗಳನ್ನು ಜನ ಗೇಲಿ ಮಾಡಲಾರಂಭಿಸಿದ್ದಾರೆ! ಇದರರ್ಥವೇನು? ಇದು ಕುಲವೃದ್ಧಿಯ ಸೂಚನೆಯೋ? ಕುಲನಾಶದ್ದೋ?"

ರುಕ್ಮಿಣಿ: "ಅರಿಯದ ಹುಡುಗರು ಆಡುವ ಅವಿವೇಕೀ ಮಾತುಗಳಿಗೆ ಹೀಗೆ ಆಳದ ಅರ್ಥ ಹಚ್ಚಬಹುದೇ ಸ್ವಾಮಿ? ತಾವು ಎಲ್ಲ ಬಲ್ಲವರು?"

ಶ್ರೀಕೃಷ್ಣ: "ಹಾಗಲ್ಲ, ದೇವಿ! ಶ್ರೀಕೃಷ್ಣನ ಊರವರು, ಶ್ರೀಕೃಷ್ಣನ ಅರಮನೆಯವರು, ಶ್ರೀಕೃಷ್ಣನ ಕುಟುಂಬದವರು, ಮೊಮಕ್ಕಳು, ಅವರ ಪಾರಿಗೆಯವರು ಹೀಗೆ ಆಡಿದರೆ, ಅದರರ್ಥವೇನು? ಕಲಿಪುರುಷ ದ್ವಾರಕೆಯೊಳಗೆ, ಯಾದವಕುಲದೊಳಗೆ ಕಾಲಿಟ್ಟನೆಂದಲ್ಲವೆ?"

ರುಕ್ಮಿಣಿ: "ಇವರನ್ನು ಕರೆಸಿ ಶಿಕ್ಷಿಸಿ, ಪ್ರಭು! ಇಂಥ ಅಪಪ್ರಚಾರದ ವಿರುದ್ಧ ಡಂಗೂರ ಸಾರಿಸೋಣ! ಆಡಳಿತ ಬಿಗಿ ಮಾಡಿದರಾಯಿತು!"

ಶ್ರೀಕೃಷ್ಣ: "ಎಲೆ ಮುಗ್ಧೆ! ಇಲ್ಲಿ ಕೇಳು. ಮುವ್ವತ್ತಾರು ವರ್ಷಗಳ ಹಿಂದೆ ಇದ್ದ ಒಂದು ಗ್ರಹ ಪರಿಸ್ಥಿತಿ ಮತ್ತೆ ಬಂದಿದೆ. ಈ ಮುಂದಿನ ತ್ರಯೋದಶೀ ದಿನವೇ ಅಮಾವಾಸ್ಯೆ ಬರುತ್ತಿದೆ! ಅಂದರೆ ತ್ರಯೋದಶೀ, ಚತುರ್ದಶೀ ಮತ್ತು ಅಮಾವಾಸ್ಯೆ ಎಂಬ ಮೂರು ತಿಥಿಗಳು ಒಂದೇ ದಿನದಲ್ಲಿ! ಅಂದು ರಾಹುಗ್ರಸ್ತ ಸೂರ್ಯಗ್ರಹಣ ಬೇರೆ! ತ್ರಯೋದಶಿಯಂದು ಗ್ರಹಣವನ್ನು ಯಾರಾದರೂ ಕೇಳಿರುವರೇ?[೧] (ಮಹಾಭಾರತ ಯುದ್ಧಕ್ಕೆ ಮೊದಲು ಮಾತ್ರ ಒಮ್ಮೆ ಹೀಗೇ ಆಗಿತ್ತು!) ಇನ್ನು ಕೇಳು. ಮುಂದಿನ ಹುಣ್ಣಿಮೆ ಚಂದ್ರಗ್ರಹಣ ಬೇರೆ ಬರುತ್ತಿದೆ!![೨] ಅವತ್ತೂ ಮೂರು ತಿಥಿಗಳು ಒಟ್ಟಿಗೇ ಬರುತ್ತಾ, ಎರಡು ಶೂನ್ಯವಾಗುತ್ತವೆ! ಮುವ್ವತ್ತೈದು ವರ್ಷಗಳಲ್ಲಿ ಈ ದುರ್ಯೋಗ ಈಗ ಎರಡನೇ ಸಲ ಬರುತ್ತಿದೆಯೆಂದರೆ ಅರ್ಥವಾಯಿತೇ? ಮೊದಲ ಸಲ ಬಂದದ್ದರ ಪರಿಣಾಮ ಗೊತ್ತಾಗಿದೆಯಷ್ಟೆ?....ಗಾಂಧಾರಿ ನನಗೆ ಹಿಂದೆ ಶಾಪಕೊಟ್ಟದ್ದು ನೆನಪಿದೆಯೇ!"

ರುಕ್ಮಿಣೀ: "ಸ್ವಾಮಿ! ನಾನಾವ ಜ್ಯೌತಿಷವನ್ನೂ ಬಲ್ಲವಳಲ್ಲ! ಗ್ರಹಗಳನ್ನೂ ನಿಯಂತ್ರಿಸುವ ಸರ್ವೇಶ್ವರರು ನೀವೇ ಆಗಿರುವಾಗ, ಪಾಮರಳನ್ನು ಹೀಗೆ ಹೆದರಿಸುವುದೇ?"

ಶ್ರೀಕೃಷ್ಣ: "ಅಯ್ಯೋ! ವೇದಾಂತ ಈಗ ಬೇಡ! ಅದು ಬೇಕಾದರೆ ನೀನು ಪಾಮರಳೂ ಅಲ್ಲ! ನನ್ನವರನ್ನೇ ನಿಯಂತ್ರಿಸಲಾರದ ನಾನು ಗ್ರಹಗಳನ್ನು ನಿಯಂತ್ರಿಸುವೆನೆಂಬುದು ವಿಡಂಬನೆಯ ಮಾತಾಗಲಾರದೆ?...ನಾನೀಗ ಮನುಷ್ಯ ನೀನು ಮಾನುಷ ಪತ್ನಿ. ಲೋಕನಿಯಮಗಳಿಗೆ ನಾವೂ ಬದ್ಧರು. ಅಷ್ಟು ಸಾಕು."

ರುಕ್ಮಿಣೀ: "ಹಾಗೇ ಇಟ್ಟುಕೊಳ್ಳಿ! ಹೊಟ್ಟೆ ಬೆಂದ ಯಾವಳೋ ಹುಚ್ಚಿ ಹಾಗೆ ನಿಮಗೆ ಶಾಪಕೊಟ್ಟರೆ ಅದು ನಿಜವಾಗಲೇ ಬೇಕೆ?"

ಶ್ರೀಕೃಷ್ಣ: "ಹಾಗೆನ್ನಬೇಡ! ಅವಳು ಹೊಟ್ಟೆ ಬೆಂದವಳು ಹೌದು; ಆದರೆ ಹುಚ್ಚಿಯಲ್ಲ! ತಪಸ್ವಿನೀ ಪತಿವ್ರತೆ ಒಬ್ಬರಲ್ಲದೆ ನೂರ್ವರು ಮಕ್ಕಳನ್ನು ಹಡೆದು ಕಳೆದುಕೊಂಡ ಸಂಕಟ ಸಾಮಾನ್ಯವೂ ಅಲ್ಲ! ಇತರರಿಗೆ ಅದು ತಿಳಿಯಲಾರದು! ಆ ಸಂಕಟದ ಮಾತು ಹುಸಿಯಾಗದು!"

ರುಕ್ಮಿಣೀ: "ಅವಳ ಮಕ್ಕಳು ಅವರವರ ತಪ್ಪಿಗೆ ಹಾಗೆ ಸತ್ತರೆ, ಇವಳೇಕೆ ಹಾಗೆ ತರ್ಕಹೀನವಾಗಿ ಶಪಿಸಬೇಕು?"

ಶ್ರೀಕೃಷ್ಣ: "ನೀನು ಗಾಂಧಾರಿಯಲ್ಲವಲ್ಲ! ತರ್ಕಬದ್ಧವೋ, ಹೀನವೋ, ಸಂಕಟ ಅದನ್ನು ವಿಚಾರಿಸುತ್ತದೆಯೇ?"

ರುಕ್ಮಿಣೀ: "ಆ ಸಂಕಟದ ಶಾಪ ತಟ್ಟುವುದು ನಿಮಗೆ ಬೇಕಾಗಿದೆಯೇ? ಬೇಕಾಗಿದ್ದರೆ ತಡೆಯಬಲ್ಲವರಾರು?"

ಶ್ರೀಕೃಷ್ಣ: "ನನ್ನ ಬೇಕುಬೇಡ ಯಾರಿಗೆ ಬೇಕು? ನಿನ್ನ ಮಗ, ಮೊಮ್ಮಗ, ನಿನ್ನ ಸವತೀಮಕ್ಕಳು ಕುಡಿಯುತ್ತಾರೆ, ಜೂಜಾಡುತ್ತಾರೆ, ಹಾದರ ಮಾಡುತ್ತಾರೆಂದರೆ ನಂಬುವೆಯಾ?"

ರುಕ್ಮಿಣೀ: "ಶಾಂತಂ ಪಾಪಂ! ಏನು ನೀವು ಹೇಳುತ್ತಿರುವುದು? ಕೌರವರ ಗತಿ ಇವರಿಗಾಗುತ್ತದೆಯೆನ್ನುವಿರಾ?"

ಶ್ರೀಕೃಷ್ಣ: "ಯಾರ ಗತಿ ಯಾರಿಗಾಗುತ್ತದೋ, ಕಾಲ ನಿರ್ಣಯಿಸಿ ನಡೆಸುತ್ತದೆ. ನಾನೂ ನೀನೂ ಹೃದಯ ಗಟ್ಟಿಮಾಡಿಕೊಳ್ಳಬೇಕು!"

ರುಕ್ಮಿಣೀ: "ಯಾವುದಕ್ಕಾಗಿ?"

---

೧. ೧೪ನೇ ನವಂಬರ್ ೩೧೩೮ ಬಿ.ಸಿ (ಕ್ರಿ. ಪೂ)

೨. ೨೯ನೇ ನವಂಬರ್ ೩೧೩೮ ಬಿ.ಸಿ. (ಕ್ರಿ.ಪೂ.)

ಶ್ರೀಕೃಷ್ಣ: 'ಅದಕ್ಕೇ ನಾನು ಹೇಳಿದ್ದು.....ನಿನಗೆ ನಾನು, ನನಗೆ ನೀನು, ಬೇರಾರೂ ನಿನಗೂ ನನಗೂ ಇಲ್ಲ, ಯಾರಿಗೆ ಯಾರೂ ಇಲ್ಲ ಎಂದು"

ರುಕ್ಮಿಣೀ: "ಅಂದರೆ?"

ಶ್ರೀಕೃಷ್ಣ: "ಅಂದರೆ ಯಾರಿಂದಲೂ ಏನನ್ನೂ ನಿರೀಕ್ಷಿಸಬೇಡ ಎಂದು"

ರುಕ್ಮಿಣೀ: "ಏನನ್ನೂ ಎಂದರೆ?"

ಶ್ರೀಕೃಷ್ಣ: "ಹೇಳಿಬಿಡಲೇ?.... ಹೇಳಿಯೇ ಬಿಡುತ್ತೇನೆ. ಉತ್ತರ ಕ್ರಿಯೆಯನ್ನು ಸಹ... ಎಂದು!"

ರುಕ್ಮಿಣಿ ಮತ್ತೆ ಮೂರ್ಛೆ ಹೋಗುತ್ತಾಳೆ. ಚೇಟಿಯರು ಉಪಚರಿಸುತ್ತಾರೆ. ಶ್ರೀಕೃಷ್ಣ ಸ್ತಬ್ಧನಾಗಿ, ಯೋಗಿಯಂತೆ ಆಸನದಲ್ಲಿ ಒರಗಿ ಕುಳಿತು ರಾತ್ರಿ ಕಳೆಯುತ್ತಾನೆ.

* * *

ಎರಡು ದಿನ ಕಳೆಯಿತು. ದ್ವಾರಕೆಯ ಸಮುದ್ರ ತೀರದಲ್ಲಿ ಒಂದು ಮರದಡಿಯಲ್ಲಿ ಮಹರ್ಷಿಗಳು ಏನೋ ಸಹಚಿಂತನೆಯಲ್ಲಿದ್ದಾರೆ.

ಬಹುವೃದ್ಧರಾದ ವಿಶ್ವಾಮಿತ್ರರು, ಅಸಿತರು, ಕಣ್ವರು ಒಂದತ್ತ. ಮಹಾ ಕೋಪಿಷ್ಠರಾದ ದುರ್ವಾಸರು, ಭೃಗು, ಕಶ್ಯಪರು ಇನ್ನೊಂದತ್ತ. ನಡುವೆ ಶಾಂತರಾದ ವಸಿಷ್ಠರು, ಅತ್ರಿಗಳು. ಈ ಬ್ರಹ್ಮರ್ಷಿಗಳ ನಡುವೆ ದೇವರ್ಷಿ ನಾರದರೂ ಅಂದು ಅಲ್ಲಿ ಸೇರಿದ್ದರು.

ಸರಸ್ವತೀ ನದಿಯು ಆಗ ಪಶ್ಚಿಮಗಾಮಿನಿಯಾಗಿ ಹರಿಯುತ್ತಾ ಸಿಂಧುಸಮುದ್ರವನ್ನು ಸೇರುತ್ತಿದ್ದ ದಿವ್ಯಜಾಗ ಅದು. ಪಿಂಡಾರಕ ಕ್ಷೇತ್ರವೆಂದು ಪ್ರಸಿದ್ಧವಿತ್ತು.

ಉರಿಯುತ್ತಿದ್ದ ಬಿಸಿಲು ಒಂದು ಕಡೆ. ಮಟ ಮಟ ಮಧ್ಯಾಹ್ನ ಬೇರೆ. ಋಷಿಗಳು ಅಲ್ಲಿ ಆಕಸ್ಮಿಕವಾಗಿ ಏನೂ ಸೇರಿರಲಿಲ್ಲ! ಕಾಲಗತಿಯಲ್ಲಿ ಕುಸಿಯುತ್ತಿದ್ದ ಜೀವನಮೌಲ್ಯಗಳ ಬಗೆಗೆ ಚಿಂತಿಸಿ, ದಾರಿತೋರಲು, ಉಪಾಯ ಹುಡುಕಲೆಂದೇ ಅಲ್ಲಿ ಸೇರಿದ್ದರು.

ವಿಶ್ವಾಮಿತ್ರ: "ಹಸ್ತಿನಾವತಿಯಲ್ಲಿಯೂ ಎಲ್ಲ ಚೆನ್ನಾಗಿಲ್ಲ. ಧರ್ಮಜನೂ ಅವನ ತಮ್ಮಂದಿರೂ ಧಾರ್ಮಿಕರಾಗಿಯೇ ಇದ್ದರೂ, ಜನಸಮೂಹ ಮತ್ತೆ ದುರ್ಯೋಧನನ ರೀತಿ ನೀತಿಗಳನ್ನೇ ಮೆಚ್ಚುತ್ತಿದ್ದಾರೆ, ಅನುಸರಿಸಲಾರಂಭಿಸಿದ್ದಾರೆ. ಕಾಲ ಈಗ ಕಲಿದೂಷಿತವೆನ್ನುತ್ತಾ ನಾವು ಕೈಕಟ್ಟಿ ಕುಳಿತರೆ ಭವಿಷ್ಯತ್ತು ನಮ್ಮನ್ನು ದೂಷಿಸುತ್ತದೆ!"

ಕಣ್ವ: "ನಾವು ಕೈಕಟ್ಟಿ ಕೂಡಬೇಕೆಂದು ಹೇಳಿದವರಾರು?"

ಕಶ್ಯಪ: "ಆಗುವುದು ಆಗಿಯೇ ತೀರುತ್ತದೆ. ಅದು ದೈವಸಂಕಲ್ಪ ಎಂಬ ವಾದ ಇದೆಯಲ್ಲ!"

ಭೃಗು: "ಅದು ಹೇಡಿಗಳ, ಹೊಣೆಗೇಡಿಗಳ ಮಾತು!"

ಅಸಿತ: "ಉಗ್ರಸೇನ ಮಹಾರಾಜನಲ್ಲಿ, ವಸುದೇವರಲ್ಲಿ ನಾವು ಬಿನ್ನೈಸೋಣ-ನಿಮ್ಮ ಯುವಕರು ದುಶ್ಚಟಗಳಿಗೆ ಅಂಟಿದ್ದಾರೆ. ನಿಮ್ಮ ಸ್ತ್ರೀಪುರುಷರ ರೀತಿನೀತಿಗಳು ಸರಿಯಿಲ್ಲ. ಆಭೀರರೂ ಇತರ ಅನಾಗರಿಕ ಜನರೂ ಯಾದವರಲ್ಲಿ ಬೆರೆತು ವರ್ಣಸಂಕರ ನಡೆಯುತ್ತಿದೆ. ಶ್ರೀಕೃಷ್ಣದೂಷಣೆ, ಅವನ ಚಾರಿತ್ರ್ಯವಧೆ, ಅವನ ಮೌಲ್ಯಗಳ ಅಪಮಾಪನ ನಡೆಯುತ್ತಿದೆ. ಇದು ಯಾದವರಿಗೆ ಭೂಷಣವಲ್ಲ ಎಂದು ಹೇಳಿ ಬರೋಣ"

ವಸಿಷ್ಠ: "ಇದೆಲ್ಲ ಶ್ರೀಕೃಷ್ಣ ಭಗವಂತನಿಗೆ ಗೊತ್ತಿಲ್ಲವೆ?"

ಅತ್ರಿ: "ಅಯ್ಯಾ! ಮಹರ್ಷಿ! ನಾವು ರಾಮಾಯಣದ ಕಾಲದವರು. ಭಗವಂತನ ಆ ಅವತಾರದ ರೀತಿಯನ್ನು, ಈ ಅವತಾರದ ರೀತಿಯನ್ನು ವ್ಯತ್ಯಾಸಬಲ್ಲವರು! ಅವತಾರಿ, ಭೂಭಾರಹರಣದ ರೀತಿಯನ್ನು ತಾನೇ ಆರಿಸಿಕೊಂಡಿದ್ದಾನು. ನಾವು ಪುಣ್ಯವಂತರು! ಅವನ ಸಮಕಾಲೀನರು. ವಿಶ್ವಾಮಿತ್ರರು ಈಗ ನಾವು ಮಾಡಬೇಕೆಂಬುದನ್ನು ಅವನೇ ಮಾಡಿಯಾನು; ಅದರ ಬಗ್ಗೆ ನಮಗಿಂತ ಚಿಂತಿಸಿದ್ದಾನು. ನಾವು ಯಾರಿಗೂ ಏನೂ ಹೇಳುವುದು ಅಗತ್ಯವಿರಲಾರದು."

ವಿಶ್ವಾಮಿತ್ರ: "ನಾನೂ ರಾಮಾಯಣದ ಕಾಲದವನೇ! ನಮಗೆ ಕರ್ತವ್ಯವಿಲ್ಲವೆನ್ನಬೇಡಿ!"

ಭೃಗು: "ಕರ್ತವ್ಯಂ ದೈವಮಾಹ್ನಿಕಂ - ಎಂದು ಅವತಾರಿಯನ್ನೇ ಕರ್ತವ್ಯದ ಬಗೆಗೆ ಎಚ್ಚಿಸಿ ಸುಪ್ರಭಾತ ಹೇಳಿದವರಲ್ಲವೆ?"

ವಿಶ್ವಾಮಿತ್ರ: "ಅವನ ಕರ್ತವ್ಯ ಅವನಿಗೆ! ನಮ್ಮ ಕರ್ತವ್ಯ ನಮಗೆ!!"

ನಾರದ: "ನಮ್ಮ ಕರ್ತವ್ಯಕ್ಕಾಗಿ ನಾವು ಎಲ್ಲೂ ಹೋಗುವುದೇ ಬೇಡ! ಅದೇ ನಮ್ಮನ್ನು ಇಲ್ಲಿಗೆ ಹುಡುಕಿಕೊಂಡು ಬರುತ್ತಿದೆ!!"

ಅಸಿತ: "ಹಾಗೆಂದರೆ?"

ದುರ್ವಾಸರ ಮುಖದಲ್ಲಿ ವಿಲಕ್ಷಣ, ವ್ಯಂಗ್ಯಪೂರ್ಣ ನಗೆಯೊಂದು ಮಿಂಚಿದ್ದನ್ನು ಉಳಿದವರು ಗಮನಿಸಿದರು!!

ಕಶ್ಯಪ: "ಲೋಕಕ್ಕೆ ಉಳಿಗಾಲವಿಲ್ಲ! ಕೋಪಿಷ್ಠರೆಂದು ಹೆಸರಾದ ದುರ್ವಾಸರು ಏಕೋ ನಗಲಾರಂಭಿಸಿದ್ದಾರೆ!"

ದುರ್ವಾಸ: "ನೀವೆಲ್ಲ ಗೃಹಸ್ಥರು! ಈ ಸಭೆಯಲ್ಲಿ ನಾನೊಬ್ಬನೇ ಸಂನ್ಯಾಸಿ! ಲೋಕಬಿಟ್ಟ ನಾನು ನಕ್ಕರೇನು, ಅತ್ತರೇನು? ನಮ್ಮ ನಿಮ್ಮ ಮಾರ್ಗಗಳು ಬೇರೆಯಷ್ಟೆ? ಬೈಸಿಕೊಳ್ಳುವುದಕ್ಕೆ ನಾನು, ಹೊಗಳಿಸಿಕೊಳ್ಳುವುದಕ್ಕೆ ನೀವು, ಅಲ್ಲವೆ?"

ದುರ್ವಾಸರು ದಕ್ಷಿಣದತ್ತ ನೋಡುತ್ತಲೇ ಈ ಮಾತುಗಳನ್ನಾಡುತ್ತಿದ್ದುದರಿಂದ ಎಲ್ಲರೂ ಅತ್ತಲೇ ನೋಡಲಾರಂಭಿಸಿದರು. ಆಮೇಲೆ ಅವರೆಲ್ಲ ನಾರದರ ಮುಖವನ್ನು ನೋಡಿ ನಕ್ಕರು!!

ಅಸಿತ: "ತಿಳಿಯಿತು! ಕರ್ತವ್ಯ ನಮ್ಮನ್ನು ಇಲ್ಲಿಗೆ ಹುಡುಕಿಕೊಂಡು ಬರುತ್ತಿದೆ. ಅದರ ಹೊಣೆಯನ್ನು ದುರ್ವಾಸರಿಗೇ ಬಿಡೋಣ!!"

ಎಲ್ಲರೂ "ತಥಾಸ್ತು" ಎಂದರು. ದುರ್ವಾಸರು ಮತ್ತೆ ನಕ್ಕು ಮೌನಿಗಳಾಗಿ ಧ್ಯಾನಾಸಕ್ತರಾದರು.

* * * *

ಯಾದವ ಯುವಕರ ದೊಡ್ಡ ಗುಂಪೊಂದು ಅವರತ್ತ ಬರುತ್ತಿತ್ತು. ಮುಂಚೂಣಿಯಲ್ಲಿ ಶ್ರೀಕೃಷ್ಣನಿಗೆ ಜಾಂಬವತಿಯಲ್ಲಿ ಹುಟ್ಟಿದ ಮಗ ಸಾಂಬ ಎದ್ದು ಕಾಣುತ್ತಿದ್ದ. ವಿವಾಹಿತನಾಗಿದ್ದರೂ ಎಳೆ ಯುವಕನಂತೆ ಕಾಣುತ್ತಿದ್ದ ಅವನನ್ನು ಉಳಿದವರು "ಹೆಣ್ಣುಮುಖ"ದವನೆಂದು ಹಾಸ್ಯ ಮಾಡುತ್ತಿದ್ದರು! ಸಾಂಬನ ಸುತ್ತ ಚಾರುದೇವ, ಚಾರುಗುಪ್ತಾದಿಗಳೂ (ರುಕ್ಮಿಣೀಪುತ್ರರೂ), ಭಾನುಮಂತ, ಚಂದ್ರಭಾನು ಮೊದಲಾದವರೂ (ಸತ್ಯಭಾಮೆಯ ಮಕ್ಕಳೂ) ಸುಬಾಹು, ಸೋಮಕ ಮುಂತಾದವರೂ (ಕಾಳಿಂದೀಪುತ್ರರೂ) ವಾಮನ, ವಹ್ನಿ ಮೊದಲಾದವರೂ (ಮಿತ್ರವಿಂದೆಯ ಪುತ್ರರೂ) ಹೀಗೆ ಬಹುಜನ ಯುವಕರು ಕೂಡಿದ್ದರು. ಇವರ ಮಿತ್ರರೂ ಸೇರಿ ನೂರಾರು ಜನ ತರುಣರು ದ್ವಾರಕೆಯ ಕಡೆಯಿಂದಲೇ ಬರುತ್ತಿದ್ದರು!

ದಿನಬೆಳಗಾದರೆ ಕುಡಿಯುವುದು, ಹೊಸಹೊಸ ಹಾಸ್ಯಪ್ರಸಂಗಗಳನ್ನು ಹುಡುಕುತ್ತಾ ಮಧ್ಯಾಹ್ನದವರೆಗೆ ಅಲೆಯುವುದು, ಅವರಿವರ ಮನೆಗಳಲ್ಲಿ ಸಿಕ್ಕದ್ದನ್ನು ಮೆಲ್ಲುತ್ತಾ, ಲೋಕವನ್ನೇ ಪರಿಗಣಿಸದೆ, ದಿನಕ್ಕೊಂದು ವೇಷಭೂಷಣ ತೊಟ್ಟು, ಹರಟೆ, ನಾಟಕಗಳನ್ನು ಮಾಡುತ್ತಾ, ವ್ಯರ್ಥ ಮನರಂಜನೆಗಳಲ್ಲಿ ಕಾಲ ಕಳೆಯುವುದು ಇವರ ರೀತಿಯಾಗಿತ್ತು!

ವರ್ಷಕ್ಕೊಮ್ಮೆ ಬರುವ 'ಹೋಳಿ' ಹಬ್ಬ ಇವರಿಗೆ ಸಾಲದಾಗಿತ್ತು! ಜೀವನಕ್ಕೆ ಯೋಚನೆಯಿಲ್ಲದೆ ಯಾರೋ ಊಟ ಹಾಕುತ್ತಾ, ಬಟ್ಟೆಬರೆಗೆ ಚಿಂತೆಯಿಲ್ಲದೆ, ನಿರುದ್ಯೋಗಿಗಳಾದ ಈ ತರುಣರು ನಗೆಯಾಡುವುದೊಂದೇ ಪುರುಷಾರ್ಥವೆಂದು ಭ್ರಾಂತಿಗೆ ಬಿದ್ದು ಗಣ್ಯರ ಗರ್ಹಣೆಗೆ ಪಾತ್ರರಾಗಿದ್ದರು. ಹಿರಿಯರನ್ನು ಆಗಾಗ ರೇಗಿಸಿದರೂ, ಕೃಷ್ಣಪುತ್ರರೆಂಬ ಕಾರಣಕ್ಕಾಗಿ ಸಹಿಸಿಕೊಂಡಿದ್ದ ಅವರು ಇವರನ್ನು ತಿದ್ದಲೂಲಾರದೆ, ಸಹಿಸಲೂಲಾರದೆ ಪೇಚಾಡುತ್ತಿದ್ದರು.

ಗುಂಪಿನಲ್ಲಿ ಹತ್ತಾರು ಯುವಕರು ಕುಡಿತದ ಸಾಮಗ್ರಿಗಳನ್ನೂ, ವೇಷ ಬದಲಿಸುವ ಅಲಂಕರಣೆಗಳನ್ನೂ, ವಾದ್ಯೋಪಕರಣಗಳನ್ನೂ ಸದಾ ಹತ್ತಿರವಿಟ್ಟೇ ಇರುತ್ತಿದ್ದರು! ದ್ವಾರಕೆಗೇ ಶಾಪವಾಗಿದ್ದ ಈ ಮಾದರಿ ಹಲವಾರು ಪುಂಡರ ಗುಂಪುಗಳೇ ಹುಟ್ಟಿಕೊಂಡಿದ್ದುವು!

* * * *

ಇವರನ್ನು ನೋಡನೋಡುತ್ತಲೇ ದೂರ್ವಾಸರ ಹುಬ್ಬುಗಳು ಗಂಟಿಕ್ಕಿದುವು! "ಎಂಥ ತಂದೆಗೆ ಎಂಥ ಮಕ್ಕಳು!" ಎಂದುದ್ಗರಿಸಿದರು! ನಿಟ್ಟುಸಿರಿಟ್ಟರು! "ಯಾದವರ ಕ್ಷೇಮಾರ್ಥವಾಗಿ, ಜರಾಸಂಧನ ಕಾಟದಿಂದ ಅವರನ್ನು ರಕ್ಷಿಸಲು ಸಮುದ್ರದಿಂದ ಭೂಮಿಯನ್ನೆತ್ತಿ ದ್ವಾರಕಾಕೋಟೆ ಕಟ್ಟಿಸಿದ್ದು, ಈ ನೀಚರ ಸಲುವಾಗಿಯೇ!" ಎಂದುದ್ಗರಿಸಿದರು! ಉಳಿದ ಮಹರ್ಷಿಗಳೂ ಆ ದುಗುಡದಲ್ಲಿ ಪಾಲ್ಗೊಂಡು, ಅವರಿಗೂ ಕಂಠಬಿಗಿದು ಬಂದಿತ್ತು.

"ಒಂದು ಹಳೆಯ ಕಥೆ ಹೇಳುತ್ತೇನೆ ಕೇಳಿ" ಎಂದು ದೂರ್ವಾಸರು ಆರಂಭಿಸಿದರು. "ಜರಾಸಂಧ ಬದುಕಿದ್ದ ಕಾಲ. ನಾನು ಪುಷ್ಕರದಲ್ಲಿ ಐದು ಸಾವಿರ ಶಿಷ್ಯರೊಡನೆ ತಪಸ್ಸು ಮಾಡುತ್ತಿದ್ದೆ. ನಾನು ನಿವೃತ್ತಿಮಾರ್ಗಿ ಎಂಬುದನ್ನೂ, ನನ್ನ ಶಿಷ್ಯರೆಲ್ಲ ಸಂನ್ಯಾಸಿಗಳೇ ಎಂಬುದನ್ನೂ ಜಗ ಬಲ್ಲುದಷ್ಟೆ! ಜರಾಸಂಧನ ಬಲಗೈ ಭಂಟರಾದ ಶಾಲ್ವದೇಶದ ಹಂಸ-ಡಿಂಭಕರು ದೊಡ್ಡ ಸೈನ್ಯದೊಡನೆ ಅಲ್ಲಿ ಬಂದು ನನ್ನನ್ನೂ, ನನ್ನವರನ್ನೂ, ಸಂನ್ಯಾಶ್ರಮವನ್ನೂ ಹೀನಾಮಾನವಾಗಿ ನಿಂದಿಸಿ ಅಪಮಾನಿಸಿದರು! ನನಗೆ ವಿವಾಹವಾಗುವಂತೆ ಅಪಹಾಸ್ಯಪೂರ್ವಕವಾಗಿ ಒತ್ತಾಯಿಸಿದರು! ತಪಸ್ಸನ್ನು ವ್ಯರ್ಥ ಮಾಡಬಾರದೆಂದು ಸಹಿಸಿಕೊಂಡು ಬುದ್ಧಿ ಹೇಳಿದೆ! ಆ ದುಷ್ಟರು ನಮ್ಮ ಕೌಪೀನಗಳನ್ನು ಕಿತ್ತು ಹರಿದುಹಾಕಿ ನಗ್ನರಾದ ನಮ್ಮನ್ನು ನೋಡಿ ಭಾರೀ ಅಪಹಾಸ್ಯ ಮಾಡಿದರು; ನಮ್ಮ ದಂಡಗಳನ್ನು ಮುರಿದು ಭಿಕ್ಷಾಪಾತ್ರೆಗಳನ್ನು ಒಡೆದರು, ಚೆಲ್ಲಾಡಿದರು. ಈಗಿನಷ್ಟು ಕೋಪವಿಲ್ಲದ ನಾನು ಶಿಷ್ಯರೊಡನೆ ಇದೇ ದ್ವಾರಕೆಗೆ ಬಂದೆ. ಸ್ವಾಮಿ ಕೃಷ್ಣ ನಮ್ಮನ್ನು ಕಂಡು ಮರುಗಿ, ನೂರಾರು ತನ್ನ ಪೀತಾಂಬರಗಳನ್ನು ತರಿಸಿ, ತಾನೇ ಹರಿದು ನಮಗೆ ಕೌಪೀನವಾಗಿ ಕೊಟ್ಟ![೧] ಎಂಥ ಔದಾರ್ಯ!! ಎಂಥ ವಿಪ್ರಭಕ್ತಿ!! ನಮಗೆ ಮೃಷ್ಟಾನ್ನವನ್ನೂ ಬಡಿಸಿದ. ಉಂಡು ತೃಪ್ತನಾದ ನಾನು ಅವನಿಗೊಂದು ಹಿತವನ್ನುಂಟುಮಾಡಲು, ನೋಡಲು ಅಸಹ್ಯವೂ ಶಾಸ್ತ್ರವಿರುದ್ಧವೂ ಆದಂತೆ ಕಂಡರೂ ಒಂದು ಕೆಲಸ ಹೇಳಿದೆ - "ನನ್ನ ಎಂಜಲನ್ನು ಮೈಗೆಲ್ಲ ಬಳಿದುಕೋ" ಎಂದು. ಅದನ್ನು ಶಿರಸಾವಹಿಸಿ ಕೃಷ್ಣ, ತನ್ನ ಪಾದಗಳನ್ನು ಬಿಟ್ಟು ಉಳಿದ ಶರೀರ ಭಾಗಕ್ಕೆಲ್ಲ ಲೇಪಿಸಿಕೊಂಡ! ಬ್ರಾಹ್ಮಣಶೇಷ ತನ್ನ ಪಾದಕ್ಕೆ ಸೋಂಕಿದರೆ ಅದು ಆ ಶೇಷಕ್ಕೆ ಅವಮಾನವೆಂದು ಬಗೆದು ಅವನು ಅದನ್ನು ಪಾವನವಾಗಿ ಭಾವಿಸಿದರೆ, ನಾನದನ್ನು ಆಗ ತಪ್ಪಾಗಿ ತಿಳಿದು ಶಪಿಸಿಬಿಟ್ಟೆ - 'ಪಾದಗಳಿಂದಲೇ ನಿನಗೆ ಮೃತ್ಯು ಬರಲಿ' ಎಂದು! ನಾನೆಂಥ ಅವಿವೇಕಿ? ಅಥವಾ ವಿಧಿಯೇ ಹಾಗೆ ಹೇಳಿಸಿತೋ, ಹೇಗೋ! ಉಪಕಾರಿಗೆ ಪ್ರತಿ ಅಪಕಾರ ಮಾಡಿದ ನನಗೆ ಪ್ರಾಯಶ್ಚಿತ್ತವೇನು?" ಎನ್ನುತ್ತಾ ದೂರ್ವಾಸರು ಬಿಕ್ಕಿ ಅತ್ತರು!

ಈ ಕಥೆ ಕೇಳಿರದಿದ್ದ ಇತರ ಮಹರ್ಷಿಗಳು ಭಗವಂತನ ಸೌಶೀಲ್ಯ, ಸೌಲಭ್ಯ ಗುಣಗಳನ್ನು ಮನಸಾರೆ ಕೊಂಡಾಡಿ, ದೂರ್ವಾಸರ ಪರಿತಾಪಕ್ಕೆ ತಾವೂ ಪರಿತಪಿಸಿ, ಅಶ್ರುಪೂರ್ಣರಾದರು.

* * * *

ಯುವಮೇಳ ಹತ್ತಿರ ಬರುತ್ತಿತ್ತು. ನಡುವೆ ಒಬ್ಬ ಗರ್ಭಿಣೀ ಸ್ತ್ರೀ ಬೇರೆ ಇದ್ದಳು! ಸುಂದರಿಯೂ ಸುವಸ್ತ್ರಾಲಂಕಾರಭೂಷಿತಳೂ, ಸುಕೇಶಿಯೂ, ಮಂದಸ್ಮಿತೆಯೂ ಆದ ಅವಳು ಈ ಪುಂಡರ ನಡುವೆ ದಿಢೀರನೆ ಎಲ್ಲಿಂದ ಕಾಣಿಸಿಕೊಂಡಳೆಂದು ಋಷಿಗಳು ಕ್ಷಣಮಾತ್ರ ಕಾಲ ಚಿಂತಿಸಿ, ಸತ್ಯಾರ್ಥ ಅರಿತರು!

---

೧. ಛಿತ್ವಾ ಛಿತ್ವಾ ದುಕೂಲಾನಿ ದೇವೇ ಕ್ಷೌಥ ಮೃದೂನಿ ಸಃ ದದಾ ತೇಭ್ಯೋ ತದಾ ವಿಷ್ಣುಃ ಸರ್ವೇಭ್ಯೋ ಜನಮೇಜಯ II -ಹರಿವಂಶ, ಭವಿಷ್ಯ ಪರ್ವ (೧೧೨-೨೪)

ಅವಳು "ಸಾಂಬ"ನ ಬದಲಾದ ಆಕಾರವೆಂಬುದನ್ನೂ, ಇಲ್ಲಿ ಇವರಿಂದ ಮಹರ್ಷಿಗಳಿಗೇನೋ ವಿಪತ್ತು, 'ಗೇಲಿ'ಯ ರೂಪದಲ್ಲಿ ಕಾದಿದೆಯೆಂದೂ, ದುರ್ವಾಸರು ಮತ್ತೇನು 'ಅವಿವೇಕ' ಮಾಡಿಯಾರೋ ಎಂಬ ಆತಂಕವೂ ಇತರ ಮಹರ್ಷಿಗಳನ್ನು ಕಾಡಲಾರಂಭಿಸಿತ್ತು.

ಗುಂಪು ಸಮೀಪಿಸಿತ್ತು. ಚಾರುದೇವ ಮುಂದೆ ಬಂದ! "ಮಹರ್ಷಿಗಳೇ! ಈ ವಿವಾಹಿತ ಮಹಿಳೆ, ಹಡೆಯಲು ತೌರೂರಿಗೆ ಹೊರಟಿದ್ದಾಳೆ. ಇವಳಿಗೆ ಎಂಥದು ಹೊಟ್ಟೆಯಲ್ಲಿ ಹುಟ್ಟೀತೆಂಬುದನ್ನು ಕಾಲಜ್ಞಾನ ತಿಳಿದ ನೀವು ಹೇಳಬಲ್ಲಿರಾ?" ಎಂದು ಕೇಳಿದ.

ಮೌನಿಗಳಾದ ವಸಿಷ್ಠರು ಅವರನ್ನು ಸುಮ್ಮನೆ ಮುಂದೆ ಹೋಗುವಂತೆ ಕೈಯಾಡಿಸಿದರು. ಕ್ರುದ್ಧನಾದ ಚಂದ್ರಭಾನುವು "ನಾವು ದಕ್ಷಿಣೆ ಕೊಡುತ್ತೇವೆ! ಬಿಟ್ಟಿ ಜ್ಯೋತಿಷ ಕೇಳಲು ನಾವು ಬರಲಿಲ್ಲ! ನಾವು ಭಿಕ್ಷುಕರೂ ಅಲ್ಲ, ನಮಗೇಕೆ ಮುಂದೆ ಹೋಗೆನ್ನುವಿರಿ?" ಎಂದು ಕೇಳಿದ.

ಭೃಗುವು "ನಿಮ್ಮ ಹುಡುಗಾಟಕ್ಕೆ ನಮಗೆ ವೇಳೆಯಿಲ್ಲ. ಇಗೋ ಇಲ್ಲಿರುವ ದುರ್ವಾಸರು ಬೆಂಕಿಯಿದ್ದಂತೆ! ಅವರನ್ನು ಕೆಣಕಬೇಡಿ. ಸುಮ್ಮನೆ ಹೋಗಿ" ಎಂದು ನಯವಾಗಿ ಎಚ್ಚರಿಸಿದರು.

ಪುಕ್ಕಟೆ ಹಾಸ್ಯ ತಪ್ಪಿತೆಂಬ ಆತಂಕದಿಂದ ಯುವಕರು ಬುದ್ಧಿಸಮತೋಲನ ಕಳೆದುಕೊಂಡರು. ಋಷಿಗಳು ಹೆಣ್ಣೋ ಗಂಡೋ ಏನಾದರೊಂದು ಹೇಳಿಯೇ ಹೇಳುವರೆಂದೂ, ಆಗ ಎಲ್ಲರೂ ಘೊಳ್ಳನೆ ನಕ್ಕು "ನಿಮ್ಮ ಪಿಂಡ! ಇಲ್ಲಿ ನೋಡಿ!" ಎನ್ನುತ್ತಾ ಸಾಂಬನ ನಿಜವೇಷವನ್ನು ತೋರಿಸಿ, ಹೆಣ್ಣು ಅಲಂಕಾರ ಕಿತ್ತು, ಕೇಕೆ ಹಾಕಿ, ಕುಣಿದಾಡಿ, ಋಷಿಗಳನ್ನು ಹುಚ್ಚರನ್ನಾಗಿಸಿ, ತಾವು ಬಿರಿದು ನಗುವ ಅವಕಾಶ ಕಳೆಯಿತೆಂದು ಅವರಿಗೆ ಕೋಪ ಬಂದಿತ್ತು. ಮೊದಲೇ ಕುಡಿದಿದ್ದವರು! ಯೌವ್ವನದ ಮದ ಬೇರೆ!!

ಸುಚಾಹುವು ಹೀಗೆಂದ: "ದುರ್ವಾಸರು ಬೆಂಕಿಯಾದರೆ ನಮಗೇನು? ಕೌಪೀನಕ್ಕೂ ಗತಿಯಿಲ್ಲದ ಈ ತಿರುಕ, ಅದರೊಳಗಿನ ವಸ್ತುವನ್ನು ವ್ಯರ್ಥ ಮಾಡಿದ ನಪುಂಸಕನಲ್ಲವೆ? ಯಾವನೋ ಮಹಾನುಭಾವ ಅದನ್ನು ಸಾರ್ಥಕಮಾಡಿ, ಈ ಯುವತಿಯಲ್ಲಿ ಗರ್ಭವುಂಟು ಮಾಡಿದರೆ, ಇವನಿಗೇನು ನಷ್ಟ? ಅದು ಗಂಡೋ, ಹೆಣ್ಣೋ, ಯಾವ ಸುಡುಗಾಡು ವಸ್ತುವೋ ಎಂದಿಷ್ಟು ಹೇಳಲಾರಿರಾದರೆ, ನೀವೆಂಥ ತ್ರಿಕಾಲಜ್ಞರು?"

ಕಣ್ವ: "ಎಲೋ, ಪುಂಡರಿರಾ! ನಮ್ಮ ತ್ರಿಕಾಲಜ್ಞತ್ವದ ಪರೀಕ್ಷೆ ನಿಮಗೆ ಬೇಡ, ಸುಮ್ಮನೆ ಹೋಗಿ!" ಎಂದು ಕೋಪ ಸಹಿಸಿ ಎಚ್ಚರಿಸಿದರು.

ಪುಂಡರು ಋಷಿಗಳ ಮೇಲೆಯೇ ಎರಗಿದರು. "ಇವತ್ತು ನಿಮ್ಮ ಜ್ಞಾನ ಪರೀಕ್ಷೆ ಆಗಿಯೇ ತೀರಬೇಕು! ಇಲ್ಲವಾದರೆ ನೀವು ಷಂಡರೆಂಬುದೂ ಲೋಕಕ್ಕೆ ಗೊತ್ತಾಗಬೇಕು" ಎಂದು ಕೂಗಾಡಿ, ಅಸಭ್ಯ ಚೀತ್ಕಾರಗಳನ್ನು ಮಾಡಿದರು.

"ನೀವು ನಿಜವಾಗಿ ಕೃಷ್ಣಪುತ್ರರೇ!" ಎಂದು ಅಸಿತರು ಉದ್ಗರಿಸಿ, ಕಣ್ಣೀರು ಹಾಕಿದರು.

"ಹೌದು! ಷೋಡಶ ಸಹಸ್ರಸ್ತ್ರೀಪತಿಯೂ, ಸಾವಿರಾರು ಮಕ್ಕಳು ಮೊಮ್ಮಕ್ಕಳನ್ನು ಪಡೆದವನೂ, ಸ್ತ್ರೀಲಂಪಟನೆಂದು ಖ್ಯಾತಿಯುಳ್ಳವನೂ ಆದ ಕೃಷ್ಣನೇ ನಮ್ಮ ತಂದೆ" ಎಂದು ಯುವಕರು ಮದ್ಯದ ಅಮಲಿನಲ್ಲಿ ಒದರಿದರು.

ದುರ್ವಾಸರಿಗೆ ಇನ್ನು ಸಹಿಸಲಾಗಲಿಲ್ಲ! ಅಷ್ಟರಲ್ಲಿ ಒಬ್ಬ "ಈ ಸಂನ್ಯಾಸಿಯ ಕೌಪೀನದಲ್ಲಿ ಏನಿದೆ ನೋಡೋ!" ಎಂದ. ಇತರರೆಲ್ಲ ನಕ್ಕರು. ಇನ್ನೊಬ್ಬ ದುರ್ವಾಸರ ಕೌಪೀನಕ್ಕೇ ಕೈಹಾಕಿದ!

ದುರ್ವಾಸರು ಕೆಂಗಣ್ಣುಬಿಟ್ಟು, ಕಮಂಡಲು ತೀರ್ಥ ಕೈಯ್ಯಲ್ಲಿ ಹಿಡಿದು "ಇಕೋ, ನಿಮ್ಮ ಪ್ರಶ್ನೆಗೆ ಉತ್ತರಿಸುತ್ತೇನೆ. ನಿಮ್ಮ ಯಾದವ ಕುಲವನ್ನೇ ನಾಶ ಮಾಡುವ ಕಬ್ಬಿಣದ ಒನಕೆಯೊಂದು ಈ ಗರ್ಭಿಣಿಯ ಹೊಟ್ಟೆಯಿಂದ ನಾಳೆಯೇ ಹುಟ್ಟುತ್ತದೆ!!" ಎಂದು ಶಾಪವಿತ್ತುಬಿಟ್ಟರು!! ಭೂಮಿ ಕಂಪಿಸಿತು!!!

# ೩. ಉಗ್ರಸೇನ ರಾಜನ ಸಭೆ!

ಯಾದವ ಯುವಕರು ಸ್ತಬ್ಧರಾಗಿ ನಿಂತರು! ಹಿಂದೆ ನಿಂತಿದ್ದವರಿಗೆ ಋಷಿ ಏನು ಹೇಳಿದರೆಂಬುದೇ ಕೇಳಿಸಲಿಲ್ಲ. ಗುಸುಗುಸು ಮಾತಿನಲ್ಲಿ ಎಲ್ಲರೂ ಕೇಳಿ ಅರಿತಾದ ಮೇಲೆ ಒಬ್ಬರೂ 'ಪಿಟಕ್' ಎನ್ನದೇ ಅಲ್ಲೇ ಒಂದೆರಡು ವಿನಾಡಿಯಷ್ಟು ಕಾಲ ನಿಂತರು!

ದುರ್ವಾಸರ ಸುತ್ತ ಇದ್ದ ಋಷಿಗಳು "ಇದೇನು ಮಾಡಿದಿರಿ?" ಎಂಬಂತೆ, ದುರ್ವಾಸರನ್ನು ದುರುಗುಟ್ಟಿಕೊಂಡು ನೋಡಿದರು.

ದುರ್ವಾಸರಿಗೂ ತಾವೇಕೆ ಹಾಗೆ ಆಡಿದರೆಂಬುದೇ ಕ್ಷಣಕಾಲ ತಿಳಿಯಲಿಲ್ಲ! ಜ್ಞಾನದೃಷ್ಟಿಯಿಂದ ಅರಿತಾದ ಮೇಲೆ, ಅದರಲ್ಲಿ ತಮ್ಮದ್ದೇನೂ ಯತ್ನವಿಲ್ಲವೆಂದೂ ಅದು ದೈವೇಚ್ಛೆಯೆಂದೂ ತೃಪ್ತಿ ತಂದುಕೊಂಡರೂ, ಆಡಿದ ಮಾತುಗಳಿಗೆ ಇತಿಹಾಸ ತಮ್ಮನ್ನೇ ಹಳಿಯುತ್ತದೆಂದು ಹಳಹಳಿಸಿಕೊಂಡರು.

ಕೋಪವೃದ್ಧಿಯಾದಷ್ಟೂ ತಪಸ್ಸು ಬೆಳೆಯುವುದೆಂಬ ವರ ಪಡೆದ ಈ ಋಷಿಯ ಬಲು ವಿಚಿತ್ರ ಸ್ವಭಾವವನ್ನರಿತಿದ್ದ ಇತರ ಮಹರ್ಷಿಗಳು ತಲೆತಗ್ಗಿಸಿ ಕುಳಿತಿದ್ದರು.

ಸಾಂಬನಿಗೆ ಕೊಂಚ ಪಶ್ಚಾತ್ತಾಪವಾಗಿದ್ದರೂ, ಕ್ಷಮೆ ಕೇಳುವಷ್ಟು ಮಟ್ಟಕ್ಕೆ ಆಗಿರಲಿಲ್ಲ. ಗುಂಪಿನ ಸ್ವಾಭಿಮಾನಕ್ಕೆ ಅವನ ಸ್ವಾಭಿಮಾನವೂ ತಲೆಬಾಗಿಯೇ ಇತ್ತು.

"ತಲೆತಿರುಕನೊಬ್ಬ ಏನೇನೋ ಬೊಗಳಿದರೆ ಹಾಗೇ ಆಗಬೇಕೆಂಬ ನಿಯಮವೇನುಂಟು?" ಎಂದೊಬ್ಬ ಗುಂಪಿನಲ್ಲಿ, ಕೊಂಚಹೊತ್ತಾದ ಮೇಲೆ ತಗ್ಗುಧ್ವನಿಯಲ್ಲಿ ಹೇಳಿದ.

ದುರ್ವಾಸರ ಕಿವಿಗೂ ಅದು ಬಿತ್ತು! ಮತ್ತೆಲ್ಲಿ ಕೋಪ ತಲೆಗೇರುವುದೋ ಎಂದು ಆತಂಕಪಟ್ಟುಕೊಂಡು ವಸಿಷ್ಠರು ಆ ಕಿಡಿಗೇಡಿ ನೃತದೃಷ್ಟ ಯುವಕರಿಗೆ "ಈಗಲಾದರೂ ಸುಮ್ಮನೆ ಹೋಗಿ" ಎಂಬಂತೆ ಕೈಸನ್ನೆ ಮಾಡಿದರು.

ಕೇಕೆಹಾಕುತ್ತಾ, ಋಷಿಗಳನ್ನು ಅವಹೇಳನ ಮಾಡುವ ಕೂಗುಗಳನ್ನು ಹಾಕುತ್ತಾ ಯುವಕರ ಗುಂಪು ದ್ವಾರಕೆಯತ್ತ ಹೊರಟುಹೋಯಿತು. ಇತ್ತ ಬರುತ್ತಿದ್ದಾಗ ಇದ್ದ ಅವರ ಸೊಕ್ಕು ಈಗ ಮುರಿದಿತ್ತಾದರೂ, ಕಳೆದುಹೋದ ಮನಃಸ್ಥೈರ್ಯವನ್ನು ಮತ್ತೆ ಎಬ್ಬಿಸಿ ಪ್ರತಿಷ್ಠಿಸಿಕೊಳ್ಳುವ ಅವರ ಆಗಿನ ಯತ್ನದಲ್ಲಿ ಅವರು ಮಾಡುತ್ತಿದ್ದುದೆಲ್ಲ ಶೋಚನೀಯವಾಗಿಯೇ ವಸಿಷ್ಠರಿಗೆ ಕಂಡಿತು. "ಕಾಲಾಯ ತಸ್ಮೈ ನಮಃ" ಎಂದುದ್ಗರಿಸಿದರು.

ಋಷಿ ಸಂಘ ಬಹುಹೊತ್ತು ಮೌನವಾಗಿಯೇ ಕುಳಿತಿತ್ತು. ಸೂರ್ಯ ಮೆಲ್ಲ ಮೆಲ್ಲನೆ ಪಶ್ಚಿಮದತ್ತ ಇಳಿಯಲಾರಂಭಿಸಿದ್ದ. ಋಷಿಗಳು ಅಂದು ಉಪವಾಸ ಮಾಡಲು ನಿಶ್ಚಯಿಸಿದರು. ಶ್ರೀಕೃಷ್ಣನ ಅರಮನೆಗೆ ಆಗಿಂದಾಗಲೇ ಹೋಗುವುದು ಬೇಡವೆಂದೂ, ಯುವಕರಿಂದಲೇ ಮೊದಲು ಸಮಾಚಾರ ದ್ವಾರಕೆಗೆ ತಿಳಿಯಲೆಂದೂ ಅತ್ರಿಗಳು ಸೂಚನೆ ಮಾಡಿದರು.

ದುರ್ವಾಸರು ಪರಿತಪಿಸುತ್ತಾ "ನಾನೆಲ್ಲಾದರೂ ಹಿಮಾಲಯಕ್ಕೆ ಹೀಗೆಯೇ ಹೊರಟುಬಿಡುತ್ತೇನೆ. ನಾನು ಬಂದಲ್ಲೆಲ್ಲ ಅನರ್ಥ ತಪ್ಪದು! ನನಗೆ ಮೃತ್ಯುವೂ ಬರಲಿಲ್ಲ" ಎಂದು ತಮ್ಮನ್ನೇ ಬೈದುಕೊಂಡರು.

ವಿಶ್ವಾಮಿತ್ರರು "ಹಿಂದೆ ವಾಲ್ಮೀಕಿ, ಕ್ರೌಂಚವನ್ನು ಕೊಂದ ಬೇಡನಿಗೆ ಶಾಪವಿತ್ತುದರಲ್ಲಿ ದೈವದ ಕೈವಾಡವಿದ್ದಂತೆ, ಈಗಲೂ ನಿಮ್ಮ ಶಾಪೋಕ್ತಿಯಲ್ಲೂ ದೈವದ ಪ್ರೇರಣೆ ಇದೆ. ನೀವೇಕೆ ಆತ್ಮನಿಂದನೆ ಮಾಡಿಕೊಳ್ಳುತ್ತೀರಿ?" ಎಂದು ಸಮಾಧಾನ ಪಡಿಸಿದರು.

*****

ಉಗ್ರಸೇನ ಮಹಾರಾಜನ ಮನೆಯಲ್ಲಿ ಅಗ್ನಿಹೋತ್ರ ಆರಿಹೋಗಿತ್ತು! ಶ್ರೀಕೃಷ್ಣನ ಅರಮನೆಯಲ್ಲೂ ಹಾಗೇ ಆರಿತ್ತು! ಗಾಳಿಯಿಲ್ಲ, ಮಳೆಯಿಲ್ಲ, ಇದೇನು ಉತ್ಪಾತ! ಎಂದು ಅರಮನೆಯ ಪುರೋಹಿತರು ಚಿಂತಾಕ್ರಾಂತರಾಗಿ ದೊರೆಗೆ ಹೇಳಿದರು. ಉಗ್ರಸೇನನಿಗೆ ಮೊದಲು ಅದರರ್ಥ ಸರಿಯಾಗಿ ಆಗಲಿಲ್ಲ. ಶ್ರೀಕೃಷ್ಣನ ಪುರೋಹಿತ ಈ ವಿಚಾರ ತಿಳಿಸಲು ಬಂದಾಗ ಭಗವಂತನು ಯೋಗಾಸನದಲ್ಲಿ ಮೌನವಾಗಿ ಕುಳಿತು ಕಣ್ಣುಮುಚ್ಚಿದ್ದ. ಪ್ರತೀಹಾರಿಯು ಬ್ರಾಹ್ಮಣನಿಗೆ ಸುಮ್ಮನೆ ಹೊರಟುಹೋಗುವಂತೆ ಸೂಚಿಸಿದ. ನಿರುಪಾಯನಾಗಿ ಪುರೋಹಿತ ಹಿಂದಿರುಗಿದ.

ರುಕ್ಮಿಣೀದೇವಿಯೊಡನೆ ಸಾಮಾನ್ಯವಾಗಿ ಹೆಚ್ಚು ಮಾತಾಡದ ಅವಳ ಪ್ರತಿಸ್ಪರ್ಧಿ ಸತ್ಯಭಾಮಾದೇವಿ, ಗಡಿಬಿಡಿಯಲ್ಲಿ ಆ ಮಧ್ಯಾಹ್ನ ಸಡಗರದಿಂದ ರುಕ್ಮಿಣಿಯ ರಾಣೀನಿವಾಸಕ್ಕೆ ಆಪ್ತ ದಾದಿಯರೊಡನೆ ಪಲ್ಲಕ್ಕಿಯಲ್ಲಿ ಧಾವಿಸಿದಳು. ಮಾಳಿಗೆಯ ಮೇಲಿಂದಲೇ ಇದನ್ನು ಗಮನಿಸಿದ್ದ ರುಕ್ಮಿಣಿ, ತಾನೇ ಮೆಟ್ಟಲಿಳಿದು ಬಂದು ಸತ್ಯಭಾಮೆಯನ್ನು ಸ್ವಾಗತಿಸಿ ಒಳಗೆ ಕರೆದೊಯ್ದಳು!

ಪಲ್ಲಂಗದ ಮೇಲೆ ಇಬ್ಬರೂ ಕುಳಿತಾದ ಮೇಲೆ, ರಾಣಿಯರಿಬ್ಬರೂ ಸುತ್ತಲಿನ ಚೇಟಿಯರನ್ನೊಮ್ಮೆ ದಿಟ್ಟಿಸಿ ನೋಡಿದರು! ಚೇಟಿಯರು ಅದನ್ನು ಅರ್ಥಮಾಡಿಕೊಂಡು ನಿಶ್ಶಬ್ದವಾಗಿ ಚೆದುರಿ, ಒಳಕೋಣೆಯ ಕದವನ್ನು ಹೊರಗಿಂದ ಮುಚ್ಚಿ, ಅಲ್ಲೆ ಕಾಯುತ್ತಾ ಕುಳಿತರು. ಏನೋ ತುರ್ತು ಸಮಾಚಾರವಿರಬೇಕೆಂತೂ ಇಲ್ಲವಾದರೆ ಇವರ್‍ಯಾರೂ ಹೀಗೆ ಸೇರುತ್ತಿರಲಿಲ್ಲವೆಂದೂ ಚೇಟಿಯರು ಅರ್ಥೈಸಿಕೊಂಡು ಆತಂಕದಿಂದ ಮೌನವಾಗಿದ್ದರು.

ಒಳಗೆ ಹೀಗೆ ಮಾತು ನಡೆದಿತ್ತು.

*****

ಸತ್ಯಭಾಮಾ: "ಅಕ್ಕ! ನಿನ್ನನ್ನೊಂದು ಕೇಳಲೇ?"

ರುಕ್ಮಿಣಿ: (ನೀರುಗಣ್ಣಿನಿಂದ 'ಕೇಳು' ಎಂಬಂತೆ ಸತ್ಯಭಾಮೆಯನ್ನು ನೋಡುತ್ತಾಳೆ!)

ಸತ್ಯ: "ಹೇಗೆ ಕೇಳಲಿ!... ಬಾಯೇ ಬರುತ್ತಿಲ್ಲ! ಏನೆಂದು ಹೇಳಲಿ?..." (ಬಿಕ್ಕಳಿಸುತ್ತಾಳೆ)

ರುಕ್ಮಿಣಿ: "ಮೊನ್ನೆ ನಮ್ಮ ಒಡೆಯರು 'ನನಗೆ ನೀನು ನಿನಗೆ ನಾನು... ಯಾರಿಂದಲೂ ಏನನ್ನೂ ನಿರೀಕ್ಷಿಸಬೇಡ... ಉತ್ತರಕ್ರಿಯೆಯನ್ನು ಸಹ' ಎಂದು ಹೇಳಿದ ಮೇಲೆ, ತಂಗೀ ನೀನು ಏನು ಕೇಳುವೆಯೆಂದು ನಾನು ಬಲ್ಲೆ! ನಾನು ಅದಕ್ಕೆ ಉತ್ತರಿಸಿಯೂ ಆಗಿದೆ... ಧೈರ್ಯ ತಂದುಕೋ! ನನಗಿಂತ ನೀನು ಪ್ರಕೃತಿಯಿಂದಲೇ ಹೆಚ್ಚು ಧೈರ್ಯಶಾಲಿ. ಪತಿರಾಯರೊಡನೆ ಎಷ್ಟೋ ಸಲ ಯುದ್ಧಭೂಮಿಗೂ ಹೋಗಿ ಬಂದಿರುವವಳು ನೀನು!! ಸಾವಿನ ಚಿತ್ತಕ್ಕೆ ಅಂಜುವವಳು ನೀನಲ್ಲ! ನಾನದನ್ನು ಎದುರಿಸುವ ಅವಕಾಶವೇ ಬಂದಿಲ್ಲ"

ಸತ್ಯ: "ಅಕ್ಕ! ಗಟ್ಟಿಯಾಗೇ ಇದ್ದ ನನ್ನ ಮಾಂಗಲ್ಯದ ಬಂಗಾರದ ತಂತು ಇದ್ದಕ್ಕಿದ್ದಂತೆ ಇಂದು ಹರಿಯಿತು! ಇದು ಏಕೋ ಮನಸ್ಸಿಗೆ ಆತಂಕವಾಗಿ, ನಿಮ್ಮನ್ನು ಕಂಡು ಬರೋಣವೆಂದು ಅನ್ನಿಸಿತು... ಇಲ್ಲಿ ನೀವು ಬೇರೊಂದು ಅಶುಭಸೂಚನೆಯನ್ನು ಕೊಡುತ್ತಿರುವಿರಿ! ಏನೇನು ಕಾದಿದೆಯೋ?... ಯಾರು ಬಲ್ಲರು?

ರುಕ್ಮಿಣಿ: "ಒಡೆಯರು 'ಯಾರಿಂದಲೂ ಉತ್ತರಕ್ರಿಯೆಯನ್ನೂ ಸಹ ನಿರೀಕ್ಷಿಸಬೇಡ' ಎಂದದ್ದರಲ್ಲಿ, ಇದ್ದುದರಲ್ಲಿಯೇ ಒಂದು ಶುಭಸೂಚನೆಯಿಲ್ಲವೆ, ತಂಗಿ? ಯಾರಿಗೆ ಯಾರುಂಟು? ಈ ವೇದಾಂತ ನಿನಗೂ ಗೊತ್ತಿದ್ದದ್ದೇ ಅಲ್ಲವೆ?"

ಸತ್ಯ: (ಕಣ್ಣೊರೆಸಿಕೊಳ್ಳುತ್ತಾ) "ಅದು ಸರಿ ಅಕ್ಕ! ಆದರೆ ನಮ್ಮ ಪತಿರಾಯರು ಶ್ರಮಪಟ್ಟು ಸ್ಥಾಪಿಸಿದ ಒಂದು ಭವ್ಯ ರಾಜಕೀಯ, ಸಾಮಾಜಿಕ, ನೈತಿಕ ಪರಂಪರೆ ಮುಂದುವರೆಯಬೇಡವೆ? ನಾನೂ ನೀವೂ ಆ ಪರಂಪರೆಯ ಹೊಣೆ ಹೊತ್ತಿಲ್ಲವೆ? ಹೊತ್ತೆವೆಂಬುದೇ ಭ್ರಾಂತಿಯೆಂದು ಬಲಾತ್ಕಾರವಾಗಿ ಅರಿವಾದರೆ ಆಘಾತ ಆಗುವುದಿಲ್ಲವೇ?"

ರುಕ್ಮಿಣಿ: "ಸತ್ಯಾ! ನೀನು ರಾಜಕೀಯ ಬಲ್ಲವಳು! ಒಡೆಯರಿಗೆ ಯುದ್ಧದಲ್ಲಿ ಸಾರಥ್ಯ ಸಲಹೆಗಳನ್ನು ಕೊಡಬಲ್ಲವಳು. ಕೊಟ್ಟು ಕೀರ್ತಿವಂತಳಾಗಿರುವವಳು. ಮರ್ಮ ಹೇಳಿಬಿಡಲೇ! ನೀನು ಭೂದೇವಿಯಂತೆ ಮಕ್ಕಳ ಭಾರವನ್ನು ಸಹಿಸಬಲ್ಲವಳು. ಅಂಥ ಎಷ್ಟೋ ಮಕ್ಕಳ ಸಾವನ್ನು ಭೂದೇವಿ ಕಂಡೂ ಸಹಿಸಿರುವಂತೆ ಧೈರ್ಯ ಗುಣವುಳ್ಳವಳು! ಏನೇ ಆದರೂ ಸದಾ ಒಡೆಯರ ಜೊತೆಯಲ್ಲೇ ಇರು. ನನಗೆ ಅನುಭವವಿಲ್ಲದ್ದನ್ನು ನಾನು ಸಹಿಸುವುದು ಕಷ್ಟ."

ಸತ್ಯ: " 'ನನಗೆ ನೀನು, ನಿನಗೆ ನಾನು' ಎಂದು ಪತಿದೇವರು ಹೇಳಿದ್ದು ನಿನ್ನೊಡನೆಯೇ ಹೊರತು ನನ್ನೊಡನೆ ಅಲ್ಲವಲ್ಲ?"

ರುಕ್ಮಿಣಿ: (ಅರ್ಥಶೂನ್ಯ ಕಿರುನಗೆ ನಗಲು ಯತ್ನಿಸುತ್ತಾ) "ತಂಗೀ, ಈ ವಿಷಯದಲ್ಲಿ ಇನ್ನೂ ಈ ಆಪತ್ಕಾಲದಲ್ಲಿ ಈರ್ಷ್ಯೆಯೇ? ಪಾರಿಜಾತದ ಕಹಿಯನ್ನು ನೀನಿನ್ನಾದರೂ ಮರೆಯಬೇಡವೇ? ಒಡೆಯರ ತುಲಾಭಾರ ನಡೆದದ್ದು ಸಾಕು! ನಿನ್ನ ಭಾರ ನೀನಿಳಿಸಿಕೋ! 'ನನಗೆ ನೀನು, ನಿನಗೆ ನಾನು' ಎಂದು ಪ್ರಭುಗಳು ಹೇಳಿದ್ದು ಈಗ ನನಗೂ ನಿನಗೂ ಮಾತ್ರವಲ್ಲದೆ ರಾಣೀವಾಸದವರೆಲ್ಲರಿಗೂ ಅನ್ವಯವಲ್ಲವೆ? ಇಲ್ಲದ ಭಾವ ಕಲ್ಪಿಸಬೇಡ"

ಇದಕ್ಕಿದ್ದಂತೆ ರಾಣಿವಾಸದೊಳಕ್ಕೆ ಜಾಂಬವತಿ ಬರುತ್ತಾಳೆ! "ಅಕ್ಕಂದಿರಾ! ಈ ಅನ್ಯಾಯ ಕೇಳಿದಿರಾ! ಸಾಂಬನಿಗೆ ಹೆಣ್ಣು ವೇಷ ಹಾಕಿ ಗರ್ಭಿಣಿಯಂತೆ ಮಾಡಿ, ಅರಸುಕುವರರು ಋಷಿಗಳನ್ನು ಲೇವಡಿ ಮಾಡಲು ಹೋಗಿ 'ಇವಳಲ್ಲೇನು ಹುಟ್ಟುವುದು?' ಎಂದು ಕೇಳಿ, 'ನಿಮ್ಮ ವಂಶವನ್ನು ನಾಶ ಮಾಡುವ ಕಬ್ಬಿಣದ ಒನಕೆ' ಎಂಬ ಶಾಪವನ್ನು ಪಡೆದು ಬಂದಿದ್ದಾರೆ! ಇವರಿಗಾರೂ ಬುದ್ಧಿ ಹೇಳುವವರಿಲ್ಲವೆ?" (ಅಳುತ್ತಾಳೆ)

ಇಷ್ಟರೊಳಗೆ ಮಿತ್ರವಿಂದಾ, ಸತ್ಯಾ (ನಾಗ್ನಜಿತಿ), ಭದ್ರಾ, ಕಾಳಿಂದೀ, ಲಕ್ಷಣಾ, ರೋಹಿಣಿ ಎಂಬ ಇತರ ಆರು ಪಟ್ಟಮಹಿಷಿಯರೂ ಅಲ್ಲಿಗೆ ಬಂದು ಭಯಭ್ರಾಂತ ಮುಖಗಳಿಂದ ರುಕ್ಮಿಣಿಯನ್ನೂ ಸತ್ಯಭಾಮೆಯನ್ನೂ ನಿಟ್ಟಿಸಿ ನೋಡಿ ಅಳಲಾರಂಭಿಸಿದರು. ರಾಣೀವಾಸ ರೋದನ ಧ್ವನಿಯಲ್ಲಿ ಮುಳುಗಿತು. ಚೇಟಿಯರು ದಿಗ್ಭ್ರಾಂತರಾಗಿ ಸುತ್ತುವರೆದು "ಏನಾಜ್ಞೆಯೋ, ಏನು ಅನಾಹುತವೋ?" ಎಂದು ಗಾಬರಿಯಿಂದ ಒಡತಿಯರ ಮುಖ ನೋಡುತ್ತಾ ನಿಂತರು. ಇನ್ನು ಮುಚ್ಚಿಡುವ ಯಾವ ಸಮಾಚಾರವೂ ಉಳಿಯಲಿಲ್ಲ. ಅರಮನೆಗೇ ತಿಳಿದ ವಿಷಯವಾಯಿತು. ಸ್ವಲ್ಪಕಾಲ ಯಾರೂ ಸಂತೈಸುವವರಿಲ್ಲವೇ ದುಃಖದ ಕಟ್ಟೆಯೊಡೆದ ಬಳಿಕ ರಾಣಿಯರು ಒಬ್ಬರ ಮುಖವನ್ನೊಬ್ಬರು ನೋಡುತ್ತ ನಿಂತರು. ರುಕ್ಮಿಣಿ ಮಾತನಾಡಲಾರಂಭಿಸಿದಳು.

ರುಕ್ಮಿಣಿ: "ನಾವು ಯಾರನ್ನೂ ಇನ್ನೊಬ್ಬರು ಇಲ್ಲಿ ದೂಷಿಸುವಂತಿಲ್ಲ. ಎಲ್ಲರ ಮಕ್ಕಳೂ ಇಲ್ಲಿ ಸೇರಿಯೇ ಈ ಅನರ್ಥವನ್ನು ಒಟ್ಟಿಗೆ ತಂದಿದ್ದಾರೆ. ಯಾರಿಗೆ ಯಾರು ಬುದ್ಧಿ ಹೇಳಬೇಕು? ಕೇಳುವ ವಯಸ್ಸೇ? ಕುಲವೇ ಕೆಟ್ಟು ಕೂತಿದೆ. ಸುತ್ತಣ ವಾತಾವರಣ ಹಾಗಿದೆ! ದೇವರೂ ಕೈಬಿಟ್ಟ ಸ್ಥಿತಿಯಂತೆ ಕಾಣುತ್ತದೆ..."

ಜಾಂಬವತಿ: "ಹಾಗನ್ನಬೇಡಿ ಅಕ್ಕ. ನನ್ನ ತಂದೆ ದೇವರ ಹಿಂದಿನ ಅವತಾರವನ್ನು ಪ್ರತ್ಯಕ್ಷ ಕಂಡವರು. ಅದರ ಹಿಂದಿನ ತ್ರಿವಿಕ್ರಮಾವತಾರವನ್ನೂ ಸಹ. ಈಗ ನಾವೆಲ್ಲರೂ ಇನ್ನೊಂದು ಅವತಾರಿಯನ್ನೇ ಕೈಹಿಡಿದಿದ್ದೇವೆ. ಸಮಾನಭಾಗ್ಯವುಳ್ಳವರು ನಾವು. ಅಶ್ವತ್ಥಾಮರ ನಾರಾಯಣಾಸ್ತ್ರದಿಂದ ಪಾಂಡವರನ್ನು ರಕ್ಷಿಸಿದ ಅವತಾರಿಗೆ, ಉತ್ತರೆಯ ಗರ್ಭವಲ್ಲಿದ್ದ ಶಿಶು ಅದೇ ಅಶ್ವತ್ಥಾಮರ ಅಪಾಂಡವಾಸ್ತ್ರದಿಂದ ಬೆಂದುಹೋಗಿ ಸತ್ತು ಹೊರಬಿದ್ದಾಗ, ಅದನ್ನು ಮತ್ತೆ ಜೀವಂತ ಮಾಡಿದ ಅವತಾರಿ ನಮ್ಮ ಪತಿಯಾಗಿರುವಾಗ, ಈ ಶಾಪವನ್ನು ನಿವಾರಿಸುವುದು ಅಸಾಧ್ಯವೇನಲ್ಲ! ಅಕ್ಕಾ ನೀವು ಒಡೆಯರಲ್ಲಿ ಈ ವಿಷಯವನ್ನು ಎತ್ತಿದರೆ ನಾವೂ ಧ್ವನಿಕೂಡಿಕೊಳ್ಳುತ್ತೇವೆ... ನೀವು ಮನಸ್ಸು ಮಾಡಬೇಕು!..."

ಇತರ ರಾಣಿಯರೂ ಇದನ್ನೇ ಅನುಮೋದಿಸಿ, ತುಂಬು ತವಕದಿಂದ ರುಕ್ಮಿಣಿಯನ್ನು ಸುತ್ತುಗಟ್ಟಿ ನಿರ್ಬಂಧಿಸುತ್ತಾರೆ. ಅವಳ ಕಾಲುಗಳಿಗೆ ಬೀಳಲು ಬರುತ್ತಾರೆ. ರುಕ್ಮಿಣಿ ಅವರನ್ನು ತಡೆದು: "ತಂಗಿಯರೇ, ಒಡೆಯರಿಗೆ ಅಸಾಧ್ಯವಾದುದೇನಿಲ್ಲ! ಎಂದೋ ಸತ್ತೇಹೋದ ಗುರುಪುತ್ರನನ್ನು ಮತ್ತೆ ಬದುಕಿಸಿ ಗುರುದಕ್ಷಿಣೆಯಾಗಿ ತಂದುಕೊಟ್ಟ ಖ್ಯಾತಿ ಅವರದ್ದು. ಅವರ ಬಾಲ್ಯದ ಲೀಲೆಗಳನ್ನು ಕೇಳಿದವರಿಗೆ ಯಾವುದರಲ್ಲಿ ನಂಬಿಕೆ ಬರಲಾರದು? ನಂದಗೋಪರನ್ನು ಹಿಂದೆ ವರುಣ ಲೋಕದಿಂದ ಬಿಡಿಸಿ ತರಲಿಲ್ಲವೆ? ಇದೇ ಒಡೆಯರು ಅಭಿಮನ್ಯುವನ್ನೇಕೆ ಉಳಿಸಲಿಲ್ಲ? ಆ ಮಗು ಅವರಿಗೆಷ್ಟು ಪ್ರಿಯ! ಸಕಲಶಸ್ತ್ರಾಸ್ತ್ರ ವಿದ್ಯೆಯನ್ನೂ ತಾವೇ ಬಹು ಅಕ್ಕರೆಯಿಂದ ಕಲಿಸಿದ್ದರು!! ಸಾಯುವ ಅರ್ಹತೆ ಅವನಿಗೇನಿದ್ದಿತು? ವಯಸ್ಸೆ? ಅಪರಾಧವೇ? ಕಿಡಿಗೇಡಿತನವೇ? ಭೀಮಪುತ್ರ ಘಟೋತ್ಕಚನನ್ನು ರಾತ್ರಿ ಯುದ್ಧದಲ್ಲಿ ಬಲಿಕೊಟ್ಟವರೂ ಈ ಒಡೆಯರೇ! ಅವನಲ್ಲಿ ದುಷ್ಟಪಕ್ಷಪಾತಿತ್ವ ಇದ್ದಿತೆನ್ನೋಣ... ಒಮ್ಮೊಮ್ಮೆ ನಮ್ಮ ಯಾವ ಮಾನುಷ ತರ್ಕಕ್ಕೂ ಎಟುಕದ ವ್ಯಾಪಾರಗಳನ್ನು ಅವರು ಮಾಡಿದ್ದಾರೆ. 'ಯದುವಂಶವನ್ನುಳುಹಿ... ಮಕ್ಕಳನ್ನು ಕಾಪಾಡಿ' ಎಂದು ಪ್ರಾರ್ಥಿಸಿದೆವು ಎಂದೇ ಇಟ್ಟುಕೊಳ್ಳಿ. 'ಏಕೆ?' ಎಂದು ಅವರು ನಮ್ಮನ್ನೇ ಪ್ರಶ್ನಿಸಿದರೆ, ನಾವು ಏನು ಕಾರಣ ಕೊಡಬೇಕು? ಸಿದ್ಧಮಾಡಿಕೊಳ್ಳಿ."

ಮಿತ್ರವಿಂದಾ: "ಅಕ್ಕ! ನಿಮ್ಮ ಮಾತು ವಿಚಿತ್ರವಾಗಿದೆ! ಯದುಕುಲ ಅವರ ಜನ್ಮಕುಲವೆಂಬುದಕ್ಕಿಂತ ಕಾರಣಬೇಕೆ? ಈಗ ಈ ತಪ್ಪು ಮಾಡಿರುವವರು ಮಕ್ಕಳೆಂಬುದಕ್ಕಿಂತ ದೊಡ್ಡ ಕಾರಣ ಬೇಕೆ? ಇವರು ಮಕ್ಕಳನ್ನೂ, ಕುಲವನ್ನೂ ರಕ್ಷಿಸುವ ಹೊಣೆ ಹೊತ್ತವರಲ್ಲವೆ? ಮಕ್ಕಳು ಏನೋ ಹಾಸ್ಯ ಮಾಡಹೋದರೆ ಆ ಕೋಪಿಷ್ಠಮುನಿ ಇಷ್ಟು ಅವಿವೇಕದ ಶಾಪ ಕೊಡಬೇಕೆ? ಸಣ್ಣ ಅಪರಾಧಕ್ಕೆ ಘೋರ ಶಿಕ್ಷೆಯೇ? ಋಷಿಗಳಾದರೇನು? ಅವರೂ ಮನುಷ್ಯರಷ್ಟೆ! ಮಿತಿಮೀರಿದ ಶಾಪಕ್ಕೆ ಅವರಿಗೂ ಶಿಕ್ಷೆಯಾಗಬೇಡವೆ?"

ರುಕ್ಮಿಣಿ: "ತಂಗೀ! ಒಡೆಯರನ್ನು ನೀನರ್ಥಮಾಡಿಕೊಂಡುದು ಇಷ್ಟೇಯೆ? ಕಂಸ ದೊರೆ ಯಾವ ಕುಲದವರಾಗಿದ್ದರು? ಇವರು ಮಾವನನ್ನೇ ಕೊಂದರೇಕೆ? ಶಿಶುಪಾಲ ಏನಾಗಬೇಕು? ಹೇಳಿ! ಪಾಂಡವರು ಹೇಗೋ ಹಾಗೆ ತಾನೇ! ಪಾಂಡವರ ಉಳಿವಿಗಾಗಿ ಅಷ್ಟು ಪ್ರಯಾಸಪಟ್ಟು ತಮ್ಮನ್ನೇ ಅವರ ಸೇವೆಗೆ, ಪ್ರತಿಷ್ಠೆಗೆ, ರಕ್ಷಣೆಗೆ ಅರ್ಪಿಸಿಕೊಂಡವರು, ಅಂಥದೇ ಸಮಾನ ಸಂಬಂಧದ ಶಿಶುಪಾಲನನ್ನು ನಿರ್ದಯವಾಗಿ ಕೊಂದರೇಕೆ? ಸತ್ಯಭಾಮಾದೇವಿ, ನಿನಗೆ ನರಕಾಸುರ ಏನಾಗಬೇಕು? ಅದು ದೇವರಹಸ್ಯ ಬಿಡು! ನಿನ್ನೆದುರಿಗೆ ಅವನನ್ನು ಪತಿರಾಯರು ಕೊಂದರೇಕೆ? ಇದರಲ್ಲೊಂದು ಏಕರೂಪತೆ, ಏಕಸೂತ್ರತೆ ಕಾಣಬರುತ್ತಿಲ್ಲವೆ? ಹಾಗೆ ರಕ್ಷಿತರಾದವರಲ್ಲೂ ಒಂದು ಏಕಸೂತ್ರತೆ ಕಾಣಬರಬೇಕು!... ಅರ್ಥವಾಯಿತೇ? ನಿನ್ನೆ ಅವರೇ ಹೇಳಿದರು 'ನಿನಗೆ ನಾನು, ನನಗೆ ನೀನು... ಯಾರಿಂದಲೂ ಏನನ್ನೂ ನಿರೀಕ್ಷಿಸಬೇಡ. ಉತ್ತರಕ್ರಿಯೆಯನ್ನೂ ಸಹ' ಎಂದು! ಇದರರ್ಥವೇನು? ಯೋಚಿಸಿ. ಒಡೆಯರು ಈ ವಿಷಯದಲ್ಲಿ ನಿರ್ಲಿಪ್ತರಾದಂತಿದೆ. ಯೋಚಿಸಿಯೇ ಏನೋ ನಿರ್ಧರಿಸಿರುವಂತಿದೆ. ಹದಿಮೂರು ದಿನದ ಒಂದು ಪಕ್ಷ ಬರಲಿದೆಯಂತೆ, ಎರಡು ಗ್ರಹಣಗಳ

ನಡುವೆ... ನಿನ್ನೆ ಎರಡು ನಕ್ಷತ್ರಗಳು ಅಪ್ಪಳಿಸಿ ಪುಡಿಯಾದುದನ್ನು ನಾ ಕಂಡೆ... ಇನ್ನೇನು ಹೇಳಲಿ? ಈಗಾಗಲೇ ಒಡೆಯರೊಡನೆ ಈ ವಿಷಯದಲ್ಲಿ ಸೂಚ್ಯವಾಗಿ ನಾನು ಮಾತಾಡಿ ಆಗಿದೆ. ನೀವೆಲ್ಲ ಬೇಕಾದರೆ ಮತ್ತೆ ಮಾತೆತ್ತಿ ನೋಡಿ, ನಾನೂ ನಿಮ್ಮೊಡನಿರುತ್ತೇನೆ."

ಸತ್ಯಭಾಮೆ ಈ ಜವಾಬ್ದಾರಿಯನ್ನು ಒಪ್ಪಿದಳು. ರಾತ್ರಿ ಶ್ರೀ ಕೃಷ್ಣನಲ್ಲಿ ಅಷ್ಟಮಹಿಷಿಯರೂ ಈ ಮಾತೆತ್ತುವುದೆಂದು ನಿರ್ಣಯವಾಯಿತು.

* * * * *

ಸೂರ್ಯಾಸ್ತಮಾನಕ್ಕೆ ಮುಂಚೆ ಉಗ್ರಸೇನ ಮಹಾರಾಜರ ತುರ್ತುಸಭೆ ಸೇರಿತ್ತು. ಶ್ರೀಕೃಷ್ಣ ಸಂಧ್ಯೋಪಾಸನೆಯನ್ನೂ, ಸಾಯಂ ಅಗ್ನಿಹೋತ್ರವನ್ನು ಮುಗಿಸಿಯೇ ಬರುವುದಾಗಿ ಹೇಳಿಕಳುಹಿದ!

"ಕುಲವೇ ಸಾಯುತ್ತಿದೆ! ಇವನಿಗೆ ಅಗ್ನಿಹೋತ್ರ ಮುಖ್ಯವೇ?" ಎಂದು ಯಾದವ ವೃದ್ಧರು ಹಿಂದೆ ಮುಂದೆ ಆಡಿಕೊಂಡರು.

ಎಲ್ಲರಿಗೂ ತವಕ! "ಕರ್ಮಭ್ರಷ್ಟರಾಗಿಯೇ ನೀವು ಶ್ರೀಕೃಷ್ಣನಿಂದ ದೂರವಾಗುತ್ತಿದ್ದೀರಿ" ಎಂದು ಅಕ್ರೂರ ಎಚ್ಚರಿಸಿದ! ಕೃತವರ್ಮ ಇದನ್ನು ಕೇಳಿ ಮೂಗುಮುರಿದ! ಅದನ್ನು ನೋಡಿ ಸಾತ್ಯಕಿ ಹಲ್ಲು ಕಡಿದ!!

ಯಾದವ ವೃದ್ಧರ ನಡುವೆ ವಸುದೇವ ಮಹಾರಾಜರೂ ಬಂದು ಕುಳಿತಿದ್ದರು. ಅವರಿಗೂ ನಡೆದುದೇನೆಂದು ತಿಳಿದಿತ್ತು. ದೇವಕಿ, ರೋಹಿಣಿ, ಮುಂತಾದವರೂ ಆಸ್ಥಾನದ ಮೇಲ್ಭಾವಣಿಯಲ್ಲಿ ಆಸೀನರಾಗಿ ಸಭೆಯಲ್ಲಿ ಏನು ನಡೆದೀತೆಂದು ಕುತೂಹಲದಿಂದ ಎದುರು ನೋಡುತ್ತಿದ್ದರು.

ಅಪರಾಧಿಗಳ ಸ್ಥಾನದಲ್ಲಿ ಮಧ್ಯಾಹ್ನ ಋಷಿಗಳನ್ನು ಕೆಣಗಿದ ಯುವಕರೆಲ್ಲರೂ ತಲೆತಗ್ಗಿಸಿ ಕುಳಿತಿದ್ದರು! ಯಾರ ಮುಖದಲ್ಲೂ ತೇಜಸ್ಸಿರಲಿಲ್ಲ!

ಸೂರ್ಯ ಮುಳುಗಿ ಆಯಿತು. ಶ್ರೀಕೃಷ್ಣ, ಬಲಭದ್ರನೊಡನೆ ಸಭೆಗೆ ಆಗಮಿಸಿದ! ವಾದ್ಯಗಳು ಮೊಳಗಿದವು. ನಗಾರಿಗಳು ಬಾರಿಸಿದವು. ಚೇಟಿಯರು ಅವನ ಮಾರ್ಗದಲ್ಲಿ ಪುಷ್ಪಗಳನ್ನೆರಚುತ್ತಾ ಮುನ್ನಡೆಯುತ್ತಾ ಬಂದರು. ಆಸ್ಥಾನದ ದ್ವಾರದಲ್ಲಿ ಗರ್ಗಾಚಾರ್ಯರು ಭಗವಂತನಿಗೆ ಪೂರ್ಣಕುಂಭವನ್ನು ಸಮರ್ಪಿಸಿದರು. ಪಂಡಿತರು ಸ್ವಾಗತಕೋರಿ, ಸ್ವಸ್ತಿವಾಚನ ಮಾಡಿದರು. ಬ್ರಾಹ್ಮಣರ ವೇದಘೋಷ ಗಗನವನ್ನೇ ಬಿರಿಯಿತು! ಉಗ್ರಸೇನ ರಾಜ ಎದ್ದುನಿಂತು ಶ್ರೀಕೃಷ್ಣನಿಗೆ ಗೌರವ ತೋರಿದ. ಶ್ರೀಕೃಷ್ಣ ಮುಂದೆ ನಡೆದು ದೊರೆಯ ಪಕ್ಕದಲ್ಲಿ ಒಂದು ಮೆಟ್ಟಿಲ ಕೆಳಗೆ ತನಗಾಗಿ ಇಟ್ಟಿದ್ದ ಬಂಗಾರದ ಆಸನದಲ್ಲಿ ಕುಳಿತ.

ಒಂದೇ ಕ್ಷಣದ ನಂತರ ಮಹರ್ಷಿಗಳೂ ಆಗಮಿಸಿದರು. ಇಡೀ ಸಭೆಯೇ ಎದ್ದು ಗೌರವ ತೋರಿತು.

ಶ್ರೀಕೃಷ್ಣ ಆಸನದಿಂದೆದ್ದು ಹೋಗಿ ಆಸ್ಥಾನದ್ವಾರದಲ್ಲಿ ಸಾಷ್ಟಾಂಗ ಪ್ರಣಾಮ ಮಾಡಿ ಅವರನ್ನು ಮಧುಪರ್ಕದಿಂದ ಸತ್ಕರಿಸಿ, ಸಭೆಗೆ ಕರೆತಂದು ಅವರ ಆಸನಗಳಲ್ಲಿ ದೊರೆಯ ಇನ್ನೊಂದು ಬದಿಯಲ್ಲಿ ಕುಳ್ಳಿರಿಸಿದ.

"ಕುಲವೇ ನಾಶವಾಗಲಿ!" ಎಂದು ಶಪಿಸಿದವರಿಗೆ ಈ ಸ್ವಾಗತವೇ? ಎಂದು ಯಾದವ ವೀರರು ಮನಗಳಲ್ಲೇ ಕುದಿದೆದ್ದರು!

ವಿಚಾರಣೆ ಆರಂಭವಾಯಿತು. ಉಗ್ರಸೇನರಾಜ ಅಕ್ರೂರನ ಮುಖ ನೋಡಿದ. ಅಕ್ರೂರ ಅಪರಾಧಿ ಯುವಕರನ್ನು ನೋಡಿ "ಮಧ್ಯಾಹ್ನ ನೀವು ಈ ಮಹರ್ಷಿಗಳನ್ನು ಅವಹೇಳನ ಮಾಡಿದುದು ನಿಜವೇ?" ಎಂದು ಪ್ರಶ್ನಿಸಿದ.

ಕ್ಷಣಕಾಲ ಯುವಕರು ಉತ್ತರಿಸಲಿಲ್ಲ. ತಲೆತಗ್ಗಿಸಿಯೇ ನಿಂತಿದ್ದರು. ಮಹರ್ಷಿಗಳಲ್ಲಿ ಕಣ್ವರು ಎದ್ದು ನಿಂತು ಹೇಳಿದರು:

ಕಣ್ವ: "ತಪ್ಪು ನಮ್ಮದೇ! ಅಡವಿಯಲ್ಲಿ ನಿತ್ಯತೃಪ್ತರಾಗಿ ಸ್ವಾಧ್ಯಾಯ ಮಾಡಿಕೊಂಡಿರಬೇಕಾದವರು ಶ್ರೀಕೃಷ್ಣದರ್ಶನಕ್ಕೆಂದು ಇತ್ತ ದ್ವಾರಕೆಗೆ ಬಂದುದೇ ತಪ್ಪು... ಪಾಪ, ಹುಡುಗಬುದ್ಧಿಯ ಚಪಲದ ಯುವಕರು, ತಮ್ಮ ಸ್ವಭಾವಕ್ಕೆ ಸರಿಯಾಗಿ ನಡೆದುಕೊಂಡರು..."

ಶ್ರೀಕೃಷ್ಣ: (ಕಂಗಳಲ್ಲಿ ಹನಿಗೂಡಿಸಿಕೊಂಡು) "ನಾನಿನ್ನೂ ಜೀವಿಸಿರುವಾಗ ನೀವು ಈ ಮಾತನ್ನು ಆಡಿದರೆ, ಮಹರ್ಷಿಗಳೇ ನಾನಿದ್ದೇನು ಸಾರ್ಥಕ? ನನ್ನನ್ನು ಬಲ್ಲ ನೀವೇ ಹೀಗೆಂದರೆ, ನಾನಿನ್ನು ಪರಂಜ್ಯೋತಿಗೆ ಹೋಗುವ ಕಾಲ ಬಂದಿದೆ ಎನ್ನಬೇಕಲ್ಲವೆ?"

ದುರ್ವಾಸ: "ತಪ್ಪು ಯುವಕರದ್ದಲ್ಲ! ಅವರ ಕುಡಿತದ ಅಮಲಿನದ್ದು. ಹಿರಿಯರು, ತಪಸ್ವಿಗಳು, ಹಳೆಯ ಪೀಳಿಗೆ ನಂಬಿದ್ದ ಮೌಲ್ಯಗಳು ಇವನ್ನು ನಂಬದ, ಗೌರವಿಸದ ಇಂದಿನ ಮನಃಪ್ರವೃತ್ತಿಯ ಸುತ್ತಣ ಸಮಾಜದ ಶಿಶುಗಳು ಅವರಲ್ಲವೆ? ಈ ಯುವಕರು ಇಡೀ ಇಂದಿನ ಯಾದವ ಸಮಾಜದ ಪ್ರತಿಧ್ವನಿಗಳು! ಇದು ಶ್ರೀಕೃಷ್ಣನ ಸಮಾಜವೇ?"

(ಯಾದವ ಸಮಾಜದ ನಿಂದನೆಯನ್ನು ತಾಳಲಾರದೆ, ಬಲಭದ್ರ ಏನನ್ನೋ ಹೇಳಲು ಎದ್ದುನಿಲ್ಲಲು ಯತ್ನಿಸಿದಾಗ, ಶ್ರೀಕೃಷ್ಣ ಕಣ್ಣುಸನ್ನೆಯಿಂದ ಅವನನ್ನು ತಡೆದು ಕುಳ್ಳಿರಿಸುತ್ತಾನೆ.)

ಶ್ರೀಕೃಷ್ಣ: "ಇದು ಖಂಡಿತ ಶ್ರೀಕೃಷ್ಣ ಸಮಾಜವಲ್ಲ, ಹಿರಿಯರೇ! ನಿಮ್ಮ ಕೋಪದ ವ್ಯಾಪ್ತಿಯನ್ನೂ, ಸಾಮಾಜಿಕ ಅಕ್ಕರೆ ಅದರ ಹಿಂದಿರುವುದನ್ನು ನಾನರ್ಥಮಾಡಿಕೊಳ್ಳಬಲ್ಲೆ. ಯುಗಗಳೂ, ಧರ್ಮಗಳೂ, ಸಮಾಜಗಳೂ, ರೀತಿನೀತಿಗಳೂ ಹುಟ್ಟುವುದೇ ಕಾಲಧರ್ಮದಲ್ಲಿ. ಅವುಗಳ ಅವಶ್ಯಕತೆ ತೀರಿದೊಡನೆ ಅವು ಅಳಿಯದೇ ಉಳಿದರೆ ಭೂಭಾರವಾಗಿ ಬಿಡುತ್ತದೆ. ಆ ಭಾರವನ್ನು ಇಳಿಸುವುದೂ ಕಾಲವೇ. ಹೊಸದನ್ನು ಸೃಷ್ಟಿಸುವುದೂ ಕಾಲವೇ. ಮಹರ್ಷಿ! ನಿಮ್ಮ ಶಾಪವನ್ನೂ ನಾನು ಈ ಹಿನ್ನೆಲೆಯಲ್ಲೇ ನೋಡುತ್ತೇನೆ, ಮನ್ನಿಸುತ್ತೇನೆ!"

ಈ ಮಾತುಗಳನ್ನು ಕೇಳಿ ಯಾದವ ವೃದ್ಧರು ಬೆರಗಾದರು! ಶ್ರೀಕೃಷ್ಣ ಋಷಿಗಳಿಗೂ ಬುದ್ಧಿ ಹೇಳಿ, ಶಾಪವನ್ನು ಹಿಂದೆಗೆಸಿ, ಏನಾದರೂ ಪವಾಡ ಮಾಡಿ ಯಾದವರನ್ನುಳಿಸಿಯಾನೆಂದು ಭಾವಿಸಿದ್ದ ಅವರಿಗೆ ನಿರಾಶೆಯೂ, ಕೋಪವೂ, ಅಸಹನೆಯೂ ಮೂಡಿದವು.

ಕೃತವರ್ಮ: "ಹುಡುಗಾಟಿಕೆಯ ಚೇಷ್ಟೆಗೆ ಶಾಪದ ಪ್ರಮಾಣ ಹೆಚ್ಚಾಗಲಿಲ್ಲವೆ? ಇಡೀ ಕುಲವನ್ನೇ ಋಷಿಗಳು ಶಪಿಸಬಹುದೇ?"

ದುರ್ವಾಸ: "ಋಷಿಯ ಕೌಪೀನಕ್ಕೆ ಕೈ ಹಾಕುವುದು ಎಂಥ ಹುಡುಗಾಟಿಕೆ?"

ಅತ್ರಿ: "ಶ್ರೀಕೃಷ್ಣ! ದ್ರೌಪದಿಯ ಸೀರೆಗೆ ಕೈಹಾಕಿದ ಅಪರಾಧ ಒಬ್ಬನದ್ದೋ, ಒಂದು ಸಮಾಜದ್ದೋ! ನೀನದನ್ನು ಸಹಿಸಿದೆಯಾ? ದ್ರೌಪದಿಯ ಪ್ರತಿಜ್ಞೆಯ ಜೊತೆಗೆ ನಿನ್ನದನ್ನೂ ಸೇರಿಸಿದೆಯಲ್ಲವೆ? ತಾನೇ ಮಾನಗೆಡಲು ಉತ್ಸುಕಳಾಗಿ ಸೀರೆ ಬಿಚ್ಚುವ ಸ್ತ್ರೀಯರ ವಿಷಯ ಬೇರೆ! ಮಾನವತಿಯರಾಗಿ ಸ್ತ್ರೀಯರು ಬಾಳಲು ಬಿಡದ ಸಮಾಜವನ್ನು ನೀನು ಉಳಿಸಿದೆಯಾ? ಭೀಷ್ಮ ದ್ರೋಣರನ್ನೂ ಅಲ್ಲಿ ನೀನು ಅಪರಾಧಿಗಳನ್ನಾಗಿ ಎಣಿಸಲಿಲ್ಲವೇ? ದುರ್ವಾಸರ ಅಪಮಾನ ಸಂನ್ಯಾಸಾಶ್ರಮಕ್ಕೇ ಅಪಮಾನವಲ್ಲವೆ? ಮೇಲಾಗಿ ಅಪರಾಧಿಗಳು ಹುಡುಗರೇ? ಅವರಲ್ಲಿ ವಿವಾಹಿತರಿಲ್ಲವೆ? ಅವರಲ್ಲಿ ಮಕ್ಕಳಿರುವವರಿಲ್ಲವೇ?"

ವಸುದೇವ: "ಕೃಷ್ಣ! ಇದು ಸಮಾಜಕ್ಕೇ ಆಪತ್ಕಾಲವಪ್ಪ! ಅಂದು ಗೋಕುಲವನ್ನೂ ಗೋವಳರನ್ನೂ ಕಾಪಾಡಿದ ನೀನು ಇಂದು ನಿನ್ನದೇ ಈ ಕುಲವನ್ನು ಹೇಗಾದರೂ ಕಾಪಾಡು."

ಉಗ್ರಸೇನ: "ಕೃಷ್ಣ! ನೀನೇ ಈ ಕುಲದುಸಿರು! ನಿನ್ನ ಕೃಪೆಯಿಂದ ನಾನು ದೊರೆ, ಮಾತ್ರ. ಈ ಯುವಕರನ್ನು ಬೇಕಾದರೆ ಗಡೀಪಾರು ಮಾಡೋಣ. ಬೇರಾವ ಶಿಕ್ಷೆಯನ್ನು ನೀನು ಸೂಚಿಸಿದರೂ ಸರಿಯೇ. ಹೇಗಾದರೂ ಋಷಿಗಳನ್ನು ಒಲಿಸು. ಕುಲವನ್ನು ಕಾಪಾಡು."

ವಸಿಷ್ಠ: "ದೊರೆಯೇ! ಶ್ರೀಕೃಷ್ಣ ನಮಗೇ ಶಿಕ್ಷೆ ವಿಧಿಸಿದರೂ ಸರಿಯೇ. ದುರ್ವಾಸರು ಪೂರ್ವಚಿಂತನೆಯಿಂದ ಆ ಶಾಪಕೊಟ್ಟವರಲ್ಲ. ಇಂದು ಅವರೂ ಬಹಳ ಸಹಿಸಿದರು. ಇದು ಕೆಲವು ತುಂಟರ ಮಾತು ಮಾತ್ರವಲ್ಲ. ಅಪರಾಧಿಗಳ ಇದೇ ಮನೋಭಾವವುಳ್ಳವರು ಇಡೀ ಈ ಸಮಾಜದಲ್ಲಿ ತುಂಬಿದ್ದಾರೆ. ದುರ್ಯೋಧನನ ಪರ ಮಾತಾಡುವವರೂ, ಪಾಂಡವರನ್ನೇ ಬೈಯ್ಯುವವರೂ, ಶ್ರೀಕೃಷ್ಣನನ್ನೇ ನಿಂದಿಸುವವರೂ ಇದ್ದಾರೆ. ಈ ಬೆಳಿಗ್ಗೆ ಶ್ರೀಕೃಷ್ಣನನ್ನು ನಿಂದಿಸಿದ ಯುವಕ ಯಾರೆಂದು ಸಭೆ ಅರಿಯಲಿ. ಅವನು ಏನು ಹೇಳಿದನೆಂದೂ ಸಹ."

ಶ್ರೀಕೃಷ್ಣ ಉಗ್ರದೃಷ್ಟಿಯಿಂದ ಯುವಕರತ್ತ ನೋಡಿದ... ಒಂದೆರಡು ನಿಮಿಷಗಳಾದ ನಂತರ ಜಾಂಬವತಿಯ ಮಗನಾದ ಸಹಸ್ರಜಿತ್ ಎದ್ದುನಿಂತು ತಲೆತಗ್ಗಿಸಿದ!

ಉಗ್ರಸೇನ: "ಅಯೋಗ್ಯನೇ! ಏನು ಬೊಗಳಿದೆ, ಹೇಳು!!"

ಯುವಕ ಮಾತಾಡಲಿಲ್ಲ! ಕಾಲ ಉರುಳುತ್ತಿತ್ತು! ಆ ಮೌನ ಎಲ್ಲರಿಗೂ ಸಂಕಟವಾಗಿತ್ತು. ದುರ್ವಾಸರೇ ಮೇಲೆದ್ದರು!

"ಪ್ರಭು ಕೃಷ್ಣ! ನಾವು ನಿನ್ನನ್ನು ಬ್ರಹ್ಮಣ್ಯದೇವ ಎನ್ನುತ್ತೇವೆ. ವೇದವ್ಯಾಸರೂ, ಪರಾಶರರೂ, ಶುಕರೂ ನೀನಾರೆಂಬುದನ್ನು ಲೋಕಕ್ಕೆ ಆಗಾಗ ಹೇಳುತ್ತಾ ಬಂದಿದ್ದಾರೆ. ಭೀಷ್ಮ ಅದನ್ನು ಹೇಳುತ್ತಲೇ ಪ್ರಾಣಬಿಟ್ಟ. ವಿದುರನೂ ಅದಕ್ಕೆ ಸಾಕ್ಷಿ. ಈ ತುಂಟ ಹೇಳುತ್ತಾನೆ ನೀನು ಸ್ತ್ರೀಲಂಪಟನಂತೆ! ಷೋಡಶ ಸಹಸ್ರ ಸ್ತ್ರೀಪತಿಯಾದುದು ನಿನ್ನ ಕಾಮುಕತೆಗಾಗಿ ಅಂತೆ!"

ಸಭೆ ಸ್ತಬ್ಧವಾಗಿದ್ದುದು ಭಯಂಕರವಾಗಿ ಉದ್ಗರಿಸಿತು! ದೇವಕಿ ಮೂರ್ಛೆ ಹೋದಳು. ರುಕ್ಮಿಣಿ ಸತ್ಯಭಾಮಾದಿಗಳೂ ಸಹ! ಬಲಭದ್ರ ಗದೆಯನ್ನೆತ್ತಿದ! ಉಗ್ರಸೇನನ ನಾಲಿಗೆ ಒಣಗಿತು! ಶ್ರೀಕೃಷ್ಣನೇ ಮಾತೆತ್ತಿದ.

ಶ್ರೀಕೃಷ್ಣ: "ಅಂದರೆ ಇದು ಈಗ ನನ್ನ ವಿಚಾರಣೆಯ ಸಭೆ! ಅಯ್ಯಾ ಯುವಕ! ಈಗ ನೀನು ಫಿರ್ಯಾಧಿ! ನಾನು ಅಪರಾಧಿ! ಹೌದೋ?"

ಉಗ್ರಸೇನ: "ಏನಿದು ಕೃಷ್ಣ! ತಂದೆಯನ್ನೇ ಮಗ ಹೀಗೆ ನಿಂದಿಸುತ್ತಾ ನಾನೂ ಈ ಸಭೆಯೂ ಮೌನವಾಗಿರಬೇಕೆ?"

ಶ್ರೀಕೃಷ್ಣ: "ನನ್ನ ಜನ್ಮವನ್ನು ವರ್ಣಿಸುತ್ತಾ ಪೂಜ್ಯರಾದ ಪರಾಶರರು ಹೇಳಿದ ಒಂದು ಮಾತನ್ನು ನಾನೂ ಕೇಳಿದ್ದೇನೆ. 'ದೇವಕೀ ಪೂರ್ವ ಸಂಧ್ಯಾಯಾಂ ಆವಿರ್ಭೂತಂ ಮಹಾತ್ಮನಾ' ಎಂದು. ಪೂರ್ವದಿಕ್ಕಿನಲ್ಲಿ ಸೂರ್ಯ ಹುಟ್ಟುತ್ತಾನೆ; ಅದರಂತೆ ದೇವಕಿಯಲ್ಲಿ ನಾನು ಹುಟ್ಟಿದೆ ಎಂದು. ನಾನು 'ಮಹಾತ್ಮ'ನೋ ಅಲ್ಲವೋ ನಾನು ಕಾಣೆ. ಅಂದರೆ ಸೂರ್ಯನು ಪೂರ್ವದಿಕ್ಕಿನಲ್ಲಿ ಹುಟ್ಟುವನೆಂಬುದು ಹೇಗೆ ಆಭಾಸಮಾತ್ರ ಸತ್ಯವೋ ಹಾಗೆಯೇ ದೇವಕಿಯು ನನ್ನ ತಾಯಿ ಎಂಬುದೂ ಆಭಾಸಸತ್ಯವೇ! ನಾನಾರೋ, ಅವಳಾರೋ! ಹಾಗೆ, ನೀವು ಶ್ರೀಕೃಷ್ಣಪುತ್ರನೆಂಬ ಇವನಾರೋ ನಾನಾರೋ! ಇವರಾರೂ ನನ್ನ ಮಕ್ಕಳೂ ಅಲ್ಲ; ನಾನವರ ತಂದೆಯೂ ಅಲ್ಲ. ಇದು ಈಗ ನ್ಯಾಯಾಲಯ ಎಂಬ ಕಾರಣಕ್ಕಾಗಿ ಮಾತ್ರ ಅಲ್ಲ. ಇದೇ ಪರಮಾರ್ಥ. ಇವರಾರೂ ಶುಕ್ಲಶೋಣಿತ ಸಂಗಮದಿಂದ ಉಂಟಾದವರೇ ಅಲ್ಲವೇ ಎಂಬುದನ್ನು ಬೇಕಾದರೆ, ಸಭೆ, ನನ್ನ ಪತ್ನಿಯರ ವಿಚಾರಣೆ ಮಾಡಿ ಅರಿಯಲಿ.. ಇನ್ನು ನಿನ್ನ ಮಾತಿಗೆ ಬರುತ್ತೇನೆ. ಅಯ್ಯಾ ಯುವಕ! ನಿನ್ನ ತಾಯಿ ಎಂಬುವಳನ್ನೂ ಈ ಉಳಿದ ಅಷ್ಟಮಹಿಷಿಯರನ್ನೂ, ಈ ಹದಿನಾರು ಸಾವಿರ ಸ್ತ್ರೀ ಪತ್ನಿಯರನ್ನೂ ರಹಸ್ಯವಾಗೋ ಬಹಿರಂಗವಾಗೋ ಕೇಳು... ನಾನಾಗಿ ಬಯಸಿ ಅವರನ್ನು ವಿವಾಹವಾದೆನೋ, ತಾವಾಗಿ ಬಯಸಿ ಬಂದವರೋ, ಅವರವರ ಸಂದರ್ಭಗಳಲ್ಲಿ ಅವರ ತಂದೆ ತಾಯಿಯರಿಂದಲೋ, ಬಂಧುಬಾಂಧವರಿಂದಲೋ ಕೊಡಲ್ಪಟ್ಟವರೋ, ಎಂಬುದನ್ನು ಹಳೆಯ ತಲೆಮಾರು ಅರಿತಿದೆ. ನೀವೂ ಅರಿಯಬಹುದು. ಅರಿಯಬೇಕು."

ಯುವಕರಲ್ಲೊಬ್ಬ: "ತಾನು ಮಾಡುವುದೊಂದು, ಉಳಿದವರಿಗೆ ಹೇಳುವುದೊಂದು ಆಗಿಯೇ ಅಲ್ಲವೇ, ಯುವಕರಿಗೆ ಮಾರ್ಗದರ್ಶನ ತಪ್ಪುವುದು?"

ಸಭೆ ಮತ್ತೆ ಉದ್ಗರಿಸುತ್ತದೆ... ಕೆಲಹೊತ್ತು ಮತ್ತೆ ಮೌನ...

ಶ್ರೀಕೃಷ್ಣ: "ಅಯ್ಯಾ, ಸರ್ವಜ್ಞ ಯುವಕನೇ! ನಾನು ನನ್ನ ಹಡೆದ ಜನನೀ ಜನಕರಿಗೆ ಸೇವೆ ಮಾಡಲಿಲ್ಲ! ಹದಿಮೂರು ವರ್ಷ ಪರದೇಶಿಯಂತೆ ಎಲ್ಲೋ ಅಲೆಯುತ್ತಿದ್ದೆ. ಆಮೇಲೂ ಅವರ ಸೇವೆ ಮಾಡಲಿಲ್ಲ. ರಾಷ್ಟ್ರ, ರಾಷ್ಟ್ರ, ರಾಷ್ಟ್ರ, ಧರ್ಮ, ಧರ್ಮ, ಎನ್ನುತ್ತಾ ಅಲೆಯುತ್ತಿದ್ದೆ! ಅಂದಮೇಲೆ ನನ್ನ ಮಕ್ಕಳಿಂದ ನಾನು ಹೇಗೆ ಗೌರವ ಪಡೆಯಲು ಪ್ರಾಪ್ತಿಯುಂಟು? (ದೇವಕಿ ವಸುದೇವರು ಅಳುತ್ತಾರೆ! ನಿನ್ನ ನಿಂದೆ ಸರಿಯೆ! ಆದರೆ ನಾನು ಮಾಡಿದ್ದೆಲ್ಲವನ್ನೂ ನೀನೂ ಮಾಡಬೇಕು! ಆಪತ್ತಿನಲ್ಲಿರುವವರಿಗೆ ಒದಗಬೇಕು! ದುರ್ಬಲರಿಗೆ ದಾರಿದೋರಬೇಕು!! ಸಮಾಜವುಳಿಸಲು ಶ್ರಮಿಸಬೇಕು!! ಸಮಯ ಬಂದರೆ ಬೆಟ್ಟ ಎತ್ತಬೇಕು! ಆಪತ್ತಿನಲ್ಲಿ ವಿಶ್ವರೂಪ ತೋರಬೇಕು! ಹಗಲಲ್ಲಿ ಸೂರ್ಯನನ್ನು ಮುಳುಗಿಸಬೇಕು! ಇದು ಮಾಯೆಯಲ್ಲ! ಯೋಗಶಕ್ತಿ! ನನ್ನ ಗುರುಗಳ ಅನುಗ್ರಹ! ಮೂರ್ಖ ಯುವಕ? ನಿನಗಾವ ಗುರುವಿನ ಅನುಗ್ರಹವಿದೆಯೊ? ನಿನ್ನದಾವ ಯೋಗ?... ನಿನಗೆ ಹೇಳಿ ಪ್ರಯೋಜನವೇನು? ನೀನು ಶಿಶುಪಾಲನ, ಜರಾಸಂಧನ ದಾರಿ ಹಿಡಿಯುತ್ತಿರುವೆ! ಊರವರು ದುರ್ಯೋಧನನ ದಾರಿ ಹಿಡಿದ ಮೇಲೆ ಇದರಲ್ಲೇನು ಆಶ್ಚರ್ಯ! ನಾನು ಖಂಡಿತ ದೊಡ್ಡವನಲ್ಲ ಎನ್ನು! ಆದರೆ ನಾನು ನಂಬಿದ, ಎತ್ತಿ ಹಿಡಿದ ಮೌಲ್ಯಗಳನ್ನು ದೂಷಿಸಬೇಡ. ಇದು ಸಾರ್ವಜನಿಕ ಪ್ರವೃತ್ತಿಯಾಗದಿರಲಿ. ಹಾಗೆ ಆಗುವುದಾದರೆ, ಈ ಸಮಾಜ ಇರಬೇಕೋ, ಅಳಿಯಬೇಕೋ ಎಂಬುದನ್ನು ಕಾಲಪುರುಷ ನಿರ್ಣಯಿಸುತ್ತಾನೆ. ದುರ್ವಾಸರು ಕಾಲಪುರುಷನ ವಕ್ತಾರರು ಮಾತ್ರ."

ಇಷ್ಟು ಗಂಭೀರವಾದ ವಾಣಿಯನ್ನಾಲಿಸಿದ ಅಕ್ರೂರನಂಥವರು ಮೌನವಾಗಿ ಕಂಬನಿಗರೆಯುತ್ತಿದ್ದರು. ಕೃಷ್ಣಪತ್ನಿಯರು ಅಂತಃಪುರಕ್ಕೆ ಕರೆದೊಯ್ಯಲ್ಪಟ್ಟರು. ಉಗ್ರಸೇನನಿಗೆ ವಿಚಾರಣೆಯನ್ನು ಹೇಗೆ ಮುಂದುವರೆಸುವುದೆಂಬುದು ತಿಳಿಯದೇ ಪೇಚಾಡುತ್ತಿದ್ದ!

ದೊರೆ: "ಇಲ್ಲಿ ದುರ್ಯೋಧನನ ಪಕ್ಷ ಹಿಡಿದು ಮಾತಾಡುವರಾರು?" ಎಂದು ಕೇಳಿದ.

ಅಕ್ರೂರ: "ಪ್ರಭು! ದುರ್ಯೋಧನ ಸತ್ತಾಯಿತು, ಆ ಯುದ್ಧ ಮುಗಿಯಿತು! ಅವನ ಪಕ್ಷ ಎಂಬ ಮಾತಿಗೇನರ್ಥ?"

ಅಕ್ರೂರನ ಮಾತು ಕೇಳಿ ಕೃತವರ್ಮ ಮೇಲೆದ್ದ!

ಕೃತವರ್ಮ: "ಪ್ರಭು! ಯಾದವಸೇನೆಯನ್ನು ದುರ್ಯೋಧನನತ್ತ ಕಳುಹಿಸಿದರಾರು? ಅಲ್ಲಿ ನಿಂದು ಕಾದಾಡಿದವರು ಅವನಿಗೆ ನಿಷ್ಠೆ ತೋರದೆ ಕಾದುವುದು ಶಕ್ಯವೆ?"

ಸಾತ್ಯಕಿ: "ಪ್ರಶ್ನೆ, ಹಾಗೆ ನಿಷ್ಠೆಯಿಂದ ಕಾದಾಡಿ ಮಡಿದವರ ಬಗೆಗಲ್ಲ! ಆ ಯುದ್ಧ, ಆ ಸೈನ್ಯ ಎರವಲು ಕೊಟ್ಟ ಬಳಿಕ, ಯದ್ಧವೇ ಮುಗಿದ ಬಳಿಕ, ಈಗ ಇನ್ನೂ ಉಳಿದವರ ನಿಷ್ಠೆಯ ಬಗೆಗೆ!"

ಕೃತವರ್ಮ: "ಅಂದರೆ! ಕೌರವರತ್ತ ಉಳಿದವರು ನಾವು ಮೂವರೇ, ನಾನು, ಕೃಪ ಮತ್ತು ಅಶ್ವತ್ಥಾಮ. ಇವರಿಬ್ಬರೂ ಯಾದವರಲ್ಲವೆಂದ ಬಳಿಕ, ನನ್ನ ನಡತೆಯನ್ನೇ ದೊರೆಗಳು ಪ್ರಶ್ನಿಸಿದಂತಿಲ್ಲವೆ?"

ಸಾತ್ಯಕಿ: "ಆದರೇನಾಯಿತು? ಪ್ರಶ್ನೆಗೆ ಉತ್ತರಿಸಿದರೆ ಮುಗಿಯಿತು!!"

ಕೃತವರ್ಮ: "ಕೃಷ್ಣ! ನಿನ್ನ ತಂತ್ರ ನನಗೆ ತಿಳಿಯುತ್ತಿಲ್ಲ! ಈಗ ನನ್ನ ವಿಚಾರಣೆಯೇ? ನೀನೇ ನನ್ನನ್ನು ಅತ್ತ ಕಳುಹಿದೆ. ನಾನೂ ನಿಷ್ಠೆಯಿಂದ ಹೋರಾಡಿದೆ. ದೈವ ನನ್ನನ್ನುಳಿಸಿತು. ಕುಂಬಾರ ಚಕ್ರ ತಿರುಗಿಸಿ ಕೋಲು ತೆಗೆದ ಮೇಲೆ ಚಕ್ರ ಓಡುವುದು ಸಹಜವಾದಂತೆ ನಾನು ಅಲ್ಲಿ ಇಲ್ಲಿ ದುರ್ಯೋಧನನಲ್ಲಿದ್ದ ಒಂದೆರಡು ಗುಣಗಳನ್ನು ಕೊಂಡಾಡಿದರೆ ತಪ್ಪೇನು? ಗುಣಕ್ಕೆ ಮತ್ಸರವೆ?"

ಶ್ರೀಕೃಷ್ಣ: "ಯಾದವ ವೀರಾಗ್ರಣಿ! ಯಾರಲ್ಲಿ ಯಾವ ಗುಣವಿದ್ದರೂ ಎಲ್ಲರೂ ಮೆಚ್ಚಬೇಕು. ಹೌದು. ಆದರೆ ಅದು ವ್ಯಕ್ತಿಪೂಜೆಯೋ, ಅತಿಶಯದ ವೈಭವೀಕರಣವೋ ಆಗಬಾರದು. ಆಗ ಅದು ವ್ಯಕ್ತಿಯ ಹೇಯ ಗುಣಗಳಿಗೆ ನಮ್ಮನ್ನು ಕುರುಡು ಮಾಡಿಬಿಡುತ್ತದೆ! ಮೇಲಾಗಿ ಇಂಥದು ಒಂದೆರಡು ಗುಣಗಳ ವಿಷಯ ಆಗುವುದಿಲ್ಲ. ಒಬ್ಬ ವ್ಯಕ್ತಿಯ ರಾಜಕೀಯ ಧೋರಣೆಗಳ ಮಾಪನದ ಅಡಿಯಲ್ಲೇ ವ್ಯಾಖ್ಯೆಗೆ ಒಳಪಡಬೇಕಾಗುತ್ತದೆ. ಅದು ಗುಂಪುಕಟ್ಟುವ ಹವ್ಯಾಸಕ್ಕೆ ಬಿದ್ದರಂತೂ, ಮತ್ತೆ ದುಷ್ಟ-ಶಿಷ್ಟ ಧ್ರುವೀಕರಣಕ್ಕೇ ಎಡಮಾಡಿಕೊಟ್ಟು, ಹನ್ನೊಂದು ಅಕ್ಷೋಹಿಣೀ, ಏಳು ಅಕ್ಷೋಹಿಣೀ ಲೆಕ್ಕಾಚಾರದ ಅಡಿಯಲ್ಲೇ ಬರುತ್ತದೆ! ಅಂದರೆ ಯುದ್ಧದ ಪುನಾರವರ್ತನೆಗೆ ನಾಂದಿ! ಅದು ತಟಸ್ಥರಾದ ಯಾದವರಿಗೆ ಅನವಶ್ಯ."

ಕೃತವರ್ಮ ಸಭೆಯಿಂದ ಎದ್ದುಹೋದ! ಅದು ಸಭಾಸ್ಥಾನಕ್ಕೆ ಅಪಮಾನವೆಂದು ಸಾತ್ಯಕಿ ಕತ್ತಿಬಿಚ್ಚಿದ! ಶ್ರೀಕೃಷ್ಣನ ಸನ್ನೆಯಂತೆ ಬಲಭದ್ರ ಅವನನ್ನು ತಡೆದು ಹಿಡಿದು ಕೂರಿಸಿದ.

ಮಹರ್ಷಿಗಳು ಶ್ರೀಕೃಷ್ಣನ ಮುಖ ನೋಡಿದರು. ಶ್ರೀಕೃಷ್ಣ ಅಧೋಮುಖನಾಗಿ ಏನನ್ನೋ ಚಿಂತಿಸುತ್ತಿದ್ದ!

ದೊರೆ: "ಈಗ ಋಷಿಗಳು ಶಾಪವನ್ನು ಹಿಂದೆಗೆದುಕೊಂಡು ಯಾದವರನ್ನೂ, ರಾಷ್ಟ್ರವನ್ನೂ ಕ್ಷಮಿಸಲಾರರೆ?"

ಶ್ರೀಕೃಷ್ಣ: "ಆದುದು ಕಾಲದ ಪ್ರೇರಣೆ! ಋಷಿಗಳೂ ನಮಗೆ ಹಗೆಗಳಲ್ಲ! ಅವರನ್ನು ಆ ಶಾಪ ಹಿಂದೆಗೆದುಕೊಳ್ಳಿ ಎಂದು ಕೇಳುವುದೂ ಸರಿಯಲ್ಲ. ಆಗುವುದಾಗಲಿ."

ದೊರೆ: "ದೊರೆಯಾದ ನಾನು ಹಾಗೆ ಸುಮ್ಮನೆ ಕುಳ್ಳಿರಲಾರೆ. ಸಾಂಬನೇನಾದರೂ ಕಬ್ಬಿಣದ ಒನಕೆಯನ್ನು ಹಡೆದರೆ, ಅರಮನೆಯ ಸೇವಕರು ಅದನ್ನು ಪ್ರಭಾಸದ ಸಮುದ್ರತೀರದಲ್ಲಿ ಕಲ್ಲಿನ ಮೇಲೆ ನಿಧಾನವಾಗಿ ತೇದು ನಿರ್ನಾಮ ಮಾಡಲಿ! ಶಾಪ ಹೇಗೆ ಫಲಿಸುವುದೋ ನೋಡೋಣ!"

ಎನ್ನುತ್ತಾ ಅಪ್ಪಣೆ ಮಾಡಿ ದೊರೆ ಎದ್ದ! ಸಭೆ ಮುಕ್ತಾಯವಾಯಿತು!

ಮಹರ್ಷಿಗಳು ಗಂಭೀರವದನರಾಗಿ ಎದ್ದುಹೊರಟರು. ಶ್ರೀಕೃಷ್ಣ ಅವರನ್ನು ಹಿಂಬಾಲಿಸಿ ವಂದಿಸಿ ಯೋಗ್ಯರೀತಿಯಲ್ಲಿ ಕಳುಹಿಕೊಟ್ಟ!

ಅನಿರೀಕ್ಷಿತ ಶಾಪ, ಮನುಷ್ಯ ಯತ್ನದಲ್ಲಿ ಅದನ್ನು ನಿಷ್ಫಲವಾಗಿಸುವ ದೊರೆಯ ತಂತ್ರ! ಇವುಗಳಲ್ಲಿ ಯಾವುದು ಫಲಿಸುವುದೆಂದು ನೋಡಲು ಮುಂದಿನ ಕುತೂಹಲಕರ ದಿನಗಳನ್ನು ಎಣಿಸುತ್ತಾ ಸಭಾಸದರು ನಾನಾ ಬಗೆಯಲ್ಲಿ ಮಾತಾಡಿಕೊಳ್ಳುತ್ತಾ ಚದುರಿದರು.

*** *** ***

# ೪ ಶ್ರೀಕೃಷ್ಣನ ಅಂತಃಪುರದಲ್ಲಿ!

ಅದೇ ರಾತ್ರಿ ರುಕ್ಮಿಣಿಯ ಅಂತಃಪುರದಲ್ಲಿ ಇತರ ಏಳು ಪಟ್ಟಮಹಿಷಿಯರೂ ಸೇರಿದರು.

ಶ್ರೀಕೃಷ್ಣ ಅನ್ಯಮನಸ್ಕನಾಗಿ ಭದ್ರಾಸನದಲ್ಲಿ ಯೋಗರೂಢನಾಗಿ ಕುಳಿತಿದ್ದ. ನಿದ್ರೆ ಬಾರದೆ ರುಕ್ಮಿಣಿ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದಳು. ಅಂತಃಪುರದ ಬಾಗಿಲು ತೆರೆಯಿತು! ಚೇಟಿ ಸರಿದು ಬದಿಗೆ ನಿಂತಳು. ಸತ್ಯಭಾಮೆಯೂ ಉಳಿದವರೂ ಒಬ್ಬರ ಹಿಂದಾಗಿ ಒಬ್ಬರು ಅಲ್ಲಿ ಪ್ರವೇಶಿಸಿ ರುಕ್ಮಿಣಿಯ ಸುತ್ತ ಸುಖಾಸನಗಳಲ್ಲಿ ಕುಳಿತರು. ಶ್ರೀಕೃಷ್ಣನಿಗೆ ಯೋಗಭಂಗವಾಗಿ ಮೆಲ್ಲನೆ ಕಣ್ಣು ತೆರೆದ....! ಮಹಿಷಿಯರನ್ನೆಲ್ಲ ಒಟ್ಟಾಗಿ ಕಂಡು ಆಶ್ಚರ್ಯವಾಗಿ, ತಾನೇ ಆಸನದಿಂದೆದ್ದು ಅವರತ್ತ ಹೊರಟು, ಹಾಸಿಗೆಯ ಮೇಲೆ ಕುಳಿತು, ಮಂದಸ್ಮಿತದೊಡನೆ "ಏನು?" ಎಂಬಂತೆ, ಮೊದಲು ರುಕ್ಮಿಣಿಯ ಮುಖವನ್ನೂ, ಕ್ರಮವಾಗಿ ಇತರರ ಮುಖಗಳನ್ನೂ ನೋಡಿದ!

**ಶ್ರೀಕೃಷ್ಣ:** "ಏನು ವಿಚಿತ್ರ! ಎಂದೂ ಹೀಗೆ ಒಟ್ಟಿಗೆ ಸೇರದವರು ಹೀಗೆ ಸೇರುತ್ತಿದ್ದೀರಿ? ಇದೇನು ಅಷ್ಟಗ್ರಹಯೋಗವೋ...?"

**ರುಕ್ಮಿಣಿ:** "ಪ್ರಭುಗಳು ತುಂಬಾ ಸಿಟ್ಟಾಗಿರುವಂತಿದೆ! ಹಿಂದೆ ಎಂದಾದರೂ ನಮ್ಮನ್ನು ಕ್ರೂರಗ್ರಹಗಳಿಗೆ ಹೋಲಿಸಿದ್ದುಂಟೇ? ನಾವು ಎಂಟು ಜನ ಎಂಟು ಗ್ರಹಗಳೆನ್ನಿ! ಒಂಬತ್ತನೆಯದು ಇಲ್ಲವೆಂಬ ವ್ಯಂಗ್ಯವೇ?"

**ಶ್ರೀಕೃಷ್ಣ:** "ಇಲ್ಲವೆಂದವರಾರು? ನಾನಿಲ್ಲವೇ?"

**ಸತ್ಯಭಾಮೆ:** "ಸ್ವಾಮಿ! ಇಂದು ತಮಗೇನಾಗಿದೆ? ಏಕೆ ಈ ವಿಚಿತ್ರ ರೀತಿಯ ಮಾತುಗಳು?"

**ಶ್ರೀಕೃಷ್ಣ:** "ದೇವಿ! ಇಲ್ಲಿ ನೋಡು... ನಡೆಯುತ್ತಿರುವುದೆಲ್ಲ ಸಚಿತ್ರವೇ! ಮೂರು ತಿಥಿಗಳು ಒಟ್ಟಿಗೇ ಬರುವುದೂ, ೧೩ ದಿನಗಳಲ್ಲಿ ಎರಡು ಗ್ರಹಣಗಳು ಬರುವುದೂ, ಎಷ್ಟು ಅಪರೂಪವೋ, ನೀವೆಲ್ಲ ಹೀಗೆ ಇಲ್ಲಿ ರುಕ್ಮಿಣಿಯ ಅಂತಃಪುರದಲ್ಲಿ ಸೇರಿರುವುದೂ ಅಷ್ಟೇ ಆಶ್ಚರ್ಯಕರವಲ್ಲವೇ? ನಕ್ಷತ್ರಗಳು ಒಂದಕ್ಕೊಂದು ಅಪ್ಪಳಿಸಿ ಪುಡಿಯಾದುದನ್ನು ಅಂದು ನಾನೂ ರುಕ್ಮಿಣಿಯೂ ಕಣ್ಣಾರೆ ಕಂಡಿದ್ದೇವೆ! ಇದು ದಿನಾ ನಡೆಯುವುದಿಲ್ಲವಷ್ಟೆ! ಮಕ್ಕಳು ತಂದೆಯನ್ನೇ ನಿಂದಿಸುವುದನ್ನೂ ನಮ್ಮ ಕುಲದಲ್ಲಿ ಯಾರಾದರೂ ಹಿಂದೆ ಕೇಳಿದ್ದರೆ?. ಆದುದರಿಂದಲೆ ಹೇಳಿದೆ, ಎಲ್ಲ ಸಚಿತ್ರವೇ, ಎಂದು."

**ಜಾಂಬವತಿ:** "ಪ್ರಭು, ತಾವು ಸೂರ್ಯನಂತೆ. ನಾವೆಲ್ಲ ನಿಮ್ಮ ಸುತ್ತ ಸುತ್ತುವ ಗ್ರಹಗಳಂತೆ ಎಂದಾದರೆ, ತಾವಾಡಿದುದರಲ್ಲಿ ಏನೂ ವ್ಯಂಗ್ಯವಿಲ್ಲ. ಆದರೆ ತಾವು 'ಅಷ್ಟಗ್ರಹಯೋಗ' ಎಂಬುದನ್ನು ಬೇರೊಂದರ್ಥದಲ್ಲೇ ಹೇಳಿದ್ದೀರೆಂಬುದನ್ನು ನಮ್ಮ ಹೃದಯಗಳು ಗುರುತಿಸಬಲ್ಲವು... ನಿಜ ಹೇಳಿ! ನಿಮ್ಮ ಸಂಕಲ್ಪವೇನು?"

**ಶ್ರೀಕೃಷ್ಣ:** "ನನ್ನ ಸಂಕಲ್ಪಕ್ಕೆ ಯಾರು ಬೆಲೆ ಕೊಡುತ್ತಾರೆ? ಮಕ್ಕಳನ್ನು ತಿದ್ದಬೇಕಾದ ತಾಯಿ, ಹಾಗೆ ತಿದ್ದಿದ್ದರೆ ಈ ಪ್ರಸಂಗ ಹೇಗೆ ಬರುತ್ತಿತ್ತು?"

**ಸತ್ಯಭಾಮೆ:** "ಬುದ್ಧಿಬಾರದ ಹುಡುಗರನ್ನಾದರೆ ತಿದ್ದಬಹುದು! ಮೀಸೆ ಬಂದು, ಮದುವೆಯಾಗಿ, ಮಕ್ಕಳೂ ಆದವರನ್ನು ಯಾವ ತಾಯಿ ಹೇಗೆ ತಿದ್ದಿಯಾಳು ಪ್ರಭು?"

**ಶ್ರೀಕೃಷ್ಣ:** "ಹಾಗಾದರೆ ಕೈಗಳನ್ನು ಮೇಲೆತ್ತಿ, ದೇವರಿಗೆ ಶರಣಾಗಿ, ಮುಂದೆ ಬರುವುದನ್ನು ಅದೇನೇ ಇರಲಿ ಸ್ವಾಗತಿಸಬೇಕು! ನೀವು ಬಂದುದು ಅದಕ್ಕಾಗಿ ಅಲ್ಲವಲ್ಲ? ಅಯೋಗ್ಯರಾದ ಮಕ್ಕಳನ್ನು ನಾನು ಹೇಗಾದರೂ ಕಾಪಾಡಬೇಕೆಂದು ಕೇಳಲಲ್ಲವೆ ಈ 'ಅಷ್ಟಗ್ರಹಯೋಗ'?"

**ಮಿತ್ರವಿಂದಾ:** "ಸ್ವಾರ್ಥದ ಪ್ರಶ್ನೆ ಎದ್ದಾಗ, ಪ್ರಭು, ಎಲ್ಲರಿಗೂ ಮೋಹ ಅಡರುತ್ತದೆಯಷ್ಟೆ!"

**ಶ್ರೀಕೃಷ್ಣ:** (ವ್ಯಂಗ್ಯವಾಗಿ ನಕ್ಕು) "ಈ ಮಾತನ್ನು ಇನ್ನೆಲ್ಲೋ, ಇನ್ನಾರೋ ಹೇಳಿದ್ದು ಪ್ರಸಿದ್ಧವಿದೆ... (ಸತ್ಯಭಾಮೆಯತ್ತ ತಿರುಗಿ ನೋಡಿ), ದೇವಿ! ನಿನಗೆ ನೆನಪಿದೆಯೇ? ಮೂವತ್ತೇಳು ವರ್ಷಗಳ ಹಿಂದೆ, ಒಂದು ತುರ್ತು ಪ್ರಯಾಣ ಮುಗಿಸಿ ಬಂದ ನಾನು, ಒಂದು ಪ್ರಧಾನ ರಾಜಕಾರ್ಯ ಕೆಟ್ಟುದನ್ನೂ, ಅಲ್ಲಿ ಹಸ್ತಿನಾವತಿಯ ಸಭೆಯಲ್ಲಿ ಏನೇನು ನಡೆಯಿತೆಂಬುದನ್ನೂ, ಅಲ್ಲಿ ಯಾರಾರೂ ಏನೇನು ಹೇಳಿದರೆಂಬುದನ್ನೂ ಚಾಚೂ ಬಿಡದೆ ನಿನಗೆ ಹೇಳಿದ್ದೆ, ನೆನಪಾಯಿತೇ!"

ಸತ್ಯಭಾಮೆ ತಲೆತಗ್ಗಿಸಿ ಚಿಂತಿಸುತ್ತಾಳೆ!... ತಲೆ ಎತ್ತಿ ಕಣ್ಣರಳಿಸಿ, ಭಯದಿಂದ ಶ್ರೀಕೃಷ್ಣನನ್ನು ನಿಟ್ಟಿಸಿ ನೋಡಿ, ಗಂಭೀರವದನೆಯಾಗುತ್ತಾಳೆ. ಕಂಗಳಿಂದ ನೀರು ಹನಿಗಳು ಉದುರಲಾರಂಭಿಸುತ್ತವೆ. ಶ್ರೀಕೃಷ್ಣನ ರಾಜಕೀಯ ರಹಸ್ಯಗಳನ್ನು ಬಲ್ಲವಳೂ, ಈ ದೃಷ್ಟಿಯಿಂದ ಅವನನ್ನರ್ಥ ಮಾಡಿಕೊಂಡವಳೂ ಸತ್ಯಭಾಮೆಯೇ ಎಂಬುದನ್ನು ಇತರ ಮಹಿಷಿಯರೂ ಬಲ್ಲರು. ಈಗ "ಅದೇನು?" ಎಂಬಂತೆ ಉಳಿದವರು ಸತ್ಯಭಾಮೆಯತ್ತ ನೋಡುತ್ತಾರೆ. "ಹೇಳು" ಎಂಬಂತೆ ಶ್ರೀಕೃಷ್ಣ ಅವಳಿಗೆ ಸನ್ನೆಯಿಂದ ಸೂಚಿಸುತ್ತಾನೆ. ಸತ್ಯಭಾಮೆ ಹೇಳಲಾರಂಭಿಸುತ್ತಾಳೆ.

**ಸತ್ಯಭಾಮೆ:** "ಸ್ವಾರ್ಥೇ ಸರ್ವೋೞಪಿ ಮುಹ್ಯತಿ.... ಹೀಗೆಂದವನು ಧೃತರಾಷ್ಟ್ರ! ಸಂದರ್ಭ, ಕೌರವರೊಡನೆ ಸಂಧಾನದ ಸಭೆ. ಪ್ರಭುಗಳು ಉಪದೇಶ ಕೊಟ್ಟು 'ಸರ್ವನಾಶವಾಗುವ ಮುನ್ನ, ನಿನ್ನ ಮಗನಿಗೆ ಬುದ್ಧಿಹೇಳು. ಕೇಳದಿದ್ದರೆ ಅವನನ್ನು, ಅವನ ಹಿಂಬಾಲಕ ಪುತ್ರರನ್ನೂ ತೊರೆದುಬಿಡು. ಉಳಿದವರಾದರೂ ಬದುಕಲಿ' ಎಂದಾಗ ಧೃತರಾಷ್ಟ್ರ ಒಪ್ಪದೆ 'ಆಗುವುದಾಗಲಿ, ಸ್ವಾರ್ಥವಿದ್ದೆಡೆ ಎಲ್ಲರಿಗೂ ಮೋಹ ಬರುತ್ತದೆ' ಎಂದನಂತೆ. ವೇದವ್ಯಾಸರು ಬಂದು ಬುದ್ಧಿ ಹೇಳಿದರೂ ಇದೇ ಮೊಂಡುಮಾತನ್ನೇ ಅಲ್ಲೂ ಹೇಳಿದನಂತೆ!"

ತಲೆ ತಗ್ಗಿಸುತ್ತಾಳೆ. ಅಳುತ್ತಾಳೆ. ಇತರರೂ ಬಿಕ್ಕಿ ಬಿಕ್ಕಿ ಅಳಲಾರಂಭಿಸುತ್ತಾರೆ. ಶ್ರೀಕೃಷ್ಣ ಅವರಾರನ್ನೂ ಸಂತೈಸುವುದಿಲ್ಲ. ಕೊಂಚ ಹೊತ್ತಾದ ಮೇಲೆ ಶ್ರೀಕೃಷ್ಣನೇ ಆ ಸಂದರ್ಭವನ್ನು ವ್ಯಾಖ್ಯಾನಿಸುತ್ತಾನೆ:

**ಶ್ರೀಕೃಷ್ಣ:** "ರಾಣಿಯರೇ! ಅದರರ್ಥ ನಿಮಗಾಯಿತೆ? ಆದಂತಿಲ್ಲ! ನಾನೇ ಬಿಡಿಸಿ ಹೇಳುತ್ತೇನೆ, ಕೇಳಿ. ಧೃತರಾಷ್ಟ್ರನ ಬುದ್ಧಿಗೆ ಅಂದು ಕಲಿಪುರುಷ ಅಡರಿಕೊಂಡಂತೆ, ಇಂದು ಯದುಕುಲದಲ್ಲೂ, ನಿಮ್ಮ ಬುದ್ಧಿಯಲ್ಲೂ, ಅಡರಿಕೊಂಡಿದ್ದಾನೆ! ಧೃತರಾಷ್ಟ್ರನ ಪುತ್ರವ್ಯಾಮೋಹ, ಕೌರವ ಕುಲವನ್ನು ಮಾತ್ರವಲ್ಲದೆ, ಭರತವರ್ಷದ ಸಮಾಜವನ್ನೇ ಬಲಿ ತೆಗೆದುಕೊಂಡಿತು! ನಿಮ್ಮ ಪುತ್ರ ವ್ಯಾಮೋಹ ಯದುವಂಶವನ್ನೂ, ಇಂದಿನ ಭಾರತೀಯ ಸಮಾಜವನ್ನೂ ಬಲಿತೆಗೆದುಕೊಳ್ಳದಿರಲಿ!! ಯಾವ ವ್ಯಾಮೋಹವೂ ಅಷ್ಟೆ - ಸಮಾನವಾಗಿಯೇ ಹಾನಿಕರ. ಆದರೂ ನಿರ್ಜೀವ ವಸ್ತುಗಳ ವ್ಯಾಮೋಹಕ್ಕಿಂತ ಒಂದು ಬಗೆಯಲ್ಲಿ ಜೀವಂತ ವಸ್ತುಗಳ ಮೇಲಿನ ವ್ಯಾಮೋಹ ಬಲುಕೆಟ್ಟದು... ಬಲು ಕೆಟ್ಟದು..."

**ರುಕ್ಮಿಣಿ:** "ಪ್ರಭು! ತಾವು ಸರ್ವಜ್ಞರು! ಯೋಗೀಶ್ವರರು! ಎಂದೂ ಯಾವುದನ್ನೂ, ಅಂಟಿಕೊಂಡವರಲ್ಲ, ನಿಮ್ಮ ವಿರಕ್ತಿಯನ್ನು ಸ್ತ್ರೀಯರಾದ ನಾವು, ಅದರಲ್ಲೂ ಪುತ್ರವತಿಯರಾದವರು, ಹೇಗೆ ಅನುಸರಿಸಬಲ್ಲೆವು? ಬೇರೇನಾದರೂ ಉಪಾಯದಿಂದ ತಾವು ಕುಲವನ್ನೂ ಲೋಕವನ್ನೂ ಹೇಗಾದರೂ ಈಗ ಸಂರಕ್ಷಿಸಲು ಸಾಧ್ಯವೇ ಇಲ್ಲವೇ? ಕಾಲಪುರುಷ ಸ್ವತಂತ್ರನೇ? ಅವನಿಗೂ ದಿಗ್ದರ್ಶನ ಮಾಡಬಲ್ಲವರು ತಾವಲ್ಲವೇ?..."

ಶ್ರೀಕೃಷ್ಣ: (ಮತ್ತೊಂದು ಪರಿಹಾಸ ತುಂಬಿದ ನಗೆಸೂಸಿ) "ದೇವಿ, ನೈಜ ವಿರಕ್ತಿಗೆ ಸ್ತ್ರೀಭೇದ-ಪುರುಷ ಭೇದವೆಂಬುದುಂಟೇ? ಲೋಕ ಪ್ರವಾಹದಲ್ಲಿ ಯಾವ ಬಂಧು-ಬಾಂಧವ ಸಂಬಂಧವೂ ಶಾಶ್ವತವಲ್ಲ. ಎಷ್ಟು ಸಲ ನಿನಗೆ ಈ ಮಾತನ್ನು ಹೇಳಿದ್ದೇನೆ? ಶಾಶ್ವತ ಸಂಬಂಧ, ಸದಾ ಇರುವುದು ಭಗವಂತನೊಬ್ಬನೊಡನೆ ಮಾತ್ರ. ಅವನ ಮೂಲಕ ಏರ್ಪಟ್ಟ ಸಂಬಂಧ ಯಾವುದಾದರೂ ಸುಖಕರವೇ. ಅದನ್ನು ಮರೆತಾದದ್ದು ದು:ಖಕರವೇ. ಸ್ತ್ರೀ-ಪುರುಷ ಸ್ವರೂಪಭೇದವು ಮನುಷ್ಯ ಲೋಕದಲ್ಲಿ ಏರ್ಪಡುವುದು ಕರ್ಮದಿಂದ. ಆತ್ಮನಿಗೆ ಅದು ಸ್ವಾಭಾವಿಕವಲ್ಲ. ಮಹಾ ಯೋಗಿನಿಯರೂ ವಿರಕ್ತಾಗ್ರೇಸರರೂ ಆದ ಮಹರ್ಷಿ ಪತ್ನಿಯರ ಬಗೆ ಕೇಳಿಲ್ಲವೆ? ಪುತ್ರವತಿಯರಾಗಿರಲಿ, ಅಪುತ್ರವತಿಯರಾಗಿರಲಿ, ವೈರಾಗ್ಯ ಅಸಾಧ್ಯವಲ್ಲ, ಅಭ್ಯಾಸಬೇಕು, ಅಷ್ಟೆ. ಎರಡನೆಯದಾಗಿ ಕಾಲಪುರುಷ ಸ್ವತಂತ್ರನೇ? ಎಂದು ಕೇಳಿದೆ! ನೆನಪಿಸಲೇ? ಅರ್ಜುನನಿಗೆ ವಿಶ್ವರೂಪ ತೋರಿದ ನಾನು, ಅವನು ಭಯಪಟ್ಟು 'ನೀನಾರು?' ಎಂದು ಕೇಳಿದಾಗ 'ನಾನೇ ಕಾಲ' ಎಂದೆ! ಕೇಳಿರುವೆಯಲ್ಲವೆ? ಇದರರ್ಥ ಮಾಡಿಕೋ! ನನ್ನ ನಿನ್ನ ಪರತ್ವವನ್ನು ಕುರಿತು ನಾವು ಆದಷ್ಟೂ ಮಾತಾಡದಿರುವುದು ಒಳ್ಳೆಯದಾದರೂ, ಮಾನುಷ ಭಾವದಲ್ಲಿ ಕೇಳಿದ್ದರಿಂದ ನೆನಪಿಸಬೇಕಾಯಿತು! ಮೂರನೆಯದಾಗಿ, ಕಾಲವನ್ನೂ ಲೋಕವನ್ನೂ ಹೇಗಾದರೂ ರಕ್ಷಿಸಲು ಈಗ ನನಗೆ ಶಕ್ಯವಿಲ್ಲವೇ? ಎಂದು ಕೇಳಿದೆಯಲ್ಲವೆ? ನಿನ್ನ ತಂಗಿ ಸತ್ಯಭಾಮೆಯನ್ನು ಕೇಳು, ಉತ್ತರಿಸುತ್ತಾಳೆ."

ಸತ್ಯಭಾಮೆ, ಏನೋ ಒಂದು ಮಾಯೆಯಿಂದ ನಿರ್ಮುಕ್ತಳಾದವಳಂತೆ, ವಿಚಿತ್ರವಾದ ನೆಟ್ಟದೃಷ್ಟಿಯಿಂದ ಶ್ರೀಕೃಷ್ಣನನ್ನು ನೋಡುತ್ತಾಳೆ. ಶ್ರೀ ಕೃಷ್ಣನೂ ಸಹ ರಾಣಿಯರನ್ನು ಒಂದು ಮೋಹಕ ವಿಚಿತ್ರ ದೃಷ್ಟಿಯಿಂದ ನೋಡುತ್ತಾನೆ. ಆ ಕ್ಷಣದಲ್ಲಿ ರಾಣಿಯರಿಗೆ ಅಂತ:ಪುರದ ಆ ಸನ್ನಿವೇಶ ಕಣ್ಣಿಂದ ಮರೆಯಾಗುತ್ತದೆ. ಬೇರೊಂದು ಕಾಣಲಾರಂಭಿಸುತ್ತದೆ... ಬೆಳ್ಳಗಿನ ಹಾಲಿನ ಸಮುದ್ರ!.... ಅದರಲ್ಲಿ ಏಳುವಬೀಳುವ ತರಂಗಗಳ ಸೊಬಗು ವಾಙ್ಮಗೋಚರ!!... ಅದರ ನಡುವೆ ಬಿಳಿಯ ಬಣ್ಣದ ಭವ್ಯ ಸುಂದರ ಆದಿಶೇಷನ ಶಯನದ ಮೇಲೆ ಶ್ರೀಕೃಷ್ಣ, ಅನಿರುದ್ಧಮೂರ್ತಿಯಾಗಿ, ಚತುರ್ಭುಜನಾಗಿ, ಶಂಕಚಕ್ರಗದಾಪದ್ಮಧಾರಿಯಾಗಿ ಸುಖಶಯನದಲ್ಲಿ ವಿರಾಜಮಾನನಾಗಿದ್ದಾನೆ... ಶ್ರೀದೇವಿ ಭೂದೇವಿಯರು ಅವನ ಪಾದದ ಬಳಿ ಕುಳಿತು ಸೇವೆಗೈಯ್ಯುತ್ತಿದ್ದಾರೆ! ಶ್ರೀದೇವಿ ರುಕ್ಮಿಣಿಯನ್ನು ಹೋಲುತ್ತಾಳೆ! ಭೂದೇವಿ ಸತ್ಯಭಾಮೆಯನ್ನು ಹೋಲುತ್ತಿದ್ದಾಳೆ.... ಆ ದಿವ್ಯ ಕ್ಷೀರಸಮುದ್ರದ ಒಂದು ದಡದಲ್ಲಿ ಬ್ರಹ್ಮಾದಿಸಕಲದೇವತೆಗಳೂ ನಿಂತು ಭಗವಂತನನ್ನು ಸ್ತುತಿಸುತ್ತಿದ್ದಾರೆ. (ಪವಿತ್ರ ವೇದ ವಾಕ್ಕುಗಳಿಂದ ಪೂರ್ಣವಾದ ಆ ದಿವ್ಯ ಸ್ತುತಿಯಿಂದ ಈಗ ಇಲ್ಲಿ ಅಂತ:ಪುರದ ರಾಣಿಯರೂ ಪುಲಕಿತರಾಗುತ್ತಾರೆ!). ಆ ದೇವತೆಗಳ ಮುಂದೆ ಧರಣೀದೇವಿ (ಭೂದೇವಿ)ಯ ಇನ್ನೊಂದು ಮೂರ್ತಿ ನಿಂತಿದೆ! ಸತ್ಯಭಾಮೆಯಂತೆಯೇ ಅವಳು ಕಾಣುತ್ತಾಳೆ.

ಭೂಮಿ: "ಪ್ರಭು! ನನ್ನ ಗೋಳನ್ನು ಕೇಳಬೇಕು! ನನ್ನ ಮೇಲೆ ಭಾರ ಹೆಚ್ಚಾಗಿದೆ! ನಾನು ಪಾತಾಳಕ್ಕಿಳಿಯದಂತೆ ನೀನು ನನ್ನ ಭಾರವನ್ನು ಹೊರಲು ಗೋವುಗಳನ್ನೂ, ಜ್ಞಾನಿಗಳನ್ನೂ, ವೇದಗಳನ್ನೂ, ಪತಿವ್ರತಾಸ್ತ್ರೀಯರನ್ನೂ, ಸತ್ಯವಂತರಾದ ಮನುಷ್ಯರನ್ನೂ ನಿಯಮಿಸಿ, ಒಂದು ಕಾಲದಲ್ಲಿ ಅವರ ಸಂಖ್ಯೆ ಬೆಳೆಯುವಂತೆ, ಅವರ ನಿಷ್ಠೆ ಅಚಲವಾಗಿರುವಂತೆ ಏರ್ಪಡಿಸಿದೆ! ಧರ್ಮಶೀಲರೂ, ದಾನಶೀಲರೂ ಸಹ ಈ ಭಾರವನ್ನು ಹೊರುತ್ತಾ ನನಗೆ ಆಧಾರವಾಗಿದ್ದ ಆ ಕಾಲ ಮುಗಿದುಹೋಯಿತು!! ಈಗ ಧರ್ಮನಾಶಕರೂ, ಅಧರ್ಮ ಪ್ರೇರಣೆಯಿಂದ ಸದಾ ಅಕಾರ್ಯಗಳನ್ನೇ ಮಾಡುವವರೂ, ಅವರನ್ನು ಯಾರೂ ತಡೆಯದಂತೆ ಮನಸ್ವಿಯಾಗಿ ಅಸತ್ಯಾಚರಣೆಯಲ್ಲೇ ತೊಡಗಿದವರೂ ಆದ ರಾಕ್ಷಸರು ಪರ್ವತಗಳಷ್ಟು ಭಾರವಾಗಿ ನನ್ನನ್ನಾಕ್ರಮಿಸಿದ್ದಾರೆ. ಈ ಭಾರವನ್ನಿಳುಹಿ ನನ್ನನ್ನು ರಕ್ಷಿಸುವುದು ನಿನ್ನ ಕರ್ತವ್ಯ."

ಬ್ರಹ್ಮರುದ್ರಾದಿದೇವತೆಗಳೂ ಈ ಮಾತಿಗೆ ಧ್ವನಿಗೂಡಿಸುತ್ತಾರೆ. ತಾಪಹರವಾದ ವಿಲಕ್ಷಣ ಮಂದಸ್ಮಿತದಿಂದ ಕ್ಷೀರಾಬ್ಧಿಶಾಯಿಯು ಭೂದೇವಿಯನ್ನೂ, ದೇವತೆಗಳನ್ನೂ ಅವಲೋಕಿಸಿ "ನಿಮ್ಮನ್ನು ಸಂರಕ್ಷಿಸುತ್ತೇನೆ. ಭೂಭಾರವನ್ನಿಳುಹುತ್ತೇನೆ... ವಸುದೇವ ದೇವಕಿಯರ ಪುತ್ರನಾಗಿ ಅವತರಿಸುತ್ತೇನೆ; ಭಯಬೇಡ" ಎಂದು ಆಶ್ವಾಸನೆ ನೀಡುತ್ತಾನೆ.... ಶ್ರೀಕೃಷ್ಣಮಾಯೆ ದೂರಸರಿಯುತ್ತಾ ಉಳಿದ ರಾಣಿಯರು "ತಾವು ಕಂಡುದು ಕನಸೋ! ನನಸೋ!" ಎಂದು ಮುಗ್ಧಾವಸ್ಥೆಯಲ್ಲಿರುವಾಗ ಸತ್ಯಭಾಮೆ ಇನ್ನೂ ಆ ಮಾಯೆಯಲ್ಲೇ ಇದ್ದು ಹೀಗೆನ್ನುತ್ತಾಳೆ:

**ಸತ್ಯಭಾಮೆ:** "ಪ್ರಭು! ತಮ್ಮ ರಾಣಿಯರಲ್ಲಿ ನನ್ನದು ವಿಲಕ್ಷಣ ಸ್ಥಿತಿ. ಮಕ್ಕಳು ದುಷ್ಟರೋ, ಶಿಷ್ಟರೋ, ಎಲ್ಲರಿಗೂ ನಾನೇ ವಾಸಸ್ಥಾನ ಆಗಬೇಕಾದವಳು. ಭಾರ ಹೊರುವವಳೂ ನಾನೇ! ನನ್ನ ಕಷ್ಟ ನೋಡಲಾರದೆಯೇ ವಾರಾಹರೂಪಧರಿಸಿ, ನನ್ನನ್ನುದ್ಧರಿಸಿದಿರಿ! ಪರಶುರಾಮರೂಪದಲ್ಲಿ ಆಗ ಭೂಭಾರ ಇಳುಹಿದವರೂ ತಾವೇ. ಶ್ರೀ ರಾಮರೂಪದಲ್ಲೂ! ಈಗ ಶ್ರೀಕೃಷ್ಣಾವತಾರದಲ್ಲೂ ಅದನ್ನೇ ತಾವು ಮಾಡಬೇಕಾಗಿದೆ. ಪೂತನೆ, ಕಂಸ, ಜರಾಸಂಧ, ಶಿಶುಪಾಲ ಇವರದೊಂದು ಬಗೆಯ ಕಾಟ ತೀರಿತು! ಕೌರವ ರೂಪದ ಕ್ಷತ್ರಿಯ ಸೋಗಿನ ಅಸುರರನ್ನು ತತ್ಸಂಬಂಧಿಗಳನ್ನು ನಿವಾರಿಸಿ ಆಯ್ತು. ಈಗ ಯಾದವ ಕುಲದಲ್ಲೂ ಉಳಿದಿರುವ ಆಸುರೀಶೇಷವನ್ನು ಮುಗಿಸಿ ನನ್ನ ಭಾರವನ್ನು ಪೂರ್ತಾ ಇಳುಹಲು ಉದ್ದೇಶಿಸಿರುವಿರಿ! ನಾನೇ ಹಾಗೆ ಪ್ರಾರ್ಥಿಸಿ, ಈಗ 'ಈ ಯದುಮುಗ್ಧರನ್ನು ಉಳಿಸಿ' ಎಂದು ಪ್ರಾರ್ಥಿಸುವ ಈ ವಿಪರ್ಯಾಸವನ್ನು ಕ್ಷಮಿಸಬೇಕು. ತಮ್ಮ ಮಾಯೆ ಯಾರನ್ನೂ ಬಿಟ್ಟದ್ದಲ್ಲ" ಎಂದು ಹೇಳಿ ಅಳುತ್ತಾಳೆ.

ವಿಷ್ಣು ಮಾಯೆ ತೀರುತ್ತದೆ.

ರುಕ್ಮಿಣಿದೇವಿಯೂ ಇತರರೂ ಈ 'ಕನಸಿ'ನಿಂದ ಎಚ್ಚೆತ್ತು, ವಿಸ್ಮಿತರಾಗಿ, ಏನೂ ಹೇಳಲು ತೋರದೆ ತಲೆತಗ್ಗಿಸಿ ಕುಳಿತಿದ್ದಾರೆ.

ಶ್ರೀಕೃಷ್ಣನೇ ಮತ್ತೆ ಮಾತನ್ನಾರಂಭಿಸುತ್ತಾನೆ:

**ಶ್ರೀಕೃಷ್ಣ:** "ದೇವಿಯರೇ! ನನಗೆ ಮಾಯಾವೀ, ಮೋಸಗಾರ ಎಂಬ ಬಿರುದು ಬಹು ಹಿಂದಿನಿಂದಲೂ ಬಂದಿದೆ. ನನ್ನನ್ನು ಅರ್ಥಮಾಡಿಕೊಂಡವರೇ ವಿರಳ. ನೀವೂ ಆ ಗುಂಪಿಗೆ ಸೇರದೆ ಗಾವಿಲರಂತೆ ಏನೇನೋ ಕೇಳುತ್ತಿರುವಿರಿ. ಈಗಿನ ಯದುಪೀಳಿಗೆ ಹೇಗಿದೆ ಎಂಬುದಕ್ಕೆ ನಿಮಗೆ ಪ್ರಮಾಣ ತೋರಿಸುತ್ತೇನೆ" ಎಂದವನೇ, ತಾನೇ ಅಂತಃಪುರದ ಬಾಗಿಲನ್ನು ತೆರೆದು ಚೇಟಿಯೊಬ್ಬಳನ್ನು ಬಳಿ ಕರೆದು "ಗೂಢಚಾರರ ಮುಖಂಡನಾದ ಜಿತಾಮಿತ್ರನನ್ನು ಕೂಡಲೇ ಕರೆದು ತಾ" ಎಂದಪ್ಪಣೆ ಮಾಡುತ್ತಾನೆ.

ರಾಣಿಯರು ಚಕಿತರಾಗಿ "ಮತ್ತೇನು ಕಾದಿದೆಯೋ!" ಎಂಬ ತವಕದಿಂದ ಕುತೂಹಲಿಗಳಾಗಿ ಕಾಯುತ್ತಾರೆ.

ಜಿತಾಮಿತ್ರನು ತನ್ನ ನಾಲ್ವರು ಅನುಚರರೊಡನೆ ವೇಗವಾಗಿ ಧಾವಿಸಿ ಬರುತ್ತಾನೆ. ದೂರದಿಂದ ಸಾಷ್ಟಾಂಗ ಪ್ರಣಾಮಮಾಡಿ ತಲೆತಗ್ಗಿಸಿ ನಿಂತ ಅವನನ್ನು ಶ್ರೀಕೃಷ್ಣಪ್ರಭುವು ಹತ್ತಿರ ಬರುವಂತೆ ಸನ್ನೆಮಾಡಿ "ಭಯ ಪಡಬೇಡ! ಇಷ್ಟು ದಿನಗಳವರೆಗೆ ನೀನೂ ನಿನ್ನ ತಂಡದವರೂ ಕೂಡಿಹಾಕಿರುವ ಗೂಢವಾರ್ತೆಗಳನ್ನು ಇಲ್ಲಿ ವಿವರವಾಗಿ ಹೇಳು" ಎಂದು ಆಜ್ಞಾಪಿಸುತ್ತಾನೆ.

ಜಿತಾಮಿತ್ರನಿಗೆ ಭಯವೂ ಸಂಕೋಚವೂ ಆಗುತ್ತದೆ. ಮತ್ತೆ ಮತ್ತೆ ಶ್ರೀಕೃಷ್ಣಪತ್ನಿಯರ ಮುಖವನ್ನೂ ಪ್ರಭುವಿನ ಮುಖವನ್ನೂ ನೋಡುತ್ತಾ ತಲೆತಗ್ಗಿಸಿ ನಿಲ್ಲುತ್ತಾನೆ. ಶ್ರೀಕೃಷ್ಣ ಅವನನ್ನು ಸಮೀಪಿಸಿ, ನಸುನಕ್ಕು ಬೆನ್ನುತಟ್ಟಿ "ಮಾತಾಡು" ಎಂದಾಗ ಜಿತಾಮಿತ್ರ ತನ್ನ ಸುದೀರ್ಘ ವರದಿಯನ್ನು ರಾಣಿಯರೆದುರು ಒಪ್ಪಿಸುತ್ತಾನೆ. ಅದರ ಸಾರ ಇಷ್ಟು:

"ಯದುಗಳು ಮಹಾಭಾರತ ಯುದ್ಧದಲ್ಲಿ ತಟಸ್ಥರಾಗಿರುವುದನ್ನು ಬಿಟ್ಟು, ಕೌರವಪಕ್ಷದಲ್ಲಿ ಇವರ ಸೈನ್ಯವೂ, ಪಾಂಡವ ಪಕ್ಷದಲ್ಲಿ ಶ್ರೀಕೃಷ್ಣನೂ ನಿಂತು ಯುದ್ಧ ಮಾಡಿದ್ದು ಶುದ್ಧ ತಪ್ಪು. ಇದೆಂಥ ತಟಸ್ಥತನ? ಕೌರವ ಪಾಂಡವರು ರಾಜ್ಯಕ್ಕಾಗಿ ಬಡಿದಾಡಿದರೆ ಇದರಲ್ಲಿ ಯಾದವ ಸೈನ್ಯ ಏಕೆ ಸಾಯಬೇಕಿತ್ತು? ಹಾಗೆ ಏರ್ಪಡಿಸಿದ ಶ್ರೀಕೃಷ್ಣ ಯಾದವರಿಗೆ ದ್ರೋಹವನ್ನೇ ಮಾಡಿದ. ಅವನ ರಾಜನೀತಿಯ ವೈಫಲ್ಯ ಇದು. ಯದುಗಳೂ ಹಿಂದೆ ಯಯಾತಿಯ ಸಂತಾನದವರೇ! ಪುರು ವಂಶದವರು ಹಸ್ತಿನಾವತಿಯ ಅರಸೊತ್ತಿಗೆಗೆ ವಾರಸುದಾರರಾದಂತೆ, ಯದುಗಳೂ ಆಗಬೇಕಿತ್ತು. ಯಯಾತಿಯೇನೋ ಶಾಪ ಹಾಕಿದ! ಸರ್ವಶಕ್ತನೆಂಬ ಬಿರುದನ್ನು ಪಡೆದ ಶ್ರೀಕೃಷ್ಣ, ಸುಸಂಧಿಯನ್ನು ಬಳಸಿಕೊಂಡು ಅಲ್ಲಿ ಯದುವೀರನೊಬ್ಬನನ್ನು ಪ್ರತಿಷ್ಠಿಸದೇ ಹೋದುದೂ ಒಂದು ವೈಫಲ್ಯ! ತಾನಾದರೂ ಅರಸಾದನೇ? ಇಲ್ಲ! ಹಾಗಾದರೆ ಯಾದವರಿಗೆ ಆಪತ್ತನ್ನೇ ತಂದ ಈ ಸುಡುಗಾಡು ರಾಜಕಾರಣ ಏಕೆ ಬೇಕಿತ್ತು? ಹಾಯಾಗಿ ಮಥುರೆಯಲ್ಲಿದ್ದವರನ್ನು ತಾನೇ ಗಡೀಪಾರು ಮಾಡಿ, ಈ ಕೊಂಪೆಯಾದ ದ್ವಾರಕೆಗೆ ಏಕೆ ರಾತ್ರೋರಾತ್ರಿ ಕರೆತರಬೇಕಿತ್ತು? ಭರತವರ್ಷದ ರಾಜಕಾರಣದ ಕೇಂದ್ರದಿಂದಲೇ ಅವರನ್ನು ದೂರೀಕರಿಸಿದಂತಾಗಲಿಲ್ಲವೆ? ಜರಾಸಂಧಾದಿಗಳನ್ನು ಎದುರು ಹಾಕಿಕೊಂಡು ಸಾಧಿಸಿದ್ದೇನು? ಕಂಸ ಎಂಥವನಾದರೂ ಪ್ರಬಲ ಆಡಳಿತಗಾರನೇ ಇದ್ದ; ಅವನನ್ನು ಕೊಂದು ಈ ನಿರುಪಯುಕ್ತ ಉಗ್ರಸೇನನನ್ನು ಮತ್ತೆ ಪ್ರತಿಷ್ಠಿಸಿದ್ದು ತನ್ನ ಸ್ವಾರ್ಥದಿಂದಲೇ! ತಾನು ಹೇಳಿದಂತೆ ಕೇಳುವವನೊಬ್ಬ ಬೇಕೆಂದು! ಅಲ್ಲಿ ಪಾಂಡವರನ್ನು ಪ್ರತಿಷ್ಠಿಸಿದ ಸ್ವಾರ್ಥವೂ ಇಂಥದೇ!!... ಇಲ್ಲಿ ದ್ವಾರಕೆಯಲ್ಲಾದರೂ ನೆಮ್ಮದಿಯುಂಟೇ? 'ಧರ್ಮ' ಎಂಬ ಗೊಡ್ಡು ಹಗ್ಗದಿಂದ ಜೀವನವನ್ನೇ ಬಿಗಿದಾಗಿದೆ! ಬ್ರಾಹ್ಮಣರಂತೆ, ದಾನಧರ್ಮಗಳಂತೆ, ದೇವಾಲಯಗಳಂತೆ! ನಿರರ್ಥಕ ಖರ್ಚುಗಳಿಗೆ ಇವೆಲ್ಲ ತೆರೆದ ಬಾಗಿಲುಗಳಲ್ಲವೆ? ಶ್ರೀಕೃಷ್ಣನ ವೈಯಕ್ತಿಕ ಚರಿತ್ರೆಯಾದರೂ ಎಂಥದು? ಎಷ್ಟು ಪತ್ನಿಯರು! ಎಷ್ಟೊಂದು ಮಕ್ಕಳು, ಮೊಮ್ಮಕ್ಕಳು!... ಬಾಲ್ಯದ ಗೋಪಸ್ತ್ರೀಯರೊಡನೆ ನಡೆದ ವಿಹಾರಗಳನ್ನೇನು ಮಾಡಬೇಕು? ಇವನು ಈಗ ಯೋಗೀಶ್ವರನೆಂದು ಸೋಗು ಹಾಕಿದರೆ ಯಾರಿಗೆ ನಂಬಿಕೆ ಬಂದೀತು? ಯಾದವ ಕುಲಗಳು ಇವನ ಹೆಸರು ಹೇಳಿ ತಲೆ ಎತ್ತಿ ಗೌರವದಿಂದ ಬದುಕುವುದು ಸಾಧ್ಯವೇ? ಮಹಾಭಾರತ ಯುದ್ಧದಲ್ಲಿ ಇವನು ಬಳಸಿದ ತಂತ್ರಗಳಿಂದ ರಾಜನೀತಿಗೇ ಕೆಟ್ಟ ಹೆಸರು ಬಂದಿದೆ! ಭೀಷ್ಮರಂಥ ಹಿರಿಯರನ್ನು, ದ್ರೋಣನಂಥ ತಪಸ್ವೀ ಬ್ರಾಹ್ಮಣನನ್ನು ಅಧರ್ಮ ಮಾರ್ಗದಿಂದ ಕೊಲ್ಲಿಸಿದ ಇವನು ಈಗ ಹೇಳುವ ಧರ್ಮಕ್ಕೇನು ಬೆಲೆ? ಕರ್ಣನನ್ನೋ? ಬೆಸ್ತರೂ ಬೇಡರೂ (ಏಕಲವ್ಯನ ಕಡೆಯವರು) ಸೇಡಿಗಾಗಿ ಕಾದಿದ್ದಾರೆ!! ಇದೆಲ್ಲ ಕೃಷ್ಣನ ಬಗೆಗೆ ಜನ, ಯದುವೀರರೂ, ಹರೆಯದ ಯುವ ಮುಖಂಡರೂ ಆಡಿಕೊಳ್ಳುತ್ತಿರುವ ಮಾತುಗಳು. ಇನ್ನೊಂದತ್ತ ಯಾದವರ ಒಳ ಪಂಗಡಗಳಲ್ಲಿ ಉಗ್ರಸೇನನ ನಂತರ ಯಾವ ಗುಂಪಿನವರು, ಅದರಲ್ಲಿ ಯಾರು ಅಧಿಕಾರಕ್ಕೆ ಬರಬೇಕೆಂಬ ವಿಷಯದಲ್ಲಿ ಪ್ರಬಲ ಪೈಪೋಟಿಯೇ ನಡೆದಿದೆ. ಉಗ್ರಸೇನ ಪುತ್ರರು (ಕಂಸ ಸೋದರರು), ನ್ಯಗ್ರೋಧ, ಸುನಾಭ ಶಂಕು ಮೊದಲಾದವರು ರಾಜ್ಯ ಉಳಿಸಿಕೊಳ್ಳಲು ಹೋರಾಡುತ್ತಿದ್ದಾರೆ. ವೃಷ್ಣಿ, ಭೋಜ, ಅಂಧಕ, ಶೂರಸೇನ ವಂಶೀಯ ಯುವಕರು ಒಂದೊಂದು ಸೈನ್ಯ ತುಕಡಿಯನ್ನೇ ನಿರ್ಮಿಸುತ್ತಿದ್ದಾರೆ! ಪ್ರಭು ಕೃಷ್ಣನ ಮಕ್ಕಳೂ ಈ ಸ್ಪರ್ಧೆಯಲ್ಲಿ ಹಿಂದೆ ಬಿದ್ದಿಲ್ಲ! ಬೇರೊಂದತ್ತ ಶಿಶುಪಾಲನ ಸಂತಾನದವರೂ, ವಿಂದಾನುವಿಂದರ ಮಕ್ಕಳೂ, ಜರಾಸಂಧನ ಮೊಮ್ಮಗನಾದ ಸೋಮಾಪಿಯೂ ಯದುಗಳ ರಾಜ್ಯವನ್ನು ಹಿಡಿಯಲು, ಹಳೇ ಸೇಡು ತೀರಿಸಿಕೊಳ್ಳಲು ಕಾತುರರಾಗಿದ್ದಾರೆ! ಈ ಯಾದವೀಕಲಹದಲ್ಲಿ ಜನಕ್ಷೇಮ ಯಾರಿಗೂ ಬೇಡವಾಗಿದೆ. ಕುಡಿತ ಎಲ್ಲೆಲ್ಲೂ, ಅರಮನೆಯಲ್ಲೂ ನಡೆದಿದೆ. ವೀರಯುವಕರಿಗೆ ಸ್ವಸ್ತ್ರೀ ಪರಸ್ತ್ರೀ ವಿವೇಕವೂ ಇಲ್ಲದೆ, ಆಭೀರ ಸ್ತ್ರೀಯರನ್ನೂ ಉಪಯೋಗಿಸುತ್ತಿದ್ದಾರೆ. ಕ್ರುದ್ಧರಾದ ಈ ದಸ್ಯುಗಳು, ಆಭೀರರು, ನಗರವನ್ನು ಸುತ್ತುವರಿದು ಉಪಾಯದಲ್ಲಿ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದಾರೆ! ದೊರೆ ಉಗ್ರಸೇನನಿಗೆ

ಇತ್ತ ಗಮನವಿಲ್ಲ; ಗಮನ ಸೆಳೆದರೂ ನಿವಾರಿಸಲು ಶಕ್ತಿಯಿಲ್ಲ! ಯುವಕರಿಗೆ ಯಾವತ್ತಲೂ ಎಚ್ಚರಿಕೆ ಇಲ್ಲ... ಇದು ರಾಷ್ಟ್ರದ ಸ್ಥಿತಿ!"

ಇದನ್ನೆಲ್ಲ ಕೇಳಿದ ರಾಣಿಯರ ಎದೆಗಳು ಉಡುಗಿಹೋದವು! ಶ್ರೀಕೃಷ್ಣ, ಗೂಢಚಾರರಿಗೆ ತಾನು ಧರಿಸಿದ್ದ ಅಮೂಲ್ಯ ಮಣಿರತ್ನ ಹಾರಗಳನ್ನು ಬಹುಮಾನವಾಗಿತ್ತು ಕಳುಹಿದ.

ರಾತ್ರಿ ಕ್ರಮಿಸುತ್ತಾ ಇದ್ದದ್ದು ಯಾರೊಬ್ಬರ ಗಮನಕ್ಕೂ ಬರಲಿಲ್ಲ! ಬರೀ ನಿಟ್ಟುಸಿರುಗಳಲ್ಲಿ ಅಂತಃಪುರವೇ ಬೆಂದು ಸುಡುವಂತೆ ಭಾಸವಾಗುತ್ತಿತ್ತು.

ರುಕ್ಮಿಣಿಯೇ ಈ ಸ್ಮಶಾನ ಮೌನವನ್ನು ಮುರಿದು ಹೀಗೆನ್ನುತ್ತಾಳೆ:

"ಪ್ರಭು! ಕೊನೆಯದಾಗಿ ಒಂದು ಮಾತು ಕೇಳುತ್ತೇನೆ! ಬರೀ ಧನುರ್ವಿದ್ಯೆಯನ್ನು ಮಾತ್ರ ಅಭ್ಯಸಿಸುತ್ತಿರುವ ನಮ್ಮ ಯಾದವ ಯುವಕರ ಸಂಖ್ಯೆ ಮೂರು ಕೋಟಿಯ ಮೇಲೆ ಎಂಭತ್ತು ಸಾವಿರದ ಒಂದು ನೂರು ಎಂದು ಕೇಳಿದ್ದೇನೆ! ಇತರ ಬಾಲಕರ ಸಂಖ್ಯೆ ಇನ್ನೆಷ್ಟಿದೆಯೋ ತಿಳಿಯದು. ಹಿಂದೆ ದೇವಾಸುರ ಸಮರದಲ್ಲಿ ಸತ್ತ ದೈತ್ಯರು ಈಗ ಮನುಷ್ಯರಾಗಿ ಜನಿಸಿ, ಜನರಿಗೆ ಉಪದ್ರವ ಕೊಡಲಾರಂಭಿಸಿದ್ದರಿಂದ, ಅವರನ್ನು ಪತ್ತೆ ಹಚ್ಚಿ ಸಂಹರಿಸಲು ದೇವತೆಗಳೂ ಮತ್ತೆ ನಮ್ಮ ಯದುಕುಲದಲ್ಲಿ ಅವತರಿಸಿ ಬಂದಿರುವರೆಂದೂ, ತಮ್ಮ ಅವತಾರವೂ ಈ ಕಲುವಾಗಿಯೇ ಎಂದೂ ಕೇಳಿದ್ದೇನೆ! ಹಾಗಾದರೆ ಯದುಕುಲದಲ್ಲಿ ಭೂಭಾರ ಎಲ್ಲಿ ಬಂತು? ಅಥವಾ ಇಲ್ಲೂ ಅಸುರ ಪ್ರವೇಶವಿದೆಯೋ? ಮಹಾಭಾರತ ಯುದ್ಧದಲ್ಲೇ ಪ್ರಚ್ಛನ್ನ ಅಸುರರ ಸಂಹಾರ ಮುಗಿಯಲಿಲ್ಲವೇ?"

ಶ್ರೀಕೃಷ್ಣ ನಕ್ಕು ಉತ್ತರಿಸಲಾರಂಭಿಸುತ್ತಾನೆ.

**ಶ್ರೀಕೃಷ್ಣ:** "ದೇವಾಸುರ ಯುದ್ಧದಲ್ಲಿ ಸತ್ತ ಅಸುರರೇ ಈ ನಮ್ಮ ಕಾಲದಲ್ಲೂ ಮತ್ತೆ ಮನುಷ್ಯರೂಪದಲ್ಲಿ ಹುಟ್ಟಿಬಂದು ಜನರನ್ನು ಕಾಡಲಾರಂಭಿಸಿದ್ದು ನಿಜ; ಇದು ಮುಗಿಯದ ಕಥೆ. ಮಹಾಭಾರತ ಯುದ್ಧದಲ್ಲಿ ಉಭಯಸೇನೆಯಲ್ಲೂ ಅವರು ಹೊಕ್ಕದ್ದರಿಂದಲೇ ನಾನು ಯುದ್ಧದ ಸೂತ್ರಧಾರಿಯಾಗಿ ನಿಂತು ಅವರನ್ನು ಪರಹಸ್ತಗಳಿಂದ ಸಂಹರಿಸಿದೆ. ಆದರೆ ಅವರು ಮತ್ತೆ ಮತ್ತೆ ಹುಟ್ಟಿ ಬರುತ್ತಲೇ ಇದ್ದಾರೆ! ಅವರವರ ಚರ್ಯೆಗಳಿಂದಲೇ ಅದನ್ನು ಪತ್ತೆಮಾಡಿಕೋ! ದೈವನಿಂದೆ, ಮೌಲ್ಯದೂಷಣೆ, ನಿಷಿದ್ಧಾಚರಣೆ, ಸ್ವೇಚ್ಛಾಪ್ರವೃತ್ತಿ, ಮಾತಾಪಿತೃದೂಷಣೆ, ಮದ್ಯಪಾನ, ಮಿತಿಮೀರಿದ ಭೋಗಪ್ರವೃತ್ತಿ, ಪವಿತ್ರವಸ್ತು-ವಿಷಯಗಳನ್ನು ಅಪಹಾಸ್ಯ ಮಾಡುವ ಪ್ರವೃತ್ತಿ ಇತ್ಯಾದಿ ಲಕ್ಷಣಗಳು ಆಸುರೀ ಲಕ್ಷಣಗಳು; ಬಂಧನದ ಮಾರ್ಗ ಇದು; ಬಿಡುಗಡೆಯದಲ್ಲ. ಅರ್ಜುನನಿಗೆ ಹಿಂದೆ ಯುದ್ಧಾರಂಭದ ದಿನ ಈ ದೈವೀ ಆಸುರೀ ವಿಭಾಗದ ಲಕ್ಷಣಗಳನ್ನೆಲ್ಲ ವಿವರಿಸಿದ್ದೇನೆ. ಜಗತ್ತಿಗೆ ಜಗನ್ನಾಥನು ಹಾಕಿಕೊಟ್ಟ ನಿಯಮಗಳನ್ನು ಮೀರುವ ಪ್ರವೃತ್ತಿಯೆಲ್ಲ ಆಸುರೀ ರೀತಿಯದೇ! ಈಗ ಈ ಅಸುರರು ಎಲ್ಲಿದ್ದಾರೆಂಬುದನ್ನು ನಮ್ಮ ಗೂಢಚಾರರ ಮಾತಿನಿಂದ ಅರಿಯಲಿಲ್ಲವೆ? ನನ್ನ ಅವತಾರ ಬಿಡು! ನನ್ನ ಸಹಾಯಾರ್ಥವಾಗಿ ದೇವತೆಗಳೂ ಇಳಿದು ಬಂದಿದ್ದಾರೆಂಬುದಕ್ಕೆ ವಿವರಣೆ ಕೇಳು. ಮಹಾಭಾರತ ಯುದ್ಧದಲ್ಲಿ ಸತ್ತ ಅವರು ಸ್ವಸ್ವರೂಪಗಳಿಗೆ, ಸ್ವಸ್ಥಾನಗಳಿಗೆ ಮರಳಿದ್ದಾರೆ! ಭೀಷ್ಮ ಒಬ್ಬ ವಸು! ದ್ರೋಣ ಬೃಹಸ್ಪತಿ... ಹೀಗೆ ಇನ್ನೂ ಕೆಲವರು ಮರಳುವುದಿದೆ. ಹೇಗೂ ಇನ್ನೊಂದು ಭೂಭಾರ ಇಳಿಯಬೇಕಾಗಿದೆ. ಪಾಮರರ ಕಣ್ಣಿಗೆ ಯಾರ ಮರಣದಲ್ಲೂ ಏನೂ ಕಾಣುವುದಿಲ್ಲ. ಜ್ಞಾನಿಯ ಕಂಗಳಿಗೆ ಕಾಣುವುದೇ ಬೇರೆ! -ನದಿಗಳು ತೀರ್ಥಗಳಾಗಿ ಪ್ರವಹಿಸಿ, ಭೂಮಿಯನ್ನು ಹಸುರಾಗಿಸಿ, ಪಾವನ ಮಾಡಿ, ಸ್ನಾನಪಾನಾದಿಗಳಿಗೂ ಉಪಯುಕ್ತವಾಗಿ, ತೀರ್ಥಗಳೆನಿಸಿ, ಸಮುದ್ರವನ್ನು ಸೇರಿ ಪೂರ್ಣತೆಯನ್ನು ಪಡೆಯುವ ರೀತಿಯೆಲ್ಲ ಒಂದು ಯೋಗ! ತೀರ್ಥರೂಪರಾದ, ಪಾವನರಾದ, ದೇವತಾಂಶರಾದ ಸಾಧುಗಳ 'ಮರಣ' ರೀತಿ ಇದು. ಪತಂಗವು ದೀಪಜ್ವಾಲೆಯನ್ನು ಹಣ್ಣೆಂದು ಭ್ರಮಿಸಿ, ತಿನ್ನಲು ಹೋಗಿ, ರೆಕ್ಕೆ ಸುಟ್ಟುಕೊಂಡು ದೀಪದ ಎಣ್ಣೆಯಲ್ಲೇ ಬಿದ್ದು ಸಾಯುವುದೂ ಒಂದು ರೀತಿಯ ಮರಣವೇ!! ಇದು ಅಪೂರ್ಣತೆಯ ದ್ಯೋತಕ. ಇಂಥವರು ಮತ್ತೆ ಹುಟ್ಟಿ ಬಂದು

ಸಾಯುತ್ತಲೇ ಇರುತ್ತಾರೆ! ಈಗ ಯದುವೀರರೂ, ಯದು ಕುಮಾರರೂ, ಪತಂಗದ ಹುಳುಗಳೋ, ತೀರ್ಥಗಳೋ, ನೀನೇ ನಿರ್ಧರಿಸು. ಯಾವ ಜಂತುವಿನ ಬದುಕಿಗೂ ಜಗದೀಶ್ವರನು ಒಂದು ಅರ್ಥವನ್ನಿಟ್ಟೇ ಸೃಷ್ಟಿಸಿರುತ್ತಾನೆ. ಆ ಅರ್ಥವನ್ನು ಎಷ್ಟೂ ಸಾಧಿಸದೇ ಭೂಮಿಯ ಮೇಲಿರಲು ಯಾರಿಗಾದರೂ ಹಕ್ಕು ಉಂಟೇ? ಎಂಬುದು ದೇವರದೃಷ್ಟಿಯಿಂದ ಕೇಳಬೇಕಾದ ವೇದಾಂತದ ಪ್ರಶ್ನೆ. ನಾನಾಗಲಿ, ನೀನಾಗಲಿ, ನಮ್ಮನ್ನು ಕೆಲಸ ಮುಗಿದೊಡನೆಯೇ ಗಂಟುಮೂಟೆ ಕಟ್ಟಿ ಹೊರಡಿಸಬೇಕಾದುದು ನಮ್ಮದೇ ಕರ್ತವ್ಯ. ನಾವು ಹಾಗೆ ಮಾಡದಿದ್ದರೆ ದೇವರು ಹೊರಡಿಸುತ್ತಾನೆ, ಅಷ್ಟೆ."

**ರುಕ್ಮಿಣಿ:** 'ಹಾಗೆ ಹೊರಡಿಸುವ ಮುಂಚೆ, ಜೀವನದ ಅರ್ಥ, ಪ್ರಯೋಜನಗಳನ್ನು ತಿಳಿಯದವರಿಗೆ ಅವನ್ನು ತಿಳಿಸಿಹೇಳಿ, ಅವರನ್ನೂ ಪರಿವರ್ತಿಸಿ, ತಿದ್ದಿ, ದಾರಿಗೆ ತಂದು ಉದ್ಧಾರ ಮಾಡಲಾಗದೆ? ಪರಿಪೂರ್ಣರೂ ಅವತಾರಿಗಳೂ ಆದ ತಮಗೆ ಇದು ಉಚಿತವಲ್ಲವೇ? ಇದೊಂದು ಅಸಾಧ್ಯವೇ? ಸುಲಭವಾಗಿ, ಮಂಗಳಮಯವಾಗಿ ಮುಗಿಯಬಹುದಾದ ವ್ಯಾಪಾರವನ್ನು ತಾವು ಬೇಕೆಂದೇ ಘೋರ ಮಾಡುವುದೇಕೆ? ಎಳೆದಾಡುವುದೇಕೆ? ಹಲುಮಾನವರಿಗೆ ಸಂಕಟ ಉಂಟು ಮಾಡುವುದೇಕೆ? ಸಂಬಂಧಗಳ ಮಾಯೆ ಬೀಸುವುದೇಕೆ? ಕೂಡುವ-ಅಗಲುವ ಈ ಸಂಕಟಗಳೇಕೆ?"

**ಶ್ರೀಕೃಷ್ಣ:** "ನನ್ನ ಸ್ವರೂಪವನ್ನೇ ಪ್ರಶ್ನಿಸಿದಂತಿದೆ, ಅಲ್ಲವೆ? ನನ್ನ ಸಂಕಲ್ಪವನ್ನು ಅರಿಯುವ ಕುತೂಹಲ ನಿನಗಿದ್ದಲ್ಲಿ, ನಾಳೆ ಬೆಳಿಗ್ಗೆ ಉದ್ಧವ ಬರುತ್ತಿದ್ದಾನೆ. ನಿನ್ನ ಇದೇ ಪ್ರಶ್ನೆಗಳನ್ನು ಅವನು ಬೇರೊಂದು ರೀತಿಯಲ್ಲಿ ಕೇಳಿದಾಗ, ಅಲ್ಲಿ ಉತ್ತರಿಸುತ್ತೇನೆ. ಪರಮ ಯೋಗಿಗಳಿಗೂ, ತತ್ತ್ವವಿದರಿಗೂ ಅರಿಯಲು ಕಷ್ಟವಾದ ಈ ವಿಷಯಗಳನ್ನು ಬೆಳಿಗ್ಗೆ ಕೇಳುವೆಯಂತೆ!"

ಎನ್ನುತ್ತಾ ಕೃಷ್ಣನು ಮೇಲೆದ್ದ. ರಾಣಿಯರೂ ಮೇಲೆದ್ದರು. ಹೊರಡುವಷ್ಟರಲ್ಲಿ ಶ್ರೀಕೃಷ್ಣ ರಾಣಿಯರಿಗೆ ಹೀಗೆಂದ:

"ನನ್ನ ಮಾತುಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ನಿಮಗೊಂದವಕಾಶವನ್ನು ಕೊಡುತ್ತೇನೆ. ನೀವೇ ದೃಢಮಾಡಿಕೊಳ್ಳಿ. ನಿಮ್ಮ ನಿಮ್ಮ ರಾಣೀವಾಸಗಳಿಗೆ ನಿಶ್ಚಿಂತೆಯಿಂದ ತೆರಳಿರಿ. ನಿಮ್ಮ ನಿಮ್ಮ ಪುತ್ರ ಪೌತ್ರರನ್ನು ಕರೆಸಿ 'ಈ ಪಿತೃದೂಷಣೆ ನಿಮಗೆ ಸಲ್ಲದು. ಅವರ ಹೃದಯವೇ ತಿಳಿಯದ ನೀವು ಹೀಗೆಲ್ಲ ಸಿಕ್ಕಂತೆ ಮಾತಾಡಬಾರದು. ಆಡಿದುದಕ್ಕೂ ಮಾಡಿದುದಕ್ಕೂ, ನಿಮ್ಮ ಹಿರಿಯ ಶ್ರೀಕೃಷ್ಣನ ಬಳಿ ಹೋಗಿ ಅಪರಾಧ ಕ್ಷಮಿಸುವಂತೆ ಪ್ರಾರ್ಥಿಸಿ. ನಿಮ್ಮ ಅವಿವೇಕದ ನಡತೆಗೆ ಪಶ್ಚಾತ್ತಾಪ ಪಡಿರಿ' ಎಂದು ಹೇಳಿ ಉಪದೇಶಿಸಿರಿ. ಅವರು ಹಾಗೆ ಮಾಡುವರಾದರೆ ನನ್ನ ಲೆಕ್ಕಾಚಾರ ತಪ್ಪೆಂದು ನಿರ್ಧರಿಸಿ ಮತ್ತೆ ನನ್ನ ಬಳಿ ಬನ್ನಿರಿ. ಇಲ್ಲವಾದರೆ...! ಏನೆನ್ನಲಿ."

*****

ರಾಣಿಯರ ಸಲಹೆಗೆ ಯಾವ ಯದು ಕುಮಾರನೂ ಒಪ್ಪಲಿಲ್ಲ! ಅಭಿಪ್ರಾಯ ಸ್ವಾತಂತ್ರ್ಯವು ತಮ್ಮ ಹಕ್ಕೆಂದೂ, ಅದರ ಅಭಿವ್ಯಕ್ತಿಯಿಂದ ರಾಷ್ಟ್ರಕ್ಕೆ ಉಳಿವೇ ಹೊರತು ಅಳಿವಿಲ್ಲವೆಂದೂ ವಾದಿಸಿದರು!! ಆ ಅಭಿಪ್ರಾಯಗಳು ಸರಿಯಾಗಿರಬೇಡವೇ? ಚಿಂತನೆಯಿಂದ ಸಮರ್ಥಿತವಾಗಿರಬೇಡವೇ? ಬರಿಯ ಅಭಿವ್ಯಕ್ತಿಯಿಂದ ಪ್ರಯೋಜನವೇನೆಂಬ ಪ್ರಶ್ನೆಗಳಿಗೆ ಯದುವೀರರಲ್ಲಿ ಉತ್ತರವಿರಲಿಲ್ಲ; ತಾಳ್ಮೆಯೂ ಇರಲಿಲ್ಲ. ರಾಣಿಯರು ನಿಟ್ಟುಸಿರಿಟ್ಟರು. ಪ್ರಾತಃಸೂರ್ಯ ಮೇಲೇರಿ ಪ್ರಖರವಾಗಲಾರಂಭಿಸಿದ್ದ.

*****

# ೫. ಉದ್ಧವ, ಅಕ್ರೂರರೊಡನೆ ಸಮಾಲೋಚನೆ

ಹದಿಮೂರೇ ದಿನಗಳ ಭಯಂಕರ ಪಕ್ಷವ್ಪೂ ಅದರ ಈ ತುದಿ ಆ ತುದಿಗಳಲ್ಲಿ ಚಂದ್ರಸೂರ್ಯ ಗ್ರಹಣಗಳೂ ಸಂಭವಿಸಿ, ಅವುಗಳ ಮಹಿಮೆಯನ್ನು ಕೇಳಿ ಯಾದವ ವೃದ್ಧರೂ, ಸ್ತ್ರೀಯರೂ, ಸಾಮಾನ್ಯ ಜನರೂ ತಲ್ಲಣಿಸಿಹೋದರು!

ಯಾದವ ವೀರರು "ಇದೆಲ್ಲ ಮೂಢ ನಂಬಿಕೆ!" ಎಂದು ಮೂಗು ಮುರಿದು, "ಎಲ್ಲೋ ಆಕಾಶದಲ್ಲಿ ಭೌತನಿಯಮಗಳಂತೆ ನಡೆಯುವ ಅನಿವಾರ್ಯ ವ್ಯಾಪಾರದ ನೆಪದಲ್ಲಿ ಈ ಬ್ರಾಹ್ಮಣರು ಜನರನ್ನು ಹೆದರಿಸಿ, ಶಾಂತಿ, ಪೂಜೆ, ಪೀಡಾ ಪರಿಹಾರಗಳ ನೆಪದಲ್ಲಿ ಜನಶೋಷಣೆ ಮಾಡಿ ಧನಿಕರಾಗಲು ಸಂಚು ಹೂಡಿದ್ದಾರೆ!" ಎಂದು ಬಹಿರಂಗವಾಗಿಯೇ ಬ್ರಾಹ್ಮಣರನ್ನು ಆಕ್ಷೇಪಿಸಲಾರಂಭಿಸಿದರು.

ಯಾದವ ಪುರೋಹಿತನಾಗಿದ್ದ ಗರ್ಗಾಚಾರ್ಯ, ಜ್ಯೋತಿಷ್ಯದಲ್ಲೂ ಪ್ರಚಂಡ ಪಂಡಿತನಾಗಿದ್ದ ಅವನ ಕಿವಿಗೂ ಈ ವಾರ್ತೆ ಬಿದ್ದಿತು! ಕ್ರುದ್ಧನಾಗಿ, ಈ ವಾರ್ತೆ ಎಲ್ಲಿಂದ ಬಂದಿತೆಂಬುದನ್ನು ಶೋಧಿಸುತ್ತಾ, ಅದರ ಮೂಲ ತಿಳಿದು ಕೃತವರ್ಮನ ಬಳಿ ಹೋಗಿ, ಸಮಾಧಾನಪೂರ್ವಕವಾಗಿಯೇ ಗ್ರಹಣಗಳ ಮತ್ತು ಆಕಾಶದಲ್ಲೂ ಭೂಮಿಯಲ್ಲೂ ನಡೆಯುತ್ತಿರುವ ಉತ್ಪಾತಗಳ ಅರ್ಥವನ್ನು ವೈಜ್ಞಾನಿಕವಾಗಿಯೇ ತಿಳಿಯಹೇಳಲು ಯತ್ನಿಸಿದ.

ಕುಡಿತದ ಅಮಲಿನಲ್ಲಿದ್ದ ಕೃತವರ್ಮ ಏನನ್ನೂ ಹೇಳಿ ಕೇಳುವ ಪರಿಸ್ಥಿತಿಯಲ್ಲಿರಲಿಲ್ಲ! ದ್ರೌಪದಿಯ ಮಕ್ಕಳನ್ನು ಅಶ್ವತ್ಥಾಮ ಕೊಂದಾಗಿನಿಂದ ಅವನ ನಡತೆಯೇ ಬದಲಾಗಿತ್ತು! ಕೃಷ್ಣದ್ವೇಷ, ಬ್ರಾಹ್ಮಣ ದ್ವೇಷಗಳು ಪ್ರಕಟವಾಗಿಯೇ ಅವನ ಮಾತುಗಳಲ್ಲಿ ಕಾಣಬರುತ್ತಿದ್ದವು. ಉಗ್ರಸೇನನ ನಂತರ ದ್ವಾರಕಾ ರಾಜ್ಯದ ಅಧಿಪತಿಯಾಗಲು ಪ್ರಬಲ ಹವಣಿಕೆಯಲ್ಲೂ ಇದ್ದ ಇವನ ಸುತ್ತ ಯಾದವ ಯುವಕರು ಬಹು ಸಂಖ್ಯೆಯಲ್ಲಿ ಆಕರ್ಷಿತರಾಗಿ ಬಂದು, ಅವನು ಹೇಳಿದಂತೆ ಕುಣಿಯಲಾರಂಭಿಸಿದ್ದರು! ಇದಕ್ಕೆ ಪ್ರತಿಸ್ಪರ್ಧಿ ಗುಂಪೊಂದನ್ನು ಸಾತ್ಯಕಿ ತನ್ನ ಸುತ್ತಲೂ ನಿರ್ಮಿಸಿಕೊಂಡಿದ್ದ. ಮಂತ್ರಿಯಾಗಿದ್ದ ಅಕ್ರೂರನನ್ನು ಇಬ್ಬರೂ ತಮ್ಮ ತಮ್ಮತ್ತ ಎಳೆದಾಡುವ ಸಂಚು ಹೂಡಿ ವಿಫಲರಾಗಿದ್ದರು. ಸ್ಯಮಂತಕ ಮಣಿಯು ಈ ಅಕ್ರೂರನ ಬಳಿಯೇ ಇದ್ದು ಅದು ರಾಷ್ಟ್ರದ ಅಭ್ಯುದಯ ಮಣಿಯಾಗಿದ್ದು, ಶ್ರೀಕೃಷ್ಣ, ಅದರ, ಅವನ, ರಕ್ಷಕನಾಗಿದ್ದ. ಶ್ರೀಕೃಷ್ಣನ ಭಯದಿಂದ ಅಕ್ರೂರನನ್ನು ಕೃತವರ್ಮ ಈವರೆಗೆ ಮುಟ್ಟಿರಲಿಲ್ಲ. ಅದಕ್ಕಾಗಿ ಪರೋಕ್ಷ ಸಂಚು ಹೂಡಿ, ಶ್ರೀಕೃಷ್ಣಪುತ್ರರಲ್ಲೇ ಹಲವರನ್ನು ಶ್ರೀಕೃಷ್ಣನ ಮೇಲೆ ಎತ್ತಿಕಟ್ಟಿ, ಪ್ರಬಲ ಅಪಪ್ರಚಾರವನ್ನೂ ಆರಂಭಿಸಿದ್ದ! ಅಪಪ್ರಚಾರ ತಡೆಯಲಾರದೆ ಶ್ರೀಕೃಷ್ಣ ದ್ವಾರಕೆಯನ್ನು ಶಾಶ್ವತವಾಗಿ ತ್ಯಜಿಸಲೆಂದೂ, ಅಕ್ರೂರನನ್ನೂ, ಉಗ್ರಸೇನನನ್ನೂ ಮುಗಿಸಿ ತಾನು ಅಧಿಕಾರಕ್ಕೆ ಬರಲು ಅದೇ ಸಂಧಿಯೆಂದೂ ಅವನ ಲೆಕ್ಕಾಚಾರವಾಗಿತ್ತು! ಗೂಢಚಾರರ ಮೂಲಕ ಇದನ್ನೆಲ್ಲ ಶ್ರೀಕೃಷ್ಣ ಅರಿತಾಗಿತ್ತು! "ತಾನೇ ಸಾಯುತ್ತಾನೆ! ನಾನೇಕೆ ಕೊಲ್ಲಲಿ?" ಎಂದೇ ಕೃಷ್ಣ ಅವನನ್ನುಪೇಕ್ಷಿಸಿದ್ದ. ಕೃಷ್ಣಶಿಷ್ಯನಾದ ಸಾತ್ಯಕಿಗೂ ಇದೆಲ್ಲ ಗೊತ್ತಾಗಿ,

ಕೃಷ್ಣದ್ವೇಷದಿಂದ ಅವನ ಮನಸ್ಸು ಕುದಿಯುತ್ತಿತ್ತು. ದ್ವೇಷಕ್ಕೆ ವೈಯಕ್ತಿಕ ಕಾರಣಗಳೂ ಸೇರಿಕೊಳ್ಳುತ್ತಾ, ಹೊರಬರಲಾರದ ಬೆಂಕಿಯ ಜ್ವಾಲಾಚಕ್ರದಲ್ಲಿ ಸಿಕ್ಕಿಕೊಂಡಂತೆ, ಸಾತ್ಯಕಿ ಒಳಗೊಳಗೇ ಬೇಯುತ್ತಿದ್ದ.

* * * *

ಸ್ಯಮಂತಕಮಣಿಯ ಹಿಂದೆ ಒಂದು ಪವಾಡದ ಕಥೆಯೂ, ಕೊಲೆಗಳ ಸರಮಾಲೆಯ ಕತೆಯೂ ಅಡಗಿತ್ತು! ಅದು ಹೀಗೆ.

ಎಷ್ಟೋ ವರ್ಷಗಳ ಹಿಂದಿನ ಮಾತು... ಸತ್ಯಭಾಮೆಯ ತಂದೆ ಸತ್ರಾಜಿತನ ಯೌವನ ಕಾಲ ಅದು. ಸೂರ್ಯೋಪಾಸಕನಾಗಿದ್ದ ಅವನಿಗೆ ಸೂರ್ಯನಾರಾಯಣ ಒಮ್ಮೆ ಒಲಿದು "ನಿನಗೆ ಏನು ಬೇಕು?" ಎಂದು ಕೇಳಿದ್ದ. "ನಿನ್ನ ನೈಜ, ಪೂರ್ಣ ಸ್ವರೂಪವನ್ನು ನಾನು ಹೊರಗಣ್ಣಿಂದ ಕಾಣಬೇಕು" ಎಂದು ಸತ್ರಾಜಿತ ಕೇಳಿದ್ದ! ಸೂರ್ಯ ಇದಕ್ಕೆ ಒಪ್ಪಿ, ತನ್ನ ಪ್ರಖರ ತೇಜೋ ರಾಶಿಗೆ ಕಾರಣವಾಗಿ, ಮನುಷ್ಯರು ತನ್ನನ್ನು ಕಣ್ಣಿಂದ ಕಾಣಲಾಗದಂತೆ ತನ್ನನ್ನು ಸುತ್ತುವರೆದಿದ್ದ ಆ ದಿವ್ಯಪ್ರಭೆಗೆ ಕಾರಣಭೂತವಾಗಿದ್ದ ಸ್ಯಮಂತಕ ಮಣಿಯನ್ನು ಕೊರಳಿಂದ ಹೊರತೆಗೆದು, ಕೆಳಗಿಟ್ಟು, ತನ್ನ ನೈಜರೂಪ ತೋರಿಸಿ, ಅವನನ್ನು ತೃಪ್ತಿ ಪಡಿಸಿದ.

ತೃಪ್ತನಾಗದೆ ನಿಂತಿದ್ದ ಸತ್ರಾಜಿತನನ್ನು ಸೂರ್ಯ "ಇನ್ನೇನು ಬೇಕು?" ಎಂದು ಕೇಳಿದಾಗ, ಸತ್ರಾಜಿತ "ಈ ಸ್ಯಮಂತಕವನ್ನೇ ನನಗೆ ಕೊಡು" ಎಂದು ಕೇಳಬೇಕೆ?

ಸೂರ್ಯ ಕೊಟ್ಟ! ಜೊತೆಗೆ ಹೇಳಿದ್ದ: "ಶುಚಿಯಾಗಿ, ಭಕ್ತಿಯಿಂದ ಪೂಜಿಸುತ್ತಾ ಇದನ್ನು ಕೊರಳಲ್ಲಿ ಧರಿಸಿದವನ ಭಾಗಕ್ಕೆ ಇದು ಎಂಟು ಭಾರದಷ್ಟು (ಅಂದರೆ ಸುಮಾರು ಐವತ್ತು ಮಣಗಳಷ್ಟು) ಬಂಗಾರವನ್ನು ದಿನದಿನವೂ ಅನುಗ್ರಹಿಸುತ್ತದೆ. ಇದಿದ್ದಲ್ಲಿ ರೋಗ, ಕ್ಷಾಮ, ಪೀಡೆಗಳು ಯಾವುವೂ ಇರುವುದಿಲ್ಲ. ಆದರೆ ಧರಿಸಿದವನು ಅಶುದ್ಧನೂ, ಆಚಾರಹೀನನೂ ಆದರೆ ಅವನ ಪ್ರಾಣವನ್ನೇ ಇದು ಬಲಿ ತೆಗೆದುಕೊಳ್ಳುತ್ತದೆ! ಎಚ್ಚರಿಕೆ!" ಎಂದು ಸೂರ್ಯ ಮಾಯವಾದ.

ಸತ್ರಾಜಿತ ಹಿಂದೆ ಮುಂದೆ ನೋಡದೆ, ಜಂಭದ ಕೋಳಿಯಂತೆ, ಕೂಡಲೇ ಅದನ್ನು ಕೊರಳಲ್ಲಿ ಧರಿಸಿ, ದ್ವಾರಕೆಯತ್ತ ಹೊರಟೇಬಿಟ್ಟ. ಊರಜನ ಅವನ ಆಗಿನ ಕಾಂತಿಯನ್ನು ಕಂಡು ಸೂರ್ಯನೇ ಊರತ್ತ ಬರುವನೆಂದು ಭ್ರಮಿಸಿ, ಶ್ರೀಕೃಷ್ಣನವರೆಗೂ ಈ ಸಮಾಚಾರ ಹೋಗಿತ್ತು. ಶ್ರೀಕೃಷ್ಣ ಅವರ ಭ್ರಮೆಯನ್ನು ನೀಗಿ ಸ್ಯಮಂತಕದ ಹಿರಿಮೆಯನ್ನು ಅವರಿಗೆ ತಿಳಿಸಿದ. ಜಿಪುಣನಾದ ಸತ್ರಾಜಿತ ಆ ಮಣಿಯಿಂದ ರಾಷ್ಟ್ರಕ್ಷೇಮದ ವಿಶಾಲ ದೃಷ್ಟಿಯನ್ನು ತಳೆಯದೆ ತನ್ನಲ್ಲೇ ಇಟ್ಟುಕೊಂಡ. ಅಂದೇ ಶ್ರೀಕೃಷ್ಣ ಉಪಾಯ ಹೂಡಿದ್ದರೆ ಉಗ್ರಸೇನನ ಬಳಿ ಅದು ಸೇರಿ, ಯಾದವರ ಚರಿತ್ರೆಯೂ ಬದಲಾಗಿ, ಕೃಷ್ಣನ ಬಗೆಗೆ ಮಿಥ್ಯಾರೋಪದ ಸಂಭವವೂ ಇಲ್ಲವಾಗುತ್ತಿತ್ತು. ಕೃಷ್ಣ ಅದಕ್ಕೊಂದು ಕಾಲ ಕಾಯ್ದ!

ಸತ್ರಾಜಿತ ಕೊರಳಲ್ಲಿ ಮಣಿ ಧರಿಸಿದಾಗೆಲ್ಲ ಶ್ರೀಕೃಷ್ಣ ಅದನ್ನು ನೋಡುವ ರೀತಿಯಿಂದ ಸತ್ರಾಜಿತನಿಗೆ ಭಯವಾಯಿತು! ಶ್ರೀಕೃಷ್ಣನಿಗೆ ಅದರ ಮೇಲೆ ಆಸೆಯಾಗಿದೆ ಎಂದು ಭ್ರಮಿಸಿದ! ಎಲ್ಲಿ 'ಕೊಡು' ಎಂದು ಕೇಳಿ ಬಿಡುತ್ತಾನೋ! ಎಂಬ ಭಯದಿಂದ, ತನ್ನ ತಮ್ಮ ಪ್ರಸೇನಜಿತನ ಕೊರಳಿಗೆ ಆ ಮಣಿಯನ್ನು ಹಾರದಲ್ಲಿ ಹಾಕಿದ. ಪ್ರಸೇನ ಶುಚಿಯಾಗಿರಲಿಲ್ಲ! ಅದರೊಡನೆಯೇ ಒಂದು ದಿನ ಬೇಟೆಗೆಂದು ಹೊರಟ. ಒಂದು ಸಿಂಹ ಅವನನ್ನು ಕೊಂದು ಹಾಕಿ, ಆ ಮಣಿಯನ್ನು ಬಾಯಲ್ಲಿ ಕಚ್ಚಿಕೊಂಡುಹೋಯಿತು.

ಜಾಂಬವಂತನು ಆ ಸಿಂಹವನ್ನು ಕೊಂದು, ತನ್ನ ಗವಿಗೆ ಆ ಮಣಿಯನ್ನೊಯ್ದು ಸುಕುಮಾರನೆಂಬ ತನ್ನ ಪುತ್ರನಿಗೆ ಆಟದ ಸಾಮಾನನ್ನಾಗಿ ಅದನ್ನು ಕೊಟ್ಟ.

ಬೇಟೆಯಿಂದ ಪ್ರಸೇನಜಿತ್ ಹಿಂದಿರುಗಲೇ ಇಲ್ಲ! ಕೃಷ್ಣನೇ ಅವನನ್ನು ಕೊಂದು ಮಣಿಯನ್ನು ಅಪಹರಿಸಿದನೆಂದು ಸತ್ರಾಜಿತ ಆರೋಪ ಮಾಡಿದ! ಯಾದವರು ಅದನ್ನು ನಂಬಿದರು!!

ತನ್ನ ಮೇಲಿನ ಸುಳ್ಳು ಆರೋಪದ ನಿವಾರಣೆಗೆ ಶ್ರೀಕೃಷ್ಣ ಪ್ರಸೇನನ ದಾರಿ ಹಿಡಿದು ಹೊರಟ. ಅವನ ಹೆಣ ಸಿಕ್ಕಿತು! ಸಿಂಹದ ಹೆಜ್ಜೆಯ ಗುರುತನ್ನು ಹಿಂಬಾಲಿಸಿ, ಅದರ ಹೆಣವನ್ನೂ ಕಂಡ ಕೃಷ್ಣ, ಮುಂದಿನ ಹೆಜ್ಜೆಗಳನ್ನನುಸರಿಸಿ ಜಾಂಬವಂತನ ಗುಹೆಗೆ ಹೊಕ್ಕ! ಮಣಿಯನ್ನು ತೊಟ್ಟಿಲ ಮಗುವಿನ ಬಳಿ ಕಂಡು ಆಶ್ಚರ್ಯಪಟ್ಟ! ಜಾಂಬವಂತ ಬಂದು ನೋಡಿ, ಇವನಾರೆಂದು ಅರಿಯದೆ, ಶ್ರೀ ಕೃಷ್ಣನೊಡನೆ ಹೋರಾಡಿದ, ಇಪ್ಪತ್ತೊಂದು ದಿನ ಕಾಲ. ಶ್ರೀಕೃಷ್ಣನ ಸೈನ್ಯ ಗುಹಾದ್ವಾರದಿಂದ ಹಿಂದಿರುಗಿ "ಶ್ರೀಕೃಷ್ಣ ಸತ್ತ"ನೆಂದು ವರದಿ ಮಾಡಿತು! ಯಾದವರು ಅವನಿಗೆ ಶ್ರಾದ್ಧವನ್ನೂ ಮಾಡಿ ಮುಗಿಸಿದರು! ಬದುಕಿದ್ದ ಶ್ರೀಕೃಷ್ಣನಿಗೆ ಅದರಿಂದ ಬಲವೃದ್ಧಿಯೇ ಆಯ್ತು! ಜಾಂಬವಂತ ಸೋತ! ತನ್ನ ಆರಾಧ್ಯದೈವ, ಶ್ರೀರಾಮನ ಇನ್ನೊಂದವತಾರವೇ ಶ್ರೀಕೃಷ್ಣ ಎಂದರಿತು ಅಪರಾಧಕ್ಕೆ ಪ್ರಾಯಶ್ಚಿತ್ತವಾಗಿ ಮಣಿಯನ್ನೂ, ಪುತ್ರಿ ಜಾಂಬವತಿಯನ್ನೂ ಅವನಿಗಿತ್ತು ವಿವಾಹ ಮಾಡಿಕೊಟ್ಟ. ಕೃಷ್ಣನಿಗೆ ಮಣಿ ಬೇಡವಾಗಿದ್ದರೂ, ಅಪವಾದ ತೊಳೆದುಕೊಳ್ಳಲು ಸಾಕ್ಷ್ಯವಾಗಿ ಪರಿಗ್ರಹಿಸಿ ಊರಿಗೆ ಬಂದ! ನಡೆದುದನ್ನು ಹೇಳಿದ. ಸತ್ರಾಜಿತನಿಗೆ ಪಶ್ಚಾತ್ತಾಪವಾಯ್ತು. ಪ್ರಾಯಶ್ಚಿತ್ತವಾಗಿ ತನ್ನ ಮಗಳು ಸತ್ಯಭಾಮೆಯನ್ನು ಶ್ರೀಕೃಷ್ಣನಿಗೆ ಕೊಟ್ಟು ವಿವಾಹ ಮಾಡಿದ! ಆದರೆ ಮಣಿಯನ್ನು ತಾನೇ ಇಟ್ಟುಕೊಂಡ!

ಆಶ್ಚರ್ಯ ಕೇಳಿ!! ಈ ಸತ್ಯಭಾಮೆಯನ್ನು ಅಕ್ರೂರನೂ ಪ್ರೀತಿಸಿದ್ದ!!! ಅತ್ತ ಕೃತವರ್ಮನಿಗೂ ಅವಳಲ್ಲಿ ಅಭಿಲಾಷೆಯಿತ್ತು! ಶತಧನ್ವನೆಂಬ ಇನ್ನೊಬ್ಬ ಯಾದವ ವೀರನೂ ಅವಳಿಗೆ ಆಸೆ ಪಟ್ಟಿದ್ದ.

ಅಕ್ರೂರ ಒಂದು ಬಗೆಯಲ್ಲಿ ಭ್ರಮನಿರಸನ ಹೊಂದಿದರೂ ಕೃತವರ್ಮನಿಗೂ ಶತಧನ್ವನಿಗೂ ಶ್ರೀಕೃಷ್ಣನ ವಿಷಯದಲ್ಲಿ ಕೋಪಾಸೂಯೆಗಳುಂಟಾದವು. ಸೇಡಿಗಾಗಿ ಸಂಚು ಹೂಡಿದರು. ಸಮಯ ಕಾಯುತ್ತಿದ್ದರು.

ಅದು ಹೀಗೆ ಬಂದಿತು. ಪಾಂಡವರು ಅರಗಿನ ಮನೆಯಲ್ಲಿ ಸುಟ್ಟು ಹೋದರೆಂಬ ವಾರ್ತೆಯನ್ನು ಕೇಳಿ ಶ್ರೀಕೃಷ್ಣ, ಅದನ್ನು ನಂಬದೆ, ಅಜ್ಞಾತರಾಗಿದ್ದ ಅವರನ್ನು ಸಂರಕ್ಷಿಸಿ, ದುರ್ಯೋಧನನ ಕುತಂತ್ರಗಳನ್ನು ಬಯಲು ಮಾಡಿ, ಹುಸಿ ಮಾಡಲು ಹಸ್ತಿನಾವತಿಯತ್ತ ಧಾವಿಸಿದಾಗ ಕೃತವರ್ಮನಿಗೆ ಆ ಅವಕಾಶ ಬಂತು! ಶತಧನ್ವನನ್ನು ಪುಸಲಾಯಿಸಿ: "ಈಗ ಈ ದುರಾತ್ಮನಾದ ಸತ್ರಾಜಿತನನ್ನು ಕೊಂದು ಹಾಕಿಬಿಡೋಣ" ಎಂದು ಹೇಳಲು, ಶತಧನ್ವನು, ರಾತ್ರಿ ಮಲಗಿದ್ದ ಸತ್ರಾಜಿತನನ್ನು ಕೊಂದು, ಮಣಿಯನ್ನು ಕದ್ದು, ಕೃತವರ್ಮನಿಗೂ ತೋರಿಸದೆ ಓಡಿಹೋದ!

ಅಶುದ್ಧವಾಗಿದ್ದ ಅವನ ಪ್ರಾಣವನ್ನು ಆ ಮಣಿ ತೆಗೆದುಕೊಂಡದ್ದು ಹೀಗೆ: ಇತ್ತ ತಂದೆ ಸತ್ತ ರೀತಿಯಿಂದ ಸತ್ಯಭಾಮೆಗೆ ದುಃಖ ಕೋಪಗಳುಂಟಾಗುತ್ತವೆ. ಹಸ್ತಿನಾವತಿಯಿಂದ ಮರಳಿದ ಶ್ರೀಕೃಷ್ಣನಿಗೆ ಅದನ್ನು ಹೇಳುತ್ತಾಳೆ. ಶ್ರೀಕೃಷ್ಣ, ಬಲರಾಮನನ್ನು ಕರೆದು ಈಗ ಮಣಿಯು ತಮ್ಮಿಬ್ಬರಿಗೂ ಸೇರಿದ್ದೆಂದು ಹೇಳಿ, ಆ ಶತಧನ್ವನನ್ನು ಬೆನ್ನಟ್ಟಿ ರಾಮಕೃಷ್ಣರಿಬ್ಬರೂ ಹೊರಡುತ್ತಾರೆ

ಇದನ್ನು ಕೇಳಿದ ಶತಧನ್ವ, ತನ್ನ ಕೃತ್ಯಕ್ಕೆ ಪ್ರೇರಕನಾದ ಕೃತವರ್ಮನನ್ನು ಸ್ವಾಭಾವಿಕವಾಗಿಯೇ ಸಹಾಯ ಬೇಡುತ್ತಾನೆ.

ದುರುಳನಾದ ಕೃತವರ್ಮ ಆಗ ಅವನ ಕೈಬಿಟ್ಟು ಪ್ರಬಲರಾದ ರಾಮಕೃಷ್ಣರಲ್ಲಿ ತನಗೆ ದ್ವೇಷ ಸಲ್ಲದೆಂದು ವಂದಿಸಿ, ಹಿಂಜರಿಯುತ್ತಾನೆ.

ತನಗೆ ಬದಲು ಅಕ್ರೂರನನ್ನು ಕುರಿತು "ನೀನು ಬಲರಾಮನೊಡನೆ ಯುದ್ಧಮಾಡಿ ಶತಧನ್ವನಿಗೆ ಸಹಾಯ ಮಾಡು" ಎಂದು ಕೇಳುತ್ತಾನೆ. ಜ್ಞಾನಿಯಾದ ಅಕ್ರೂರ ಅದನ್ನು ನಿರಾಕರಿಸಿ, ತಾನು ಕೃಷ್ಣಭಕ್ತನೆಂದು ಹೇಳಿಕೊಳ್ಳುತ್ತಾನೆ.

ಶತಧನ್ವ ವಿಧಿಯಿಲ್ಲದೆ: "ಹಾಗಾದರೆ ಈ ಸ್ಯಮಂತಕವನ್ನಾದರೂ ಗೋಪ್ಯವಾಗಿ, ನಾನು ಬರುವ ತನಕ, ನಿನ್ನಲ್ಲಿರಿಸಿಕೊಂಡಿರು" ಎಂದು ಹೇಳಿ, ಅವನ ಕೈಲಿ ಮಣಿಯನ್ನು ಕೊಟ್ಟು ಓಡಿ ಹೋಗುತ್ತಾನೆ.

ಶತಧನ್ವ ಮಿಥಿಲಾಪುರಿಯ ಬಳಿ ಶ್ರೀಕೃಷ್ಣನಿಗೆ ಸಿಕ್ಕು, ಚಕ್ರಪ್ರಯೋಗದಿಂದ ಸಾಯುತ್ತಾನೆ. ಮಣಿ ಮಾತ್ರ ಸಿಗದೆ, ಬಲರಾಮನಿಗೆ ಅನುಮಾನವಾಗಿ, ಶ್ರೀಕೃಷ್ಣ ಮೋಸದಿಂದ ಅದನ್ನಪಹರಿಸಿರಬೇಕೆಂಬ ಶಂಕೆಯಿಂದ, ಊರಿಗೂ ಬರದೆ, ಕೃಷ್ಣನನ್ನು ತೊರೆದು ಮೂರು ವರ್ಷಕಾಲ ಜನಕನ ಊರಿನಲ್ಲೇ ಇರುತ್ತಾನೆ! ದುರ್ಯೋಧನ ಅವನ ಬಳಿ ಗದಾಯುದ್ಧವಿದ್ಯೆ ಕಲಿತದ್ದು ಅಲ್ಲೇ. ಆಮೇಲೆ ಉಗ್ರಸೇನ ಪರಿವಾರದೊಡನೆ ಮಿಥಿಲೆಗೆ ಬಂದು, ಬಲರಾಮನಿಗೆ ಬುದ್ಧಿ ಹೇಳಿ, ಶ್ರೀಕೃಷ್ಣ ನಿರಪರಾಧಿ ಎಂದೂ, ಮಣಿಯು ಎಲ್ಲೂ ಸಿಗಲಿಲ್ಲವೆಂದೂ ಹೇಳಿದ ಮೇಲೆ, ಶಾಂತನಾಗಿ ಬಲಭದ್ರ ದ್ವಾರಕೆಗೆ ಮರಳುತ್ತಾನೆ.

ಇತ್ತ ಅಕ್ರೂರನ ಬಳಿ ಗುಪ್ತವಾಗಿದ್ದ ಸ್ಯಮಂತಕದ ಪ್ರಭಾವದಿಂದ ರಾಜ್ಯ ಸುಭಿಕ್ಷವಾಗಿರುತ್ತದೆ. ಅವನೂ ಬಂಗಾರದಿಂದ ಸಮೃದ್ಧನಾಗಿ ಅನೇಕ ಯಜ್ಞಯಾಗಗಳನ್ನು ನಡೆಸುತ್ತಾನೆ.

ಕಾಲ ಕಳೆಯಿತು. ಅಕ್ರೂರನ ಕಡೆಯ ಭೋಜವೀರರು ಸಾತ್ವತನ ಮೊಮ್ಮಗನಾಗಿದ್ದ ಶತ್ರುಘ್ನನನ್ನು ಒಂದು ಕಾರಣಕ್ಕಾಗಿ ಕೊಂದು ಹಾಕಿದಾಗ, ಅಕ್ರೂರ ದ್ವಾರಕೆಯನ್ನೇ ತೊರೆದು ಹೋಗುತ್ತಾನೆ. ದ್ವಾರಕೆಯಲ್ಲಿ ಕ್ಷಾಮ ರೋಗ ಅಡರುತ್ತವೆ. ದುರ್ಭಿಕ್ಷ ತಾಂಡವವಾಡುತ್ತದೆ! ಯಾದವರು ಮಂತ್ರಾಲೋಚನೆ ಮಾಡಿ ಮಣಿಯು ಅಕ್ರೂರನಲ್ಲಿರಬಹುದಾದ ಸಂಭವವನ್ನು ಊಹಿಸುತ್ತಾರೆ. ಶ್ರೀಕೃಷ್ಣ ಅಕ್ರೂರನನ್ನು ಪತ್ತೆ ಮಾಡಿ, ಅಭಯವಿತ್ತು, ಊರಿಗೆ ಕರೆತಂದು, ಮಣಿಯನ್ನು ತೋರಿಸುವಂತೆ ಪ್ರಾರ್ಥಿಸುತ್ತಾನೆ. ಊರೂ ಸುಭಿಕ್ಷವಾಗುತ್ತದೆ. ಅಕ್ರೂರ ಹಿಂದೆ ಮುಂದೆ ನೋಡಲು ಶ್ರೀಕೃಷ್ಣ: "ಮಣಿ ನಿನ್ನಲ್ಲಿಯೇ ಇರಲಿ! ರಾಜ್ಯಕ್ಕೆ ಕ್ಷೇಮವಾದರೆ ಸಾಕು! ಆದರೆ ನನ್ನಣ್ಣ ಬಲಭದ್ರ ನನ್ನನ್ನು ಶಂಕಿಸಿದ್ದಾನೆ. ಅದರ ಪರಿಹಾರಕ್ಕಾಗಿ, ಅದು ನಿನ್ನಲ್ಲಿದೆಯೆಂದು ತೋರಿಸಿದರೆ ಸಾಕು" ಎನ್ನುತ್ತಾನೆ.

ಅಕ್ರೂರನಿಗೆ ಜ್ಞಾನೋದಯವಾಗಿ ಕೃಷ್ಣನಿಗೇ ಅದನ್ನು ಕೊಡಲು ಬಂದಾಗ, ಕೃಷ್ಣ, ಮುಂದೆ ಬರುವ ಜಗಳವನ್ನು ಕುರಿತು ಚಿಂತಿಸುತ್ತಾನೆ. ಬಲಭದ್ರನಿಗೆ ಭಾಗ ಕೊಡುವುದಾದರೆ ಮಣಿಯನ್ನು ಒಡೆಯಬೇಕು! ಆದರೆ ನ್ಯಾಯವಾಗಿ ಅದು ಸತ್ಯಭಾಮೆಗೆ ಸಲ್ಲಬೇಕು. ಹಾಗೆ ಸಂದರೆ ಅದು ಕೃಷ್ಣನಿಗೇ ಸೇರಿ, ಮತ್ತೆ ಬಲರಾಮನಿಗೆ ಕೋಪ ಬರುವುದು! ಇದಕ್ಕೆ ಉಪಾಯ ಚಿಂತಿಸಿ, ಕೃಷ್ಣ ಹೇಳುತ್ತಾನೆ:

"ಅಕ್ರೂರ! ನಾನಂತೂ ಅಶುದ್ಧ! ದುರಾಚಾರೀ!! ನನಗೆ ಬಹುಪತ್ನಿಯರು!! ಆದ್ದರಿಂದ ಮಣಿಯನ್ನು ಧರಿಸಲು ಯೋಗ್ಯನಲ್ಲ! ಬಲರಾಮನೂ ಮದ್ಯಪಾನದ ಚಟ ಹಿಡಿದವನು. ಅವನಿಗೂ ಇದು ಬೇಡ. ನನ್ನ ಪತ್ನಿಯಾದ ಸತ್ಯಭಾಮೆಗೆ ನನ್ನ ದೋಷಗಳಲ್ಲಿ ಭಾಗಿತ್ವ ಉಂಟು. ಈ ಮೂವರಿಗೂ ಅದು ಬೇಡ. ನಿನ್ನಲ್ಲಿಯೇ ಅದು ಇರಲಿ" ಎಂದು.

ಅಕ್ರೂರ ಅನಂತರ ಬಹಿರಂಗವಾಗಿಯೇ ಮಣಿಯನ್ನು ಧರಿಸಲಾರಂಭಿಸಿದ್ದ!

* * * *

ಈ ಕತೆಯನ್ನೆಲ್ಲ ಅಂದು ಶ್ರೀಕೃಷ್ಣ ನೆನೆದ. ಕೃತವರ್ಮನಿಗೆ ಸ್ಯಮಂತಕದ ವ್ಯಾಮೋಹ ಹೋಗಿರಲಿಲ್ಲ! ಮಹಾಭಾರತ ಯುದ್ಧದಲ್ಲಿ ಕೌರವರ ಕಡೆ ಸೇರಿ ಯುದ್ಧ ಮಾಡಿದ್ದರಿಂದ ಅವನಿಗಾವ ಲಾಭವೂ ಆಗಿರಲಿಲ್ಲ! ಪಾಂಡವರೇ ಸೋತು, ಸತ್ತು, ದುರ್ಯೋಧನ ವಿಜಯಿಯಾಗಿ, ತನ್ನನ್ನೇ ದ್ವಾರಕೆಗೆ ಅಧಿಪತಿಯನ್ನಾಗಿ ನಿಯಮಿಸುವನೆಂದೂ, ಮುಂದೆ ತನ್ನ ಸೈನ್ಯ ಪ್ರಬಲವಾಗಿ, ತನ್ನ ಮಿತ್ರರು ಸಹಾಯ ಮಾಡಿ, ತಾನು ಹಸ್ತಿನಾವತಿಯನ್ನೇ ಹಿಡಿದು, ಆ ಅವಿವೇಕೀ ದುರ್ಯೋಧನನನ್ನು ಮುಗಿಸಿ ಚಕ್ರೇಶ್ವರನಾಗಬಹುದೆಂದೂ ಕನಸು ಕಾಣುತ್ತಿದ್ದ.

ಆ ಕನಸನ್ನೆಲ್ಲ ನುಚ್ಚುನೂರು ಮಾಡಿದ್ದವನು ಶ್ರೀಕೃಷ್ಣ! ಕೃತವರ್ಮ ಕುದಿಯಲಾರಂಭಿಸಿದ್ದ!! ಅತ್ತ ಸತ್ಯಭಾಮೆಯೂ ಕೃಷ್ಣನ ಪಾಲೇ ಆಗಿದ್ದಳು! ಮಣಿಯೂ ಸಿಗಲಿಲ್ಲ! ಸಿಕ್ಕಿದ್ದರೆ ಎಷ್ಟೊಂದು ಮಣ ಬಂಗಾರದಿಂದ ಎಂಥ ಸೈನ್ಯ ಕಟ್ಟಬಹುದಿತ್ತು! ಸತ್ರಾಜಿತನನ್ನು ಕೊಲ್ಲಿಸಿದ್ದೂ ವ್ಯರ್ಥವಾಗಿತ್ತು! ಅವನು ಹುರಿದುಂಬಿಸಿದ್ದ ಶತಧನ್ವನೂ ಮಣ್ಣುಮುಕ್ಕಿ ಸತ್ತಿದ್ದ! ಕೃಷ್ಣನ ಮಾಯೆಗಳಿಗೆ, ತಂತ್ರಗಳಿಗೆ

ಕೊನೆಯೇ ಇಲ್ಲವೇ? ಎಷ್ಟು ದಿನ, ಭಯದಿಂದ ಅವನ ಕೃಪಾ ಛತ್ರಿಯಡಿ ಇರಲು ಶಕ್ಯ? ತನಗೂ ವಯಸ್ಸಾಯಿತು! ಕೃಷ್ಣನಿಗೂ ಆಯುಷ್ಯ ಮುಗಿಯಲಿಲ್ಲ!

ಇತ್ತ ಶ್ರೀಕೃಷ್ಣನೂ ಚಿಂತಿಸಿದ: ಕೃತವರ್ಮನ ದಿಗ್ದರ್ಶನದಲ್ಲಿ ತಾನು ನಾರಾಯಣ ಸೇನೆಯನ್ನು ಕೌರವರತ್ತ, ಮಹಾಭಾರತ ಯುದ್ಧದಲ್ಲಿ ನಿಲ್ಲಿಸಿದ್ದು ಬಹುಪಾಲು ತನ್ನಣಿಕೆಯಂತೆ ದುಷ್ಟರೆಲ್ಲ ಹತರಾದರೂ, ಕೃತವರ್ಮ ಉಳಿದೇಬಿಟ್ಟ! ತಿದ್ದಿಕೊಳ್ಳಲೂ ಇಲ್ಲ!! ಮುದಿಯಾದ ಹುಣಸೇಮರದಲ್ಲಿ ಹುಳಿ ವೃದ್ಧಿಯಾಗುವಂತೆಯೇ ಅವನ ದೌಷ್ಟ್ಯ ಬೆಳೆದು ಸಮೃದ್ಧಿಯಾಗಿತ್ತು.

ಶ್ರೀಕೃಷ್ಣ ಏನನ್ನೋ ನಿಶ್ಚಯಿಸಿ ಉಗ್ರಸೇನ ದೊರೆಯ ಅರಮನೆಗೆ ನಡೆದ. ದೊರೆ ಪ್ರಾತರಾಹ್ನಿಕ ಮುಗಿಸಿ, ಓಲಗಕ್ಕೆ ಸಿದ್ಧವಾಗುತ್ತಿದ್ದ. ಶ್ರೀಕೃಷ್ಣ ಕೊಂಚ ಹೊತ್ತು ಅವನೊಡನೆ ಏಕಾಂತದಲ್ಲಿ ಮಾತಾಡಿ ಹೊರಟುಹೋದ.

ಓಲಗದಲ್ಲಿ ಅಂದು ಉಗ್ರಸೇನ ಒಂದು ಆಜ್ಞೆ ಹೊರಡಿಸಿದ. ಅಂದಿನಿಂದ ಯಾದವ ರಾಜ್ಯದಲ್ಲಿ, ದ್ವಾರಕೆಯಲ್ಲಿ ಮದ್ಯಪಾನವನ್ನು ಪೂರ್ಣವಾಗಿ ನಿಷೇಧಿಸಿ ಆಜ್ಞೆ ಹೊರಡಿಸಿದ! ಉಲ್ಲಂಘಿಸಿದವರನ್ನು, ಎಷ್ಟೇ ಪ್ರಭಾವಶಾಲಿಗಳು ಅವರಾಗಿದ್ದರೂ, ಉಗ್ರವಾಗಿ ದಂಡಿಸುವುದಾಗಿ ಘೋಷಿಸಿದ. ಎರಡನೆಯದಾಗಿ, ಮುಂದಿನ ಹುಣ್ಣಿಮೆಯಂದು ಸಮಸ್ತ ಯಾದವರೂ ಪ್ರಭಾಸಕ್ಷೇತ್ರಕ್ಕೆ ತೀರ್ಥಯಾತ್ರೆಗಾಗಿ ಹೋಗಿ ಬಂದು, ಅಲ್ಲಿ ಪಿತೃಪೂಜೆ, ದೇವಪೂಜೆ, ಬ್ರಾಹ್ಮಣ ಭೋಜನಗಳನ್ನು ಮಾಡಿಸಿ, ಮುನಿಗಳ ಶಾಪ ಪರಿಹಾರವನ್ನು ಮಾಡಿಕೊಳ್ಳಬೇಕೆಂದೂ, ಊರಲ್ಲಿಯೇ ಉಳಿದವರನ್ನು ಶಿರಚ್ಛೇದ ಮಾಡಿ ಕೊಲ್ಲುವುದಾಗಿಯೂ ಘೋಷಣೆ ಮಾಡಿಸಿದ.

"ಅಂತೂ ಒಡೆಯರು ಮುನಿಶಾಪ ನಿವಾರಣೆಗೆ ದಾರಿ ಹುಡುಕಿದ್ದಾರೆ!" ಎಂದು ಶ್ರೀಕೃಷ್ಣ ಪತ್ನಿಯರು ಭ್ರಮಿಸಿ ಹಿಗ್ಗಿದರು.

ಪ್ರಭಾಸ ಅನಾದಿ ಪಾವನಕ್ಷೇತ್ರ. ಹಿಂದೆ ದಕ್ಷ ಪ್ರಜಾಪತಿಯ ಶಾಪದಿಂದ ಕ್ಷಯರೋಗಕ್ಕೆ ತುತ್ತಾಗಿದ್ದ ಸೋಮ (ಚಂದ್ರ)ನು ತಪಸ್ಸು ಮಾಡಿ ಶಾಪವಿಮುಕ್ತನಾಗಿದ್ದ ಕ್ಷೇತ್ರ ಅದು. ಅಲ್ಲಿ ಯಾವ ಶಾಪ ತಾನೇ ಮೋಚನವಾಗಲಾರದು? ಸರಸ್ವತಿಯು ಅಲ್ಲಿ ಪಶ್ಚಿಮವಾಹಿನಿ, ಬೇರೆ! ಉಗ್ರಸೇನನ ಆಜ್ಞೆಯ ಹಿಂದೆ ಶ್ರೀಕೃಷ್ಣನ ಆಶೀರ್ವಾದವಿರಲೇಬೇಕೆಂದರಿತ ಸಾತ್ವತ ಕುಲದ ಹಿರಿಯರು, ವೃಷ್ಣಿವೃದ್ಧರು, ಹಿರಿಯರು, ಸ್ತ್ರೀಯರು, ಕೃಷ್ಣಪತ್ನಿಯರು ಒಂದು ಬಗೆಯಲ್ಲಿ ಶಾಂತಿಯ ನಿಟ್ಟುಸಿರಿಟ್ಟರೆ, ಕೃತವರ್ಮಾದಿ ಮಹತ್ವಾಕಾಂಕ್ಷೆಯ ಯದುವೀರರಿಗೆ, ಇದರಲ್ಲೂ ಶ್ರೀಕೃಷ್ಣನ ಸಂಚು ಏನೋ ಇರಬೇಕೆಂಬ ಸಂದೇಹ ಮೂಡಿತು!

* * * *

ಶ್ರೀಕೃಷ್ಣನ ಗೂಢಚಾರ ಅಕ್ರೂರನನ್ನು ರಹಸ್ಯದಲ್ಲಿ ಕಂಡು, "ಶ್ರೀಕೃಷ್ಣ ಪ್ರಭುಗಳು ತಮ್ಮನ್ನು ಇಂದೇ ರಾತ್ರಿ ರಹಸ್ಯದಲ್ಲಿ ಕಾಣುವಂತೆ ಅಪ್ಪಣೆ ಮಾಡಿದ್ದಾರೆ" ಎಂದುಸುರಿದ.

ನಡುರಾತ್ರಿಯಲ್ಲಿ ಅಕ್ರೂರ ಶ್ರೀಕೃಷ್ಣನನ್ನು ಏಕಾಂತದಲ್ಲಿ ಕಂಡ. ರತ್ನದೀಪಗಳು ಕೊಠಡಿಯ ಮೂಲೆ ಮೂಲೆಗಳಲ್ಲಿ ಝಗಝಗಿಸುತ್ತಾ ಕಾಂತಿಯನ್ನು ಮಂದವಾಗಿ ಪಸರಿಸಿದ್ದವು. ರಾಣಿಯರು ನಿದ್ರೆಗೆ, ಅವರವರ ಭವನಗಳಲ್ಲಿ ಹೋಗಿ ಆಗಿತ್ತು. ಬಹುದಿನ ಬಾರದ ವಿಲಕ್ಷಣ ನಿದ್ರೆಯೊಂದು ಅವರನ್ನು ಅಂದು ಆವರಿಸಿತ್ತು!....

ಸುಖಾಸನದಲ್ಲಿ ಅಕ್ರೂರ ಕುಳಿತ. ಶ್ರೀಕೃಷ್ಣ ಅವನ ಬಳಿ ಕುಳಿತು ಕುಶಲ ಪ್ರಶ್ನೆ ವಿಚಾರಿಸಿದ ನಂತರ ಮಾತು ಮುನಿಶಾಪದ ಪರಾಮರ್ಶೆಯತ್ತ ಹೊರಳಿತು. ಅಕ್ರೂರ ತುಂಬ ವ್ಯಗ್ರಮನಸ್ಕನಾಗಿದ್ದ. ಶ್ರೀಕೃಷ್ಣ ಹೇಳಿದ.

ಶ್ರೀಕೃಷ್ಣ: "ಮಿತ್ರ! ಈ ಸ್ಯಮಂತಕಮಣಿ ಯಾದವರಿಗೆ ಒಳ್ಳೆಯದನ್ನು ಏನೂ ಮಾಡಲಿಲ್ಲ!"

ಅಕ್ರೂರ: (ಆ ಮಾತುಗಳ ಅರ್ಥ ತಿಳಿಯಲಾರದೆ, ಪೇಚಾಡುತ್ತಾ), "ಪ್ರಭು! ಅವರ ಪಾಡಿಗೆ ಅದು ಮಣಗಟ್ಟಳೆ ಬಂಗಾರವನ್ನು ಕೊಡುತ್ತಲೇ ಇದೆಯಲ್ಲ! ನೀನೆಂದಂತೆ ನಾನೇ ಅದನ್ನು ಧರಿಸುತ್ತಿದ್ದೇನೆ. ದ್ವಾರಕೆ ಸರ್ವಸಂಪತ್ ಸಮೃದ್ಧವಾಗೇ ಇದೆ! ಶತ್ರು ಭೀತಿಯೂ ಇಲ್ಲ. ಮಣಿ ಇನ್ನೇನು ಮಾಡಬಹುದು?"

ಶ್ರೀಕೃಷ್ಣ: "ಅದನ್ನೆಲ್ಲ ಮಾಡಿಯೇ, ಮಣಿ, ಯಾದವರನ್ನು ಹಾಳು ಮಾಡಿತು! ದುಡಿಯದೆ ಬಂದ ಬಂಗಾರ, ಬಂಗಾರದಿಂದ ಭೋಗ, ಐಶ್ವರ್ಯ, ಇದರ ಬೆಲೆ ಯಾದವರಿಗೆ ತಿಳಿಯದೆ, ಅಪವ್ಯಯ ಮಾಡುತ್ತಾ, ಮದ್ಯಪಾನಾಸಕ್ತರಾಗಿ, ಮದೋನ್ಮತ್ತರಾಗಿ, ಈಗ ಸರ್ವನಾಶ ಆಗುವುದರಲ್ಲಿವೆ! ಜೂಜಿನಿಂದ ಸಂಪಾದಿಸಿದ ದ್ರವ್ಯದಿಂದ ಒಬ್ಬನು ಹೇಗೆ ನಿಶ್ಚಿಂತೆಯಿಂದ ಜೀವಿಸಲು ಆಗದೋ ಹಾಗೆ, ಈ ಮಣಿದತ್ತ ಐಶ್ವರ್ಯದಿಂದಲೂ ಆಗದು! ಅಯೋಗ್ಯರ ಕೈಲಿ ಐಶ್ವರ್ಯ ಏನು ಮಾಡಲಾರದು? ಆರೋಗ್ಯವಿದ್ದರೆ, ಇಂದ್ರಿಯ ಚಾಪಲ್ಯಕ್ಕೆ ಮನುಷ್ಯ ಬೀಳುತ್ತಾನೆ! ಐಶ್ವರ್ಯವಿದ್ದರೆ, ಹೊಸ ಹೊಸ ಹಗೆಗಳನ್ನು ಕಟ್ಟಿಕೊಂಡು ನಾಡಿಗೆ ಯತ್ನಿಸುತ್ತಾನೆ. ಶಾಸ್ತ್ರ ಜ್ಞಾನವಿದ್ದರೆ, ಕುಹಕ ಕುತರ್ಕಗಳಿಂದ ವೇದಸಿದ್ಧವಾದ ಪರಮಾರ್ಥವನ್ನೇ ಇಲ್ಲ ಮಾಡಲು ಹೊರಡುತ್ತಾನೆ. ಅಸಂಸ್ಕೃತ ಮನುಷ್ಯನಿಗೆ ವಿಧಿ ಏನನ್ನು ಕೊಟ್ಟರೂ ದುರುಪಯೋಗವೇ ಆಗುತ್ತದೆಯಲ್ಲವೆ? ಬಡವನೂ, ರೋಗಿಯೂ ವಿಶೇಷ ಜ್ಞಾನವಿಲ್ಲದಿದ್ದರೂ ದೇವರಲ್ಲಿ ಶ್ರದ್ಧೆಯೂ, ಹಿರಿಯರು ಹಾಕಿಕೊಟ್ಟ ದಾರಿಯನ್ನು ಮೀರದವನೂ ಆಗಿ ಬಾಳುವುದೇ ವಾಸಿಯಲ್ಲವೆ? ದೀರ್ಘಾಯುಷ್ಯವಾದರೂ ಒಳ್ಳೆಯದೆನ್ನುವೆಯಾ? ಕಣ್ಣೆದುರೇ ಬಾಂಧವರೆಲ್ಲ ಸಾಯುವುದನ್ನು ನೋಡಬೇಕಾಗುತ್ತದೆ! ಅಪಾತ್ರನಿಗೆ ದೇವರು ಏನನ್ನು ಕೊಟ್ಟರೂ ತೃಪ್ತಿ, ನೆಮ್ಮದಿ, ಸುಖ ಹೇಗೆ ಬರುತ್ತದೆ?"

ಅಕ್ರೂರ: "ಈಗ ಮಣಿಯನ್ನು ಏನು ಮಾಡಬೇಕೆಂದು ನಿನ್ನ ಇಷ್ಟ ಪ್ರಭು? ನಿನ್ನ ಅರ್ಥ ತಿಳಿಯಲಿಲ್ಲ. ನೀನೆಂದುದೆಲ್ಲ ನಿಜ! ನಮ್ಮ ಜನ ಮದೋನ್ಮತ್ತರಾಗಿದ್ದಾರೆ. ಆಹಾರ ವಿವೇಕವಿಲ್ಲ; ಸ್ತ್ರೀ ಪುರುಷ ವಿವೇಕವಿಲ್ಲ. ಜೂಜಾಟ ದಿನಜೀವನ ರೀತಿಯಾಗಿದೆ. ಯಾವ ಪವಿತ್ರ ವಸ್ತುವಲ್ಲೂ ಯಾದವರಿಗೆ ಗೌರವವಿಲ್ಲ! ಮುನಿಗಳ ಶಾಪ ಸುಮ್ಮನೆ ಬಂದಿತೇ?... ಆದರೆ ಮಣಿಯಿಂದ ಈ ಅನಿಷ್ಟಗಳನ್ನು ತೊಡೆಯಲಾಗಲಾರದೆ?"

ಶ್ರೀಕೃಷ್ಣ: (ವಿಕಟವಾಗಿ ನಗುತ್ತಾನೆ!) "ಒಳ್ಳೆಯ ತರ್ಕವಾಯಿತಯ್ಯ, ಮಿತ್ರ! ಮಣಿ ಎಷ್ಟಾದರೂ ಅಚೇತನ ಪದಾರ್ಥ! ಅದು ಜ್ಞಾನಗುಣಕವಾದ ಚಿತ್ ಪದಾರ್ಥವನ್ನು ತಿದ್ದುವುದೆಂದರೇನು? ಇದು ಯಾವ ವೇದಾಂತ? ನಾವು ಹಾಳಾದರೂ ಆಗದಿದ್ದರೂ ಅದಕ್ಕೇನು ಲಾಭ, ನಷ್ಟ? ಕಲ್ಲುಮುಳ್ಳು ಇದ್ದ ಹಾಗೆ ಈ ಮಣಿ, ಮಾಣಿಕ್ಯಾದಿಗಳು. ಮನುಷ್ಯ ತನ್ನನ್ನು ತಾನೇ ತಿದ್ದಿಕೊಳ್ಳಬೇಕು; ಇಲ್ಲವಾದರೆ ಸರ್ವನಾಶವನ್ನು ಅನುಭವಿಸಬೇಕು! ದೋಷ ಇರುವುದು ಅವನಿಗೆ, ಮಣಿಗಲ್ಲ!"

ಅಕ್ರೂರ: "ನನ್ನನ್ನು ಕರೆಸಿದ ಉದ್ದೇಶವೇನು, ಪ್ರಭು!"

ಶ್ರೀಕೃಷ್ಣ: "ದೊರೆಗೆ ನನ್ನ ಈ ಸಲಹೆಯನ್ನು ಹೇಳು. ಯಾದವರು ದ್ವಾರಕೆಯನ್ನು ಶಾಶ್ವತವಾಗಿ ತ್ಯಜಿಸುವ ಕಾಲ ಬಂದಿದೆ! ಪ್ರಭಾಸದಲ್ಲಿ ಹಳೆಯ ಊರೊಂದಿದೆ. ಅಲ್ಲಿ. ಬೇಗ ಬೇಗ ದ್ವಾರಕಾ ಜನರಿಗೆಲ್ಲ ವಸತಿಗೆ ಏರ್ಪಾಡಾಗಬೇಕು. ಸಧ್ಯಕ್ಕೆ ತಾತ್ಕಾಲಿಕವಾಗಿ ಆದರೂ ಸರಿಯೇ! ಊರಲ್ಲಿ ಯಾರೂ ಮದ್ಯಪಾನ ಮಾಡಬಾರದೆಂದು ದೊರೆ ಡಂಗೂರ ಸಾರಿಸಿರುವುದಂತೂ ಯೋಗ್ಯವೇ. ಆದರೆ ಪ್ರಭಾಸಕ್ಕೆ ಹೊರಡುವ ಯಾರ ಬಳಿಯೂ ಹೇಗೆ ಮದ್ಯದ ಒಂದು ಗಡಿಗೆಯೂ, ಬುರುಡೆಯೂ ಇರದಂತೆ ನಮ್ಮ ಭಟರು ಪರೀಕ್ಷಿಸಲಿ. ಆಹಾರ ಧಾನ್ಯಗಳು, ಜಾನುವಾರು, ಉತ್ತಮ ವಸ್ತುಗಳು ಎಲ್ಲವನ್ನೂ ಪ್ರಭಾಸಕ್ಕೂ ಸಮೀಪದ ಗ್ರಾಮಗಳಿಗೂ ಸಾಗಿಸುವ ಏರ್ಪಾಡಾಗಲಿ. ನಾವೆಲ್ಲ ಮತ್ತೆ ದ್ವಾರಕೆಗೆ ಬರುವುವೆಂಬ ಭ್ರಾಂತಿ ಬೇಡ! ಅದಿನ್ನು ಬಂದ ದಾರಿಗೇ ಹೋಗಿ ಬಿಡುತ್ತದೆ!!"

ಅಕ್ರೂರ: "ಅಂದರೆ?"

ಶ್ರೀಕೃಷ್ಣ: "ಅಂದರೆ, ಒಂದು ಕಾಲದಲ್ಲಿ ಯಾದವರ ಸಂರಕ್ಷಣೆಗೆಂದು ನಾನೇ ಸಮುದ್ರ ಮಧ್ಯದಿಂದ ಭೂಮಿಯನ್ನು ಮೇಲೆತ್ತಿ ಈ ಕೋಟೆಯನ್ನು ನಿರ್ಮಿಸಿದೆ! ಅದು ನನ್ನ ಮಾಯಾಶಕ್ತಿ. ಆಗಿನ ಯಾದವರೂ ನನ್ನ ಆ ಬಗೆಯ ರಕ್ಷಣೆಗೆ, ಅನುಗ್ರಹಕ್ಕೆ ಪಾತ್ರರಾಗಿದ್ದರು! ಕಾಲಯವನನು ಪಶ್ಚಿಮದಿಂದಲೂ ಜರಾಸಂಧನು ಪೂರ್ವದಿಂದಲೂ ಅವನ ಸೇನಾನಿಗಳೂ ಮಿತ್ರರೂ ದಕ್ಷಿಣದಿಂದಲೂ ಮಧುರಾಪುರಿಯನ್ನು ತಾಕಲು ಹೊಂಚು ಮಾಡಿದ್ದರು! ರಾತ್ರೋರಾತ್ರಿ ಯಾದವರನ್ನು ನಾನು ಇಲ್ಲಿಗೆ ಸಾಗಿಸಿ, ಮಕ್ಕಳಂತೆ ಅಂದು ಸಂರಕ್ಷಿಸಿದೆ. ಜರಾಸಂಧನನ್ನು ಹದಿನೆಂಟು ಸಲ ಮಣ್ಣುಮುಕ್ಕಿಸಿ ಸೋಲಿಸಿ ಓಡಿಸಿದ್ದ ನನಗೆ ಆಗಲೂ ಅಲ್ಲೇ ಇದ್ದು ಯಾದವರನ್ನು ರಕ್ಷಿಸಲು ಆಗುತ್ತಿತ್ತು. ಆದರೆ ನಿರಂತರವಾದ ಯುದ್ಧ ವಾತಾವರಣದಲ್ಲಿ ಇವರ ಪ್ರಗತಿ ಆಗಲಾರದೆಂದು ಹಾಗೆ ಮಾಡಿದೆ! ಇಂದಿನ ಯಾದವ ಮದೋನ್ಮತ್ತರಿಗೆ ಈ ಬಗ್ಗೆ ಕೃತಜ್ಞತೆ ಇಲ್ಲ! ನನ್ನ ಶಕ್ತಿಯ ಅರಿವೂ ಇಲ್ಲ!!... ಎರವಲು ತಂದ ಭೂಮಿ ಈ ದ್ವಾರಕೆ. ಸಾಲ ತಂದದ್ದನ್ನು ತೀರಿಸಿಯೇ ಮನುಷ್ಯ ಲೋಕ ಬಿಟ್ಟು ಹೋಗಬೇಕು! ಮುಂದಿನ ತಲೆಗೆ ಆ ಸಾಲ ಕಟ್ಟುವವನು ಬುದ್ಧಿವಂತನಲ್ಲ"

ಅಕ್ರೂರ: "ಅಂದರೆ, ಪ್ರಭು! ಇದು ನಿನ್ನ ಅವತಾರ ಸಮಾಪ್ತಿ ಕಾಲವೇ?"

ಶ್ರೀಕೃಷ್ಣ: "ಮುನಿಗಳು ಶಾಪವಿತ್ತದ್ದು ನೆನಪಿದೆಯಲ್ಲ! ಮಕ್ಕಳ ಪಾಪ ತಂದೆ ತಾಯಿಗಳನ್ನು ತಟ್ಟದೇ ಇರುವುದು ನ್ಯಾಯವಲ್ಲ. ನನಗೂ ನೂರ ಇಪ್ಪತ್ತೈದಾಯಿತು!... ನೋಡಬೇಕಾದ್ದು, ಮಾಡಬೇಕಾದ್ದು ಎಲ್ಲ ಆಯಿತು! ನಮ್ಮವರು ಭೂಮಿಯ ಮೇಲಿಂದ ಹಕ್ಕು ಕಳೆದುಕೊಂಡಾಯಿತು. ಸಾಲವನ್ನೆಲ್ಲ ತೀರಿಸಿಯೇ ಹೋಗುತ್ತೇನೆ...."

ಅಕ್ರೂರ: (ಗದ್ಗದಿತನಾಗಿ, ಪ್ರಣಾಮ ಮಾಡಿ) "ನಿನ್ನ ಚಿತ್ತ ಪ್ರಭು! ಸಾಲತೀರಿಸಿ ಹೋಗುವ ನಿನ್ನ ಮಾತು ನನಗೂ ಅನ್ವಯವಾಗಬೇಡವೆ?"

ಶ್ರೀಕೃಷ್ಣ: "ಅದಕ್ಕೇ ನಿನ್ನನ್ನು ಕರೆಸಿದ್ದು."

ಅಕ್ರೂರ: "ಆದರೆ ಮಣಿಯನ್ನು ಸಂಪಾದಿಸಲು ಯತ್ನಿಸಿದವನು ನಾನಲ್ಲ! ಅದರ ಒಡೆಯ ಸತ್ರಾಜಿತ! ಈಗ ಅವನಿಲ್ಲ! ನೀನು ಅವನ ಅಳಿಯ. ನೀನೂ ಸತ್ಯಭಾಮೆಯೂ ಇದನ್ನು ಸ್ವೀಕರಿಸಿ ನನ್ನನ್ನು ಋಣಮುಕ್ತನನ್ನಾಗಿಸಬೇಕು!"

ಶ್ರೀಕೃಷ್ಣ: "ನಿನ್ನ ಮಾತು ಭಿಕ್ಷುಕ ಬೇರೊಬ್ಬ ಭಿಕ್ಷುಕನಿಗೆ ಭಿಕ್ಷೆ ಹಾಕಿದಂತಿದೆ! ನಾನೂ ಹೋಗುತ್ತಿರುವವನೇ! ನನಗೆ ನೀನು ಮಣಿ ಕೊಟ್ಟರೆ ಏನು ಮಾಡಿದಂತಾಯಿತು?"

ಅಕ್ರೂರ: "ಹಾಗಾದರೇನು ಮಾಡಲಿ"

ಶ್ರೀಕೃಷ್ಣ: "ಯೋಚಿಸು! ನೀನು ಶಾಸ್ತ್ರ ತಿಳಿದವನು. ಮದ್ಯಪಾನ ಮಾಡದಿರುವ ಕೆಲವೇ ಯಾದವರಲ್ಲಿ ನೀನು ಒಬ್ಬ!"

ಅಕ್ರೂರ: "(ಯೋಚಿಸಿ), ಸೂರ್ಯದೇವನಿಗೇ ಇದನ್ನು ಕೊಟ್ಟುಬಿಡಬೇಕು! ನಾನು ಸೂರ್ಯೋಪಾಸಕನಲ್ಲ! ಏನು ಮಾಡಲಿ?"

ಶ್ರೀಕೃಷ್ಣ: "ಬ್ರಾಹ್ಮಣನು ದೇವತೆಗಳಿಗೆ ಏನು ಕೊಟ್ಟರೂ ಅಗ್ನಿಯ ಮೂಲಕವೇ ಕೊಡಬೇಕಾದ ನಿಯಮವುಂಟು. ಕ್ಷತ್ರಿಯರು ಆಪತ್ಕಾಲಗಳಲ್ಲಿ ಧನುರ್ಬಾಣಾದಿ ಶಸ್ತ್ರಗಳನ್ನು ವರುಣನ ವಶದಲ್ಲಿಡುವುದು ರೂಢಿ. ಹಿಂದೆ ಪರಶುರಾಮರಿಂದ ಪಡೆದ ವೈಷ್ಣವ ಧನುಸ್ಸನ್ನು ಶ್ರೀರಾಮ ವರುಣನಲ್ಲೇ (ಸಮುದ್ರದಲ್ಲೇ) ನ್ಯಾಸವನ್ನಾಗಿಟ್ಟಿದ್ದ. ಮುಂದೆ ರಾವಣವಧೆ ಕಾಲಕ್ಕೆ ಇಂದ್ರ ಅದನ್ನು ಶರಭಂಗ, ಸುತೀಕ್ಷ್ಣ, ಅತ್ರಿ, ಅಗಸ್ತ್ಯರ ಮೂಲಕ ಶ್ರೀರಾಮನಿಗೇ ತಲುಪಿಸಿದ ಚರಿತ್ರೆ ನೆನಪಿದೆಯಷ್ಟೆ!"

ಅಕ್ರೂರ: (ಇಂಥ ಮಣಿರತ್ನವನ್ನು ಸಮುದ್ರದಲ್ಲಿ ಬಿಡಲು ಹಿಂಜರಿಯುತ್ತ) "ಪ್ರಭು! ಇದೇನೂ ಅಸ್ತ್ರ ಶಸ್ತ್ರವಲ್ಲ! ಬೇರೆಲ್ಲಾದರೂ ಸುರಕ್ಷಿತವಾಗಿಟ್ಟರಾಗದೆ?"

ಶ್ರೀಕೃಷ್ಣ: "ಯಾವುದು ಅಂಥ ಜಾಗ? ದ್ವಾರಕೆಯೇ ಮುಳುಗುತ್ತಿದೆ! ಇನ್ನೇಳು ದಿನಗಳೊಳಗೆ ಬೇರಾವ ಸುರಕ್ಷಿತ ಜಾಗವನ್ನು ನೀನು ಪಡೆಯಬಲ್ಲೆ? ವ್ಯಾಮೋಹ ಬೇಡ! ಸರ್ವಾರ್ಥಸಾಧಕವಾದ ಶರೀರವನ್ನೇ ಬಿಡುವಾಗ ಈ ಮಣಿಯಿಂದ ಯಾರಿಗೇನು? ಎಲ್ಲಿರಬೇಕೋ ಅಲ್ಲಿರಲಿ! ಸ್ವೀಕರಿಸುವುದು ಸೂರ್ಯನಿಗೆ ಗೊತ್ತು. ಬೇರೊಬ್ಬ ಸತ್ಪಾತ್ರ ದೊರಕಿದರೆ ಮತ್ತೆ ಕೊಡುತ್ತಾನೆ."

ಅಕ್ರೂರ: "(ನಿಶ್ಚಿಂತನಾಗಿ) ಬೇರೇನಪ್ಪಣೆ?"

ಶ್ರೀಕೃಷ್ಣ: "ಬೆಳಗ್ಗೆ ಪ್ರಾತರಾಹ್ನಿಕ ಆದೊಡನೆ ಉದ್ಧವನನ್ನು ಇತ್ತ ತ್ವರೆಯಿಂದ ಬರಬೇಕೆಂದು ಹೇಳು. ದೊರೆಗೆ ಮನ ನೆಮ್ಮದಿಯಿರುವಂತೆ ಏರ್ಪಡಿಸು. ಈ ನನ್ನ ಮಾತುಗಳೆಲ್ಲ ರಹಸ್ಯವಾಗಿರಲಿ. ಊರು ಮುಳುಗುವ ವಿಷಯ ಹೇಳಬೇಡ. ಮಣಿಯ ಮುಂದಿನ ದಾರಿಯನ್ನು ಸಹ."

ಅಕ್ರೂರ: "ಅಪ್ಪಣೆ" ಎನ್ನುತ್ತಾ ಹೊರಟ.

****

ಉದ್ಧವ ಶ್ರೀಕೃಷ್ಣನ ಭವನಕ್ಕೆ ಬಂದು ಪ್ರಭುವಿಗೆ ಸಾಷ್ಟಾಂಗ ಪ್ರಣಾಮ ಮಾಡಿ, ಅವನ ಪಾದದ ಬಳಿ ಕುಳಿತ.

ಕೆಲಹೊತ್ತು ಅವನನ್ನೇ ದಿಟ್ಟಿಸಿ ನೋಡಿ, ಶ್ರೀಕೃಷ್ಣ ದೃಷ್ಟಿಯನ್ನು ಕೆಳಗೆ ಹಾಕಿ ಏನೂ ಹೇಳದೆ ಮೌನವಾಗಿದ್ದ. ಆಮೇಲೆ ಹೇಳಲಾರಂಭಿಸಿದ:

ಶ್ರೀಕೃಷ್ಣ: "ಉದ್ಧವ! ನಿನ್ನೊಡನೆ ಬಹಳ ಮಾತಾಡುವುದಿದೆ. ಎಲ್ಲಿಂದ ಆರಂಭಿಸಲೆಂದೇ ತಿಳಿಯುತ್ತಿಲ್ಲ! ಇಷ್ಟರಲ್ಲೇ ನೀನು ಬಹುದೂರದ ಪ್ರಯಾಣವೊಂದನ್ನು ಆರಂಭಿಸಬೇಕಾಗಿದೆ!" ಉದ್ಧವ ಏನೂ ತಿಳಿಯದೆ, ಅರಳಿದ ಕಂಗಳಿಂದ ಶ್ರೀಕೃಷ್ಣನನ್ನು ದಿಟ್ಟವಾಗಿ ನೋಡಿದ! ಶ್ರೀಕೃಷ್ಣ ಮುಂದುವರೆಸಿದ:

ಶ್ರೀಕೃಷ್ಣ: "ನೀನು ಅರ್ಜುನನಂತಲ್ಲ, ತಾನೇ?"

ಉದ್ಧವ: "ಹಾಗೆಂದರೇನು ಪ್ರಭು?"

ಶ್ರೀಕೃಷ್ಣ: "ಜೀವನಕ್ಕೆ ಅತ್ಯುಪಯುಕ್ತವಾದ ದೃಷ್ಟಿಯೊಂದನ್ನು ದೀಪಿಕೆಯಂತೆ ಅವನಿಗೆ ಮಹಾಭಾರತದ ಯುದ್ಧದ ಆರಂಭದ ದಿನ ಉಪದೇಶಿಸಿದೆ. ಅದನ್ನು ಅವನು ಇಪ್ಪತ್ತೇ ದಿನಗಳ ಅಂತರದಲ್ಲಿ ಮರೆತ. ಕರ್ತವ್ಯ ಕರ್ಮವನ್ನು ಮಾಡುವುದೇ ಈಶ್ವರಾರಾಧನೆಯೆಂದೂ, ಅದು ಒಮ್ಮೊಮ್ಮೆ ಘೋರವಾಗಿ ಕಂಡರೂ, ಮನುಷ್ಯನಿಗೆ ಅದರಲ್ಲಿ ಪಾಪವಿಲ್ಲ ಎಂದೂ, ಅದರಲ್ಲಿ ಅವನು ಈಶ್ವರನ ನಿಮಿತ್ತ ಮಾತ್ರ ಎಂತಲೂ ತಿಳಿಸಿ, ಈ ಯೋಗದಲ್ಲಿ ಆತ್ಮಜ್ಞಾನವೂ ಭಗವತ್ಪ್ರೀತಿಯೂ ಅಡಗಿರುವುದರಿಂದ ಇದೇ ಪೂರ್ಣ ಯೋಗವೆಂದೂ ತಿಳಿಸಿ, ಯುದ್ಧವು ಕ್ಷತ್ರಿಯನಿಗೆ ಅನಿವಾರ್ಯವಾದಾಗ ಅದೂ ಒಂದು ಯೋಗ ಎಂದು ಬೋಧಿಸಿದೆ. ಯುದ್ಧ ಮುಗಿಯುವ ತನಕ ಅವನು ಮರು ಮಾತಾಡಲಿಲ್ಲ, ಅದು ಮುಗಿದ ಮೇಲೆ ಆ ಮೋಹ ಅವನ ಹಿರಿಯಣ್ಣನಿಗೆ ಅಡರಿತು! ರಾಜ್ಯ ಬೇಡವೆಂದ!! ಬಂಧು ಬಾಂಧವರನ್ನು ರಾಜ್ಯಕ್ಕಾಗಿ ಕೊಂದದ್ದು ಪಾಪ ಎಂದು ಗೋಳಾಡಿದ. ವ್ಯಾಸರು, ಪ್ರಾಯಶ್ಚಿತ್ತ ಬೇಕಾದರೆ ಅಶ್ವಮೇಧ ಮಾಡು ಎಂದರು! ನಾನು ಅದೂ ಅವಶ್ಯವಿಲ್ಲವೆಂದೆ! ದೇವಪೂಜೆ ಮಾಡಿದವನು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆ? ವೇದಾಧ್ಯಯನ ಮಾಡಿದವನಿಗೊಂದು ಪ್ರಾಯಶ್ಚಿತ್ತ ಬೇಕೆ? ಮಾಡಬೇಕಾದ ಎಲ್ಲ ಕಾರ್ಯಗಳಿಗೂ ಒಂದೊಂದು ಪ್ರಾಯಶ್ಚಿತ್ತ ಬೇಕೆಂದರೆ ಎಷ್ಟು ಹಾಸ್ಯಾಸ್ಪದ? ಹಾಗೆ ಇದನ್ನೆಲ್ಲ ಮರೆತಿದ್ದ ಅರ್ಜುನನಿಗೆ ಅವನ ಕೋರಿಕೆಯಂತೆ ಪುನಃ ಅನುಗೀತೆಯೆಂಬ ಹೆಸರಿನಲ್ಲಿ ಉಪದೇಶಿಸಿದೆ. ಇದನ್ನಾದರೂ ನೆನೆಪಿನಲ್ಲಿಟ್ಟಿದ್ದಾನೊ, ಮರೆತಿದ್ದಾನೋ, ನೋಡಬೇಕು!... ಅವನು ಮತ್ತೆ ಬರುವ ತನಕ ನಾನಿರಬೇಕಲ್ಲ!"

ಉದ್ಧವನಿಗೆ ಗಾಬರಿಯಾಗುತ್ತದೆ!

ಉದ್ಧವ: "ಪ್ರಭು! ನೀನು ಹೇಳುವ ಅನೇಕ ಮಾತುಗಳ ಧ್ವನಿ ಇಂದು ನನಗೆ ಅರ್ಥವಾಗುತ್ತಿಲ್ಲ! ನಾನು ಮಾಡಬೇಕಾದ ದೂರದ ಪ್ರಯಾಣ ಎಂದರೇನು? 'ಇಷ್ಟರಲ್ಲೇ' ಎಂದೆಯಲ್ಲ, ಯಾವಾಗ?

ನನ್ನೊಡನೆ ಆಡಬೇಕಾದ ಬಹಳ ಮಾತುಗಳಾವುವು? ನೀನು ಅರ್ಜುನನಿಗೆ ಉಪದೇಶಿಸಿದ ಗೀತಾತತ್ತ್ವಗಳನ್ನು ಕೇಳಿ ಬಲ್ಲೆ. ಅರ್ಜುನನಂತೆ ನನಗೆ ವಿಸ್ಮೃತಿ ಇಲ್ಲವೆಂದಿಟ್ಟುಕೋ! ನನಗೆ ನೀನು ಈಗ ಹೇಳಲಿಚ್ಛಿಸುವ ಹೊಸ ಶಾಸ್ತ್ರ ಯಾವುದು? ಅರ್ಜುನ ಮತ್ತೆ ಬರುವುದು ಯಾವಾಗ? ಈಗ ಅವನ ನೆನಪು ಏಕೆ? ಆವರೆಗೆ ನೀನು ಇರುವುದು ಅಸಂಭವ ಎಂಬ ಶಂಕೆ ಏಕೆ? ಈಗ ಏನಾದರೂ ಅನಾಹುತ ನಡೆಯಲಿದೆಯೇ?..."

ಶ್ರೀಕೃಷ್ಣ ನಿಟ್ಟುಸಿರಿಟ್ಟು ಗವಾಕ್ಷದ ಆಚೆ ದೃಷ್ಟಿ ಹಾಯಿಸಿ, ಏನನ್ನೂ ವಿಶೇಷವಾಗಿ ಗಮನಿಸದೆ, ಶೂನ್ಯ ದೃಷ್ಟಿಯಿಂದ ಅನ್ಯಮನಸ್ಕನಾಗುತ್ತಾನೆ. ಕೊಂಚ ಹೊತ್ತಾದ ಮೇಲೆ,

ಶ್ರೀಕೃಷ್ಣ: "ಪ್ರಾತರಾಹ್ನಿಕವನ್ನು ಮುಗಿಸಿ ಬಂದಿರುವೆ ತಾನೇ!"

ಉದ್ಧವ: "ಹೌದು"

ಶ್ರೀಕೃಷ್ಣ: "ಮತ್ತೆ ಆಚಮನ ಮಾಡಿ ಬಾ"

ಉದ್ಧವ ಮೇಲೆದ್ದ. ಇವನು ಬಂದಿರುವುದನ್ನು ತಿಳಿದು, ರುಕ್ಮಿಣೀದೇವಿ "ನಿನ್ನೆ ರಾತ್ರಿ ನನಗೆ ಇಂದು ಉದ್ಧವ ಬಂದ ಮೇಲೆ ಏನೋ ಉತ್ತರಿಸುವುದಾಗಿ ಹೇಳಿದ್ದಿರಲ್ಲಾ? ಬರಲೇ?" ಎಂದು ಚೇಟಿಯ ಮೂಲಕ ಹೇಳಿ ಕಳುಹುತ್ತಾಳೆ. "ಈಗ ಬೇಡ. ನಾನು ಹೇಳಿ ಕಳುಹಿದಾಗ ಬಾ. ಸಿದ್ಧವಾಗಿರು" ಎಂದು ಕೃಷ್ಣ ಅವಳ ಕೈಲೇ ಹೇಳಿ ಕಳುಹುತ್ತಾನೆ. ಅಷ್ಟರಲ್ಲಿ ಉದ್ಧವ ಆಚಮನ ಮಾಡಿ ಬಂದು ಕುಳಿತ.

*****

# ೬. ಕೊನೆಯ ಉಪದೇಶ

ಶ್ರೀಕೃಷ್ಣ: "ಉದ್ಧವ! ಯಾದವರೆಲ್ಲ ವಿನಾಶ ಹೊಂದಿದ ಮೇಲೆ ಉಳಿಯುವ ವೀರರಲ್ಲಿ ನನ್ನ ಜ್ಞಾನ-ಸಂತತಿಯಾಗಿ ಉಳಿಯುವವನು ನೀನೊಬ್ಬ! ರಾಷ್ಟ್ರಕ್ಕಾಗಿ, ರಾಜಕೀಯ ತತ್ವಗಳ ನಂಬಿಕೆಗಳ, ಆಚರಣೆಗಳ ಉತ್ತರಾಧಿಕಾರಿಯಾಗಿ ಉಳಿಯುವವನು ನನ್ನ ಮರಿಮಗ ವಜ್ರನೊಬ್ಬ-ಅನಿರುದ್ಧನ ಮಗ... ಈಗ ನೀವಿಬ್ಬರೂ ದ್ವಾರಕೆಯನ್ನು ಬಿಟ್ಟು ಹೊರಡಿ... ಏನು ನೆಪ ಮಾಡಿದರೂ ಸರಿ... ಪ್ರಶ್ನೆ ಕೇಳಬೇಡ!... ನಾನು ಹೇಳುವುದನ್ನೆಲ್ಲ ಗಮನವಾಗಿ ಮೊದಲು ಕೇಳು. ನೆನಪಿನಲ್ಲಿಟ್ಟುಕೊ... ಮುನಿಶಾಪದ ಪ್ರಸಂಗ ನಿನಗೆ ಗೊತ್ತಿರಬೇಕಲ್ಲ!... ಇನ್ನು ಏಳು ದಿನಗಳ ನಂತರ ಇಡೀ ದ್ವಾರಕೆ-ನನ್ನ ಈ ನಿವಾಸಸ್ಥಾನವೊಂದನ್ನು ಹೊರತುಪಡಿಸಿ-ಸಮುದ್ರದಲ್ಲಿ ಮುಳುಗುತ್ತದೆ. ಈ ನೆಪಮಾಡಿ ನಮ್ಮವರನ್ನೆಲ್ಲ ಪ್ರಭಾಸಕ್ಕೆ-ಪಿಂಡಾರಕ ಕ್ಷೇತ್ರಕ್ಕೆ-ತೀರ್ಥಯಾತ್ರೆಯ ನೆಪದಲ್ಲಿ ಕಳುಹಲು ಏರ್ಪಡಿಸಿದ್ದೇನೆ. ಇಂದೋ ನಾಳೆಯೋ ಮಹಾಪ್ರಸ್ಥಾನ-ಆ ದೊಡ್ಡ ವಲಸೆ ನಡೆಯುತ್ತದೆ. ಪ್ರಭಾಸಕ್ಕೇ ಏಕೆಂದು ಕೇಳುವೆಯಾ?... ದೊರೆಯ ಅಪ್ಪಣೆಯಂತೆ, ಸಾಂಬ ಹಡೆದ ಕಬ್ಬಿಣದ ಒನಕೆಯನ್ನು ಅಲ್ಲಿನ ಸಮುದ್ರದ ತೀರದಲ್ಲೇ, ಅರಮನೆಯ ದೂತರು ಕಲ್ಲುಗಳ ಮೇಲೆ ತೇದು ತೇದು ನೀರಿಗೆ ಹಾಕಿದ್ದಾರೆ! ಅದೆಲ್ಲ ಈಗ ಏರಕವೆಂಬ ಜಾತಿಯ ಜೊಂಡಿನ ಹುಲ್ಲಾಗಿ ಬೆಳೆದು, ವೇಷ ಮರೆಸಿಕೊಂಡು, ಯಾದವರ ವಿನಾಶಕ್ಕಾಗಿ ಹುಲುಸಾಗಿ ಕಾದು ನಿಂತಿದೆ... ನಮ್ಮವರನ್ನು ಮದ್ಯಪಾನ ಯಾರೂ ಮಾಡದಿರುವಂತೆ ಆಜ್ಞೆ ಮಾಡಲಾಗಿದೆ!! ಎಂಥ ವಿಡಂಬನೆ! ಬೆಳೆದು ನಿಂತ ದುಶ್ಚಟ, ಒಂದು ರಾಜಾಜ್ಞೆಗೆ ಹೋಗಿ ಬಿಡುವುದೇ? ಕದ್ದು ಕುಡಿಯಲಾರಂಭಿಸಿದ್ದಾರೆ! 'ಪಾನ ಬೇಡ' ಅಷ್ಟೇ ತಾನೇ, ಎಂದು ಕುಹಕ ಮಾಡಿ, ಅದನ್ನೇ ಆಹಾರದಲ್ಲಿ ಬೆರೆಸಿಯೇ ತಿನ್ನಲಾರಂಭಿಸಿದ್ದಾರೆ! ಅನ್ನದಲ್ಲಿ, ಭಕ್ಷ್ಯದಲ್ಲಿ, ಎಲ್ಲದರಲ್ಲಿ ಮದ್ಯವೇ ಬೆರೆತಿದೆ, ಅವರಿಗೆ... ಆದುದರಿಂದ ನಿನಗೆ ನನ್ನ ಹೃದಯಾಂತರಾಳದ ಕೆಲವು ವೇದಾಂತ ಮರ್ಮಗಳನ್ನು ಉಪದೇಶಿಸಲು ಕರೆಸಿದೆ."

ಉದ್ಧವ ಗದ್ಗದಿತನಾಗಿ ನಿಶ್ಶಬ್ದವಾಗಿ ಕಣ್ಣೀರು ಹಾಕುತ್ತಾ ಅಧೋಮುಖನಾಗಿ ಕೂಡುತ್ತಾನೆ... ಕೊಂಚ ಹೊತ್ತು ಮೌನ... ಆಮೇಲೆ ಧೈರ್ಯ ತಂದುಕೊಂಡು ಉದ್ಧವ ಕೇಳುತ್ತಾನೆ.

ಉದ್ಧವ: "ಪ್ರಭು! ನಾನೂ ಯಾದವನಷ್ಟೆ! ನನಗೂ ಮುನಿಶಾಪ ತಟ್ಟಲಿ... ನಾನೂ ನಿನ್ನೊಡನೆಯೇ ಬರುತ್ತೇನೆ! ನನ್ನನ್ನು ಈ ಗಳಿಗೆಯಲ್ಲಿ ದೂರ ಅಗಲಿಸಬೇಡ!... ಅಗಲಿಸಬೇಡ!..."

ಶ್ರೀಕೃಷ್ಣ: "ಮಿತ್ರ! ನನ್ನನ್ನು ಹೃದಯಾಂತರಾಳದಿಂದ ಪ್ರೀತಿಸುವವರನ್ನು ನಾನು ಎಂದೆಂದೂ ಅಗಲಲಾರೆ! ಅವರವರ ಹೃದಯದಲ್ಲೇ ಇದ್ದು ಅವರೊಡನೆ ಸಂಭಾಷಿಸುತ್ತಿರುತ್ತೇನೆ... ಹೊರಹೊದ್ದಿಕೆಯ ಈ ಅವತಾರಶರೀರವನ್ನು ಮಾತ್ರ ಕಳಚಲೇ ಬೇಕಾಗುತ್ತದೆ! ಒಂದೇ ರೂಪದಲ್ಲಿ ಕಾಲ ಪ್ರವಾಹದಲ್ಲಿ ನಾನು ಇರಲು ಇಚ್ಛಿಸುವುದಿಲ್ಲ! ಲೀಲಾವಿಭೂತಿಯಲ್ಲಿ ಕಾಲ ಪ್ರವಹಿಸಲೇಬೇಕು! ಯಾವುದೂ ಅದರಲ್ಲಿ ತಟಸ್ಥವಾಗಿರಬಾರದು-ನಾನೂ ಸಹ ನನ್ನಿಷ್ಟದಿಂದಲೇ ಈ ನಿಬಂಧನೆಗೆ ಒಳಗಾಗಿದ್ದೇನೆ-ಇಲ್ಲವಾದರೆ ನನ್ನ ಎಲ್ಲ ಅವತಾರಗಳೂ, ಯಾವುವೂ ಮುಗಿಯದೆಯೇ ಹೋದರೆ, ಪ್ರಗತಿಯ ಸಂದರ್ಭದಲ್ಲಿ ಅಸಂಗತವಾಗಿ ಉಳಿದು ಬಿಡುತ್ತವೆ. ನನ್ನದೇ ಅನುಗೀತೆಯ ಈ ಮಾತನ್ನು ಕೇಳಿಲ್ಲವೇ? "ಯಾವ ಯಾವ ಯೋನಿಯಲ್ಲಿ ಅವತಾರವೊ ಆ ಆ ನಿಯಮಗಳನ್ನು ನಾನೂ

ಅನುಸರಿಸುತ್ತೇನೆ. ನನ್ನ ಇಷ್ಟ ಅದು. ನನಗೆ ಮೀರಿದ ನಿರ್ಬಂಧ ಅದೇನೂ ಇಲ್ಲ!" "ನೀನು ವಿಶಾಲಬದರಿಕಾಶ್ರಮಕ್ಕೆ ಈಗಲೇ ಹೊರಡು. ಅಲ್ಲಿ ನನ್ನನ್ನು ಸದಾ ಧ್ಯಾನಿಸುತ್ತಾ ನಿನ್ನ ಕಾಲ ಬರುವ ತನಕ ತಪೋನಿರತನಾಗಿರು. ನಾನು ಇನ್ನು ನನ್ನ ಭಕ್ತರಿಗಾಗಿ ಅಲ್ಲಿ ಸದಾ ವಾಸ ಮಾಡುತ್ತೇನೆ. ಭಕ್ತಿ ಪೂರ್ಣರಾದವರಿಗೆ ಹೀಗೇ ಕಾಣುತ್ತಿರುತ್ತೇನೆ. ನಾನೀಗ ನಿನಗೆ ಉಪದೇಶಿಸುವ ಯೋಗ ಮುಂದೆ ನಿನ್ನಿಂದಲೇ ಉಳಿಯಬೇಕಾಗಿದೆ" ಎನ್ನುತ್ತಾ ಶ್ರೀಕೃಷ್ಣ ಅವನಿಗೆ ಭಕ್ತಿಯೋಗ ರಹಸ್ಯವನ್ನೂ, ಉಪಾಸನೆಯ ಪ್ರಕಾರವನ್ನೂ ಸಾಂಗವಾಗಿ ಉಪದೇಶಿಸುತ್ತಾನೆ.

"ಈ ಯೋಗವನ್ನು ನಾನೇ ಮೊದಲು ಚತುರ್ಮುಖ ಬ್ರಹ್ಮನಿಗೆ ಉಪದೇಶಿಸಿದೆ. ಅವನಿಂದ ಮನುವಿಗೂ, ಅಲ್ಲಿಂದ ಭೃಗ್ವಾದಿ ಸಪ್ತರ್ಷಿಗಳಿಗೂ, ಮುಂದೆ ಪಿತೃಗಳು, ದೇವತೆಗಳು, ದಾನವರು, ಗುಹ್ಯಕರು ಹೀಗೆ ನಾನಾ ಪರಂಪರೆಗಳಲ್ಲಿ ಹರಿದು ಅದು ಮುಂದೆ ನಷ್ಟವಾಯಿತು. ವೇದೋಕ್ತವೇ ಆಗಿದ್ದರೂ ಈ ವಾಣಿಯು ಕಾಲಪ್ರವಾಹದಲ್ಲಿ, ಅವರವರ ಪ್ರಕೃತಿ ಧರ್ಮದಂತೆ, ಈ ವಿದ್ಯೆಯೂ ವಿಕೃತಿ ಹೊಂದುತ್ತಾ ಪಾಖಂಡಿಗಳಿಂದ ನಷ್ಟವಾಯಿತು! ಕೇವಲ ಕರ್ಮಗಳಿಂದ ಸಂಪಾದಿತವಾದ ಲೋಕಗಳು ಶಾಶ್ವತವಲ್ಲ! ಭಕ್ತಿಯೋಗ ನಿಷ್ಠನಿಗೆ ದೇವಾದಿ ಪದವಿಗಳಾಗಲಿ, ಕೈವಲ್ಯವೆಂಬ ಸ್ವಾತ್ಮೈಕಾನುಭವ ಲೋಕವಾಗಲೀ, ನಾನಾಯೋಗಸಿದ್ಧಿಗಳಾಗಲಿ, ಐಹಿಕ ಸುಖಗಳಾಗಲಿ ರುಚಿಸುವುದಿಲ್ಲ! ಹಾಗೆ ರುಚಿಸಿದರೆ ಆಗ ಅದು ಕಪಟ ಯೋಗವೆಂದು ಖಚಿತ ಪಡುತ್ತದೆ. ಹಾಗೊಬ್ಬ ನನಗಾಗಿಯೇ ಬಾಳುವ, ನಾನೇ ಅವನಿಗೆ ಎಲ್ಲವೂ ಆಗಿರುವ, ಯೋಗಿಯು ನನಗೆ ಸಿಕ್ಕರೆ, ಅವನನ್ನು ನಾನೇ ಅನುಸರಿಸುತ್ತೇನೆ. ಅಷ್ಟು ಪ್ರಿಯನು ನನಗೆ ಬೇರಾರೂ ಇಲ್ಲ; ಲಕ್ಷ್ಮೀದೇವಿಯಾಗಲಿ, ಸಂಕರ್ಷಣನಾಗಲಿ, ಬೇರಾರೂ ನಿನಗಿಂತ ನನಗೆ ಹೆಚ್ಚು ಪ್ರಿಯರಲ್ಲ! ಅದಕ್ಕೆಂದೇ ನಿನ್ನನ್ನು ಕರೆದು ಈ ಯೋಗವನ್ನು ಉಪದೇಶಿಸಿದ್ದೇನೆ."

ಶ್ರೀಕೃಷ್ಣ ಮಾತು ನಿಲ್ಲಿಸಿದ. ಉದ್ಧವ ಯೋಗಾರೂಢನಾಗಿ ಕೆಲಹೊತ್ತು ನಿಂತು ತನ್ನ ಧ್ಯಾನ ಮೂರ್ತಿಯಾಗಿ ಹೃದಯ ಕಮಲದಲ್ಲಿ ನೆಲೆಸಿರುವವನೂ, ಈಗ ಉಪದೇಶಕನಾಗಿರುವವನೂ, ತಾನು ಹೋಗಲಿರುವ ಬದರಿಕಾಶ್ರಮದಲ್ಲಿ ನೆಲೆಸಿರುವವನೂ ಏಕಮೂರ್ತಿಯೇ ಎಂದು ಕಾಣುತ್ತಾನೆ!

ಉದ್ಧವ ಬಹಿರ್ಭೂತನಾಗಿ ಆ ಭಕ್ತಿ ಯೋಗಕ್ಕೆ ಸಂಬಂಧಿಸಿದಂತೆ ನಾನಾ ಪ್ರಶ್ನೆಗಳನ್ನು ಕೇಳುತ್ತಾನೆ. ಆ ಪೂರಕ ಪ್ರಶ್ನೆಗಳಿಗೆಲ್ಲ ಶ್ರೀಕೃಷ್ಣ ಬಹು ಸಮಂಜಸವಾದ ಉತ್ತರ ಕೊಟ್ಟು ಅವನ ಸಂದೇಹಗಳನ್ನು ತೀರಿಸುತ್ತಾನೆ:

"ತ್ಯಾಗವೆಂಬುದು ಸುಲಭವಲ್ಲ. ಇಂದ್ರಿಯಸುಖ ವಾಸನೆ ಸುಲಭವಾಗಿ ಬಿಡದು. ಅದಕ್ಕೆ ಸತತ ಅಭ್ಯಾಸ ಬೇಕು. ವೈರಾಗ್ಯವೂ ಅಷ್ಟೆ. ಸುಮ್ಮನೆ ಬಾರದು" ಎನ್ನುತ್ತಾ ಅವಧೂತನೊಬ್ಬ ಅನೇಕ 'ಗುರು'ಗಳಿಂದ ಕಲಿತ ಪಾಠವನ್ನು ಹೃದಯಂಗಮವಾಗಿ ಬೋಧಿಸುತ್ತಾನೆ. (ಇದೇ ಅವಧೂತಗೀತೆ ಎನಿಸಿದೆ. ಶ್ರೀ ಭಾಗವತ ೧೧-೭) ಭೂಮಿಯಿಂದ ಕಲಿಯಬೇಕಾದ್ದು ಧೈರ್ಯವೆಂಬ ಗುಣ. ಹೊರಬಾರದ ಭಾರ ಬಂದರೂ ಭೂಮಿ ದಾರಿತಪ್ಪದು! ಅಲ್ಲವೇ? ವಾಯುವಿನಿಂದ ನಿರ್ಲೇಪ (ಅಂಟದಿರುವ) ಗುಣವನ್ನೂ, ಆಕಾಶದಿಂದ ಗುಣಗಳಿಗೆ ವಶಪಡದಿರುವ ಸ್ವಭಾವವನ್ನೂ, ಅಗ್ನಿಯಿಂದ ಶುಚಿತ್ವವನ್ನೂ, ಚಂದ್ರನಿಂದ ಸುಖದು:ಖದಲ್ಲಿ ಸಮಭಾವತ್ವವನ್ನೂ, ಹೀಗೆ ಕಲಿಯುವುದು ಬಹಳ ಇದೆಯಷ್ಟ! ಸಿಕ್ಕದ್ದರಲ್ಲೇ ತೃಪ್ತಿ ಎಂಬ ಗುಣವನ್ನು ಹೆಬ್ಬಾವಿನಿಂದಲೂ ಕಲಿಯುವುದಿದೆ! ಸಮುದ್ರದಿಂದ ಉಬ್ಬದ ಕುಗ್ಗದ ಸಮಚಿತ್ತತ್ವವನ್ನು ಕಲಿ. ಪಿಂಗಳೆ ಎಂಬ ಸೂಳೆಯಿಂದಲೂ ಕಲಿಯುವುದಿದೆ! ರಾತ್ರಿಯೆಲ್ಲ ಸಿಂಗರಿಸಿಕೊಂಡು, ದುರಾಸೆಯಿಂದ, ಹೆಚ್ಚು ಹೆಚ್ಚು ಹಣ ಕೊಡುವ ವಿಟರು ಬಂದಾರೆಂದು

---

೧. ಧರ್ಮಸ್ಯ ಸೇತುಂ ಬಧ್ನಾಮಿ ಚಲಿತೇ ಚಲಿತೇ ಯುಗೇ।
ತಾಸ್ತಾ ಯೋನೀಃ ಪ್ರವಿಶ್ಯಾಹಂ ಪ್ರಜಾನಾಂ ಹಿತಕಾಮ್ಯಯಾ॥ (ಅಶ್ವಮೇಧಿಕ, ಅನುಗೀತಾ, ೫೪-೧೬) ಇತ್ಯಾದಿ.

೨. ಶ್ರೀಭಾಗವತ, ಏಕಾದಶಸ್ಕಂಧ, ಉದ್ಧವಗೀತಾ, ಅಧ್ಯಾಯ ೧೪.

ಧ್ಯಾನಿಸಿ, ಒಂದವರನ್ನೆಲ್ಲ ಬಿಟ್ಟು, ಕೊನೆಗೆ ಯಾರೂ ಬಾರದೆ ಅವಳಿಗೆ ನಿರಾಸೆಯಿಂದ ಶಾಶ್ವತ ವೈರಾಗ್ಯವೇ ಉದಿಸಿತು! 'ಸಮೀಪದಲ್ಲೇ ಹೃದಯದಲ್ಲೇ ಇದ್ದು ಸದಾ ಸುಖ ಕೊಡುವ ಭಗವಂತನನ್ನು ಬಿಟ್ಟು, ತೃಪ್ತಿತರದ, ಶೋಕ ಭಯಗಳನ್ನೇ ಕೊಡುವ ತುಚ್ಛ ವಿಟನನ್ನು ಆಶಿಸಿದೆನಲ್ಲ!' ಎಂದು ಹನ್ನನ್ನೇ ಧ್ಯಾನಿಸಿ, ಮೋಕ್ಷ ಹೊಂದಿದಳು! ಜ್ಞಾನಿಗಳೆಂಬುವರು ಇವಳಿಗಿಂತ ಕಡೆಯಾಗುವುದೇ? ಯೋಗಕಾಲದಲ್ಲಿ ಏಕಾಂತತೆ ಹೇಗೆ ಬರುತ್ತದೆಯೆಂಬುದಕ್ಕೆ ಒಬ್ಬ ಅವಿವಾಹಿತ ಕುಮಾರಿಯ ಕತೆ ಕೇಳಿಲ್ಲವೆ? ಒಬ್ಬ ಬಡ ಕನ್ಯೆ. ಅವಳನ್ನು ವರಿಸಲು ದಿನವೂ ಎಷ್ಟೋ ಜನ ಧನಿಕ ತರುಣರು ಬರುತ್ತಾರೆ. ಅಡಿಗೆ ಮಾಡಲು ಸ್ವಲ್ಪವೇ ಭತ್ತ ಇದೆ. ತಾನೇ ಕುಟ್ಟಿ ಅಕ್ಕಿ ಮಾಡಿ ಬೇಯಿಸಿ ಬಡಿಸಬೇಕು! ಇವಳು ಬಡವೆಯೆಂದು ತಿಳಿದರೆ ಅವರೆಲ್ಲಿ ಹೋಗಿ ಬಿಡುತ್ತಾರೋ ಎಂದು ಅಂಜಿದರೂ ಭತ್ತ ಕುಟ್ಟದೆ ವಿಧಿಯಿಲ್ಲ!! ಅವಳ ಕೈಯ್ಯಲ್ಲಿಯೋ ಬಹಳ ಶಂಖದ ಬಳೆಗಳು ಇವೆ. ಕುಟ್ಟುವಾಗ ಅವು ಝಣಝಣ ಶಬ್ದ ಮಾಡುತ್ತವೆ! ಅವಳು ಶಬ್ದ ಕಡಿಮೆ ಮಾಡಲು ಒಂದೊಂದೇ ಬಳೆ ಒಡೆದು ಹಾಕುತ್ತಾ, ಕೊನೆಗೆ ಒಂದೊಂದು ಕೈಲಿ ಒಂದೊಂದೇ ಬಳೆ ನಿಂತಾಗ ಶಬ್ದ ಪೂರ್ಣ ನಿಲ್ಲುವುದನ್ನು, ಹೀಗೆ ಅಭ್ಯಾಸದಿಂದ ಕಂಡುಕೊಂಡಳು! **ಏಕ ಏವ ಚರೇತ್ ಧರ್ಮಂ ಕುಮಾರ್ಯಾ ಇವ ಕಂಕಣಂ** ಎಂಬ ಮಾತು ಅಂದಿನಿಂದ ಬಂದಿತು."

ಶ್ರೀಕೃಷ್ಣ ಸಕಲ ವೇದಾಂತ ಮರ್ಮಗಳನ್ನೂ ಉದ್ಧವನಿಗೆ ಅರುಹಿ, ತನ್ನನ್ನು ಸುಲಭವಾಗಿ ವಶಪಡಿಸಿಕೊಳ್ಳಲು ಸತ್ಸಂಗವೇ ಪ್ರಧಾನ ಸಾಧಕವೆಂಬುದನ್ನೂ ಬೋಧಿಸಿ ಅನೇಕ ಉದಾಹರಣೆಗಳನ್ನೀಯುತ್ತಾನೆ. ಗೋಕುಲದ ಸ್ತ್ರೀಯರು ಎಂಥ ಭಾಗವತೋತ್ತಮರು! ಎಂದು ನೆನೆಸುತ್ತಾನೆ. ಬಲಿ, ವಿಭೀಷಣ, ಸುಗ್ರೀವ, ಹನುಮ, ಗಜೇಂದ್ರ, ಜಟಾಯು, ಧರ್ಮವ್ಯಾಧ, ತುಲಾಧಾರಾದಿಗಳನ್ನೂ ಸಹ.

ಶ್ರೀಕೃಷ್ಣ, ಶರಣಾಗತನ ಧರ್ಮವನ್ನೂ, ಸಂನ್ಯಾಸ ಧರ್ಮವನ್ನೂ ಅವನಿಗೆ ಉಪದೇಶಿಸುತ್ತಾನೆ. ಇವಕ್ಕೆ ಪೂರಕವಾದ ಸಾಮಾನ್ಯ ಧರ್ಮಗಳನ್ನೂ, ಶಮದಮಾದಿ ಗುಣ ಸಂಪಾದನೆಯ ಮಾರ್ಗವನ್ನೂ ಉಪದೇಶಿಸುತ್ತಾನೆ. ಘೋರ ಆಂಗೀರಸರಿಂದ, ಸಾಂದೀಪನೀ ಗುರುಗಳಿಂದ ತಾನು ಪಡೆದು ರೂಢಿಸಿಕೊಂಡ ಈ ಅಧ್ಯಾತ್ಮ ವಿದ್ಯೆಗೆ ಉದ್ಧವ ಉತ್ತಮಾಧಿಕಾರಿಯಾಗಿ, ಶಿಷ್ಯನಾಗಿ, ಸಂದೇಹ ದೂರನಾಗಿ, ಸಕಲವನ್ನೂ ಸ್ವೀಕರಿಸುತ್ತಾನೆ.

ತನ್ನನ್ನು ಉಪಾಸಿಸುವ ಭಕ್ತ, ಯೋಗಸಿದ್ಧಿಯ ಮಾರ್ಗದಲ್ಲಿ, ತನ್ನನ್ನು ಈ ಎಂಟುವಿಧ ಪ್ರತಿಮೆಗಳಲ್ಲಿ ಯಾವ ರೂಪದಲ್ಲಾದರೂ ಉಪಾಸಿಸಬಹುದೆನ್ನುವ ಶ್ರೀಕೃಷ್ಣ-ಆ ಪ್ರತಿಮೆಗಳು ಶಿಲೆಯಿಂದಲೋ, ಮರದಿಂದಲೋ, ಲೋಹದಿಂದಲೋ, ಬಣ್ಣದಿಂದ ಬರೆದ ಚಿತ್ರಪಟ ರೂಪದಲ್ಲೋ, ಬರೀ ಗೆರೆಗಳಿಂದಾದ ರೇಖಾಚಿತ್ರ ರೂಪದಲ್ಲೋ, ಗಾರೆಯಿಂದಾದ (ಸೈಕತ) ವಿಗ್ರಹ ರೂಪದಲ್ಲೋ, ಮನದಲ್ಲಿ ಧ್ಯಾನಮೂರ್ತಿಯ ರೂಪದಲ್ಲೋ, ಸಾಲಿಗ್ರಾಮಾದಿ ಮಣಿಯ ರೂಪದಲ್ಲೋ,- ಯಾವುದಾದರೂ ಆಗಿರಬಹುದೆನ್ನುತ್ತಾನೆ. ಈ ಮೂರ್ತಿಗಳನ್ನು ತನ್ನ ಭಕ್ತ ಕಾಣುವ ಭಾವದಲ್ಲೇ ತಾನಿರುವುದಾಗಿಯೂ ಶ್ರೀಕೃಷ್ಣ ಹೇಳುತ್ತಾನೆ. ಪೂಜಾ ವಿಧಾನವನ್ನೂ ಉಪದೇಶಿಸುತ್ತಾನೆ.

ತಾನು ಮೆಟ್ಟಿಕೊಂಡಿದ್ದ ನವರತ್ನಖಚಿತ ಪಾದುಕೆಗಳನ್ನೇ ಶ್ರೀಕೃಷ್ಣ ಉದ್ಧವನಿಗೆ ನಿತ್ಯ ಪೂಜೆಗಾಗಿ ಅನುಗ್ರಹಿಸಿ ಕೊಟ್ಟು, ಕ್ಷಣಕಾಲ ಸುಮ್ಮನಿದ್ದು, ಬಾಗಿಲಲ್ಲಿದ್ದ ಚೇಟಿಯನ್ನು ಕರೆದು, "ಮಹಾರಾಣಿಯವರು ಬರಲಿ, ಎಂದು ಹೇಳು" ಎಂದು ಹೇಳಿ ಕಳುಹುತ್ತಾನೆ.

ರುಕ್ಮಿಣೀ ಸಡಗರದಿಂದ ಬರುತ್ತಾಳೆ. ಪ್ರಭಾಸಕ್ಕೆ ಹೊರಡಲು ಅಲಂಕರಿಸಿಕೊಂಡು ಸಿದ್ಧಳಾಗಿರುವ ಅವಳ ಸಂತಸವನ್ನು ಕಂಡು, ಶ್ರೀಕೃಷ್ಣ ಕಿಂಚಿತ್ ಶೋಕಾವಿಷ್ಟನಾಗಿ, ತಲೆತಗ್ಗಿಸಿ ಅನ್ಯಮನಸ್ಕನಾಗುತ್ತಾನೆ!

ನಡೆದುದನ್ನೂ, ಶ್ರೀಕೃಷ್ಣ ಹೇಳಿದ ರಹಸ್ಯಗಳನ್ನೂ ಅರಿತ ಉದ್ಧವನಿಗೂ ದು:ಖ ಉಕ್ಕಿ ಬರುತ್ತದೆ.

ಇವರಿಬ್ಬರ ಮನಃಸ್ಥಿತಿಯನ್ನು ಕಂಡು ರುಕ್ಮಿಣಿಗೂ ಚಿಂತೆಯಾಗಿ, ಮುಖದಲ್ಲಿ ಖಿನ್ನತೆ ಕಾಣಿಸಿಕೊಳ್ಳುತ್ತದೆ.

ಹುಸಿನಗೆ ಬೀರಿ, ಶ್ರೀಕೃಷ್ಣ, ಅವಳಿಗೆ ಕುಳ್ಳಿರುವಂತೆ ಸಂಜ್ಞೆ ಮಾಡುತ್ತಾನೆ. ಶ್ರೀಕೃಷ್ಣನ ಪಾದಗಳ ಬಳಿ ಅವಳು ಕುಳಿತಾಗ, ಪ್ರಭು ಉದ್ಧವನನ್ನು ನೋಡಿ, "ನಿನ್ನ ಪ್ರಶ್ನೆಗಳೆಲ್ಲ ಮುಗಿದವೇ?" ಎಂದು ಕೇಳುತ್ತಾನೆ.

ಶ್ರೀಕೃಷ್ಣ ಮಾಯೆಯಿಂದ, ರಾತ್ರಿ ರುಕ್ಮಿಣಿ ಕೇಳಿದ್ದನ್ನೇ ಆಗ ಉದ್ಧವನೂ ಹೀಗೆ ಮತ್ತೆ ಕೇಳುತ್ತಾನೆ!

* * * *

ಉದ್ಧವ: "ಪ್ರಭು! ಇದನ್ನು ನೀನು ಹುಡುಗಾಟಿಕೆಯ ಪ್ರಶ್ನೆ ಎಂದು ಭಾವಿಸಿದರೂ ಸರಿ! ವೇದಾಂತವನ್ನರಿತ ಜ್ಞಾನಿ ಕೇಳಬಾರದ ಪ್ರಶ್ನೆ ಇದು ಆದರೂ ಸಂಸಾರದ ಮಾಯೆಯಲ್ಲಿ ಸಿಕ್ಕ ಜ್ಞಾನಿಯನ್ನೂ ಒಂದಿಲ್ಲೊಮ್ಮೆಯಾದರೂ ಕಾಡುವ ಪ್ರಶ್ನೆ ಇದು! ಜಗದೀಶ್ವರನಾದ ನೀನಲ್ಲದೆ ಬೇರಾರೂ ಇದನ್ನು ಸಮರ್ಪಕವಾಗಿ ಉತ್ತರಿಸಲಾರರು! ಕೇಳೆಂದರೆ ಕೇಳುತ್ತೇನೆ."

ಶ್ರೀಕೃಷ್ಣ: "ಇಷ್ಟು ಪೀಠಿಕೆ ಏತಕ್ಕೆ? ಕೇಳಿಯೇ ಬಿಡು! ನೈಜ ಜಿಜ್ಞಾಸೆಯಿಂದ ಕೇಳಿದ ಯಾವ ಪ್ರಶ್ನೆಯೂ ಉತ್ತರಾರ್ಹವೇ ಆಗುತ್ತದೆ"

ಉದ್ಧವ: "ಈಶ್ವರನು ಪ್ರತಿಯೊಂದು ಜೀವಜಾತಕ್ಕೂ ಜನ್ಮಕ್ಕೊಂದು ಅರ್ಥವನ್ನಿಟ್ಟೇ ಸೃಷ್ಟಿಸುತ್ತಾನೆ ಎಂಬ ಒಂದು ಅನಾದಿ ವಾದವಿದೆಯಷ್ಟೆ! ಆ ಅರ್ಥವನ್ನು ಸಾಧಿಸದವರಂತೂ ಸಂಸಾರದಿಂದ ನಿರ್ಗಮಿಸಲು ಅರ್ಹರಾಗುತ್ತಾರೆ. ಹಾಗೊಂದು ಅರ್ಥವಿದ್ದರೆ, ಅದನ್ನು ಸಾಧಿಸದವರಿಗೆ ಆ ಅರ್ಥವು ತಿಳಿಯದೆಯೇ ಹೋಗುವುದೇಕೆ? ಭೂಮಿಯ ಮೇಲಿರುವ ಹಕ್ಕನ್ನು ಆಗ ಅವರು ಹೇಗೆ ಕಳೆದುಕೊಳ್ಳುವುದೇಕೆ? ಆಗ ಕಾಲಪುರುಷ ನಿರ್ದಾಕ್ಷಿಣ್ಯವಾಗಿ ಇವರನ್ನೂ ಹೊರಡಿಸಿಯೇ ಬಿಡುವುದೇಕೆ? ಅವರು ಏಕೆ ಹುಟ್ಟಿದರೆಂಬುದನ್ನು ಅವರಿಗೆ ತಿಳಿಸಿ ಹೇಳಿ, ಆ ಅರ್ಥವನ್ನು ಸಾಧಿಸುವುದಕ್ಕೆ ಇನ್ನಷ್ಟು ಕಾಲಾವಕಾಶವನ್ನು ಕೊಟ್ಟು, ಅವರನ್ನು ತಿದ್ದಿ, ಪರಿಪೂರ್ಣರನ್ನಾಗಿ ಮಾಡಿ, ಜೀವನವನ್ನೇ ಮಂಗಳಮಯವನ್ನಾಗಿ ಮುಗಿಸುವುದನ್ನು ಬಿಟ್ಟು ದೇವರು ಈ ಜೀವನವನ್ನೇ ದೇವಾಸುರ ಸಂಗ್ರಾಮವನ್ನಾಗಿ ಏಕೆ ಮಾಡಬೇಕು? ಸಂಸಾರದ ಮಾಯೆ ಬೀಸುವುದೇಕೆ? ಕೂಡುವಿಕೆ, ಅಗಲಿಕೆಗಳ ಸಂಕಟ ಏಕೆ? ಇದೆಲ್ಲ ಲೀಲೆ ಎಂಬುವರ ಮಾತನ್ನು ಮನ ಒಪ್ಪದಾದರೆ, ಪರಿಹಾರವೇನು?"

ಶ್ರೀಕೃಷ್ಣ ಮೌನವಾಗಿ ಪ್ರಶ್ನೆಯನ್ನು ಆಲಿಸಿದ! ಕೆಲಕ್ಷಣ ಮೌನವಾಗಿದ್ದು ದಿಢೀರನೆ ಗಹಗಹಿಸಿ ನಕ್ಕ! ಆ ನಗೆಯಲ್ಲಿ ಅರಮನೆಯ ಮಾಳಿಗೆಯೂ ಛಾವಣಿಯೂ ರಣರಣಿಸಿ ಪ್ರತಿಧ್ವನಿಗೈದವು! ತನ್ನ ಮುಗ್ಧತೆಗೆ ನಾಚಿಕೆಯಾಗಿ ಉದ್ಧವನೂ ಮಂದಹಾಸ ಬೀರಿ ತಲೆತಗ್ಗಿಸಿದ. ಬಹುಕಾಲ ಕೇಳಿರದ ಆ ಮೋಹಕ ನಗೆಯ ಧ್ವನಿಯಿಂದ ಪುಳಕಿತಳಾಗಿ ರುಕ್ಮಿಣಿಯೂ ನಗುವಿನ ಮುದ್ರೆಯನ್ನು ಮುಖದಲ್ಲಿ ಬೀರಿದಳು!

ನಗೆಯ ಕೋಲಾಹಲ ಕೇಳಿ ಚೇಟಿಯರು ಹತ್ತಿರ ಬಂದು, ತಮ್ಮ ಅವಶ್ಯಕತೆ ಇದೆಯೇ ಎಂಬಂತೆ ನೋಡಿದರು. ಶ್ರೀಕೃಷ್ಣ ಕೈಯ್ಯಾಡಿಸಿ ಅವರನ್ನು ಕಳುಹಿಸಿದ.

ಶ್ರೀಕೃಷ್ಣ ರುಕ್ಮಿಣಿಯ ಮುಖ ನೋಡಿ "ಇದೇ ಅಲ್ಲವೆ, ರಾತ್ರಿ ನೀನು ಕೇಳಿದ ಪ್ರಶ್ನೆ?" ಎಂಬಂತೆ ಇಂಗಿತ ತೋಡಿಕೊಂಡ. ಮರುಸ್ಮಿತದಲ್ಲಿ ದೇವಿ ಅದನ್ನನುಮೋದಿಸಿದಳು. ಶ್ರೀಕೃಷ್ಣ ಆರಂಭಿಸಿದ:

ಶ್ರೀಕೃಷ್ಣ: "ಉದ್ಧವ! ಇದನ್ನೆಲ್ಲ ತಿಳಿದಿರುವೆಯೆಂದಲ್ಲವೇ, ನಿನಗೆ ನಾನು ಬಂಧಮೋಕ್ಷೋಪಾಯವಾದ ಭಕ್ತಿಮಾರ್ಗದ ಸೋಪಾನಗಳನ್ನೂ, ಭಕ್ತಿಯೋಗದ ರಹಸ್ಯವನ್ನೂ ಉಪದೇಶಿಸಿದುದು! ಇರಲಿ, ಬಿಡು! ಅರ್ಜುನನಿಗಿಂತ ನೀನೇನೂ ಹಿಂದೆ ಬೀಳಲಿಲ್ಲ! ಮುಂದೆ ಮುಂದೆ ಹೋಗುತ್ತಾ ಹಿಂದೆ ಹಿಂದೆ ಉತ್ತರಿಸಿದ ಪ್ರಶ್ನೆಗಳನ್ನೇ ಮತ್ತೆ ಮತ್ತೆ ಕೇಳುವುದು ಕೆಲವು

ಶಿಷ್ಯರ ರೀತಿ!! ಕೇಳಿದ್ದನ್ನು ದೃಢಪಡಿಸಿಕೊಳ್ಳಲು ಕೇಳುತ್ತಾರೋ, ಅಥವಾ ಅರ್ಥವಾಗದೆಯೇ ಕೇಳುತ್ತಾರೊ, ಬೇರೊಬ್ಬರ ಸಲುವಾಗಿ ಕೇಳುತ್ತಾರೋ, ಅಂತೂ ಕೇಳುತ್ತಿರುವುದೇ ಸೋಜಿಗ!"

ಉದ್ಧವ: "ಇದೂ ನಿನ್ನ ಮಾಯೆಯೇ ಅಲ್ಲವೆ, ಸ್ವಾಮಿ!"

ಶ್ರೀಕೃಷ್ಣ: "ಯಾರ ಮಾಯೆಯೋ, ಯಾರು ಹೇಳಬಲ್ಲರು? ತನಗೆ ಅರ್ಥವಾಗದುದನ್ನೆಲ್ಲ ದೇವರ ಮಾಯೆ ಎಂದು ಬಿಡುವುದೇ ಮನುಷ್ಯರ ರೀತಿ!... ಇರಲಿ; ನಿನ್ನ ಪ್ರಶ್ನೆಗಳಲ್ಲಿ ಅನೇಕ ಉಪಪ್ರಶ್ನೆಗಳಡಗಿವೆ. ನಿನಗೆ ತೃಪ್ತಿಯಾಗುವುದೋ ಇಲ್ಲವೋ ಕಾಣೆ, ನಾನಂತೂ ಉತ್ತರಿಸುತ್ತೇನೆ. ತಿಳಿಯದಾದರೆ ಅಲ್ಲೇ ಕೇಳು... ಕೊನೆಯ ಪ್ರಶ್ನೆಗೆ ಉತ್ತರ ಕೇಳು, ಮೊದಲು: ಎರಡು ಕಲ್ಲು ತುಂಡುಗಳನ್ನೋ, ಕಟ್ಟಿಗೆಯ ತುಂಡುಗಳನ್ನೋ ಒಟ್ಟಿಗೆ ಕೂಡಿಸಿದರೆ, ಅವಕ್ಕೆ ಕೂಡಿದ ಸಂತೋ...ವಾಗಲಿ, ಬಿಡಿಸಿದರೆ ಅಗಲಿದ ಸಂಕಟವಾಗಲಿ ಆಗುವುದಿಲ್ಲ! ಅಲ್ಲವೇ? ಏಕೆಂದರೆ, ಅವಕ್ಕೆ ಪ್ರತ್ಯಕ್-ಪರಾಕ್ ಅನುಭವ ಇಲ್ಲ. ಅರಿವಿಲ್ಲದ ಅನುಭವ ಬೇರೆ, ಅರಿವಿಗೆ ಬರುವ ಅನುಭವ ಬೇರೆ! ಹಾಗೆಂದರೆ ತಿಳಿಯುವುದೇ ನೋಡು?" ಉದ್ಧವ ಮುಗ್ಧನಾಗಿ ಚಿಂತಿಸುತ್ತಾನೆ.

ಶ್ರೀಕೃಷ್ಣ: "ಚೈತನ್ಯವಿಲ್ಲದೆ ಅರಿವಿಲ್ಲ; ಅರಿವಿಲ್ಲದ ಅನುಭವದಿಂದ ಲಾಭ-ನಷ್ಟ, ಸುಖ-ದುಃಖ, ನೋವು-ನಲಿವು ಇರುವುದಿಲ್ಲ. ಈ ಅವಸ್ಥೆಯನ್ನು ನಾನು ಯೋಗ ಎನ್ನಲಿಲ್ಲ! ಅಚೇತನ ವಸ್ತುವಿಗೆ ಅನಿವಾರ್ಯವಾಗಿ, ಅಪ್ರಾರ್ಥಿತವಾಗಿ ಬರುವ, ಅದೇ ನಿತ್ಯಧರ್ಮವಾದ ಈ ಸ್ವಭಾವ, ಚೈತನ್ಯ ವಸ್ತುವಿಗೆ ಮರಣ ಪ್ರಾಯವಾದುದು! ಸ್ವರೂಪನಾಶ ಅದು! ಚೈತನ್ಯವುಳ್ಳ ವಸ್ತುವಿಗೆ ಅರಿವು ಅನಿವಾರ್ಯ. ಅಂದ ಮೇಲೆ ಅರಿವಿನಿಂದ ಬಂದ ಅನುಭವವೂ ಅನಿವಾರ್ಯ. ಆ ಅನುಭವ ದ್ವಂದ್ವಗಳ ರೂಪದಲ್ಲೇ ಬರುತ್ತದೆ! ಸಮುದ್ರದಲೆಯ ಮೇಲೆ ಕುಳಿತವನು ಒಮ್ಮೆ ಏರುವುದೂ, ಮತ್ತೊಮ್ಮೆ ಬೀಳುವುದೂ ತಪ್ಪದಂತೆ, ಆ ಸಮುದ್ರದಲ್ಲಿ, ಎಲ್ಲೋ ಆಳದಲ್ಲಿ ಸಿಕ್ಕು ಉಸಿರುಕಟ್ಟಿ ಸಾಯುವಂತೆ ಆಗುತ್ತದೆ, ಈ ದ್ವಂದ್ವವಾತಾಹತನಾದವನ ಪಾಡು! ಚೇತನನು ಚೈತನ್ಯವನ್ನೂ ಉಳಿಸಿಕೊಳ್ಳಬೇಕು, ಅರಿವೂ ಇರಬೇಕು, ಅದೂ ಸುಖಮಯವೂ ಇರಬೇಕೆನ್ನುವುದಾದರೆ, ಅವನು ದ್ವಂದ್ವಗಳ ಆಚೆ ಇರುವ, ಅವಿಕಾರ್ಯವಾದ ನಿತ್ಯವಾದ ಒಂದು ವಸ್ತುವಿನ ಅನುಭವದಲ್ಲೇ ಸದಾ ಇರಬೇಕು. ಅದು ಅವನಿಗೆ ಸಾಧ್ಯ. ಅದೇ ಚೈತನ್ಯದ ಗುರಿ, ಪುರುಷಾರ್ಥ. ದ್ವಂದ್ವದಲ್ಲಿ ಸಿಕ್ಕು ಸಾಯುವುದೇ ಸಂಸಾರ; ಅಚೇತನದಂತೆ ಇರುವುದು ಸ್ವರೂಪ ನಾಶ! ಇವೆರಡೂ ಮೃತ್ಯುಗಳನ್ನೂ ಗೆದ್ದರೆ ಆಗ ಯಾವ ಸಂಕಟವೂ ಇಲ್ಲ. ಈ ಮೃತ್ಯು ರೂಪಗಳನ್ನೇ ಶ್ರುತಿ ಅಂಧಂತಮಸ್ಸು ಎಂದಿತ್ತು! ಅವಿದ್ಯೆ ಎಂದು ಕರೆದಿದ್ದು! ಮೃತ್ಯು ಎಂದು ನಿರ್ದೇಶಿಸಿತು."

ಉದ್ಧವ: "ಎಂದರೆ, ಚೇತನನು ತನ್ನ ಅನುಭವದ ವಿಷಯವನ್ನು ಸಂಸಾರದೊಳಗಿನ ವಸ್ತುಗಳ ಬದಲಾಗಿ, ಸಂಸಾರದಾಚೆಯ ನಿತ್ಯಾನಂದ ವಸ್ತುವಿನ ಬಗೆಯನ್ನಾಗಿಸಿಕೊಂಡರೆ, ಈ ಮೃತ್ಯು ತೀರುವುದೇ?"

ಶ್ರೀಕೃಷ್ಣ: "ಖಂಡಿತ! ನಿನಗೆ ಭಕ್ತಿಯೋಗ ರಹಸ್ಯವನ್ನು ಉಪದೇಶಿಸಿದ್ದು ಇದಕ್ಕೇ ಮಾರ್ಗವನ್ನಾಗಿ. ನಾರದಾದಿಗಳು ಇದನ್ನೇ ನಿವೃತ್ತಿ ಮಾರ್ಗ ಎನ್ನುವರು. ಸಂಸಾರದಾಚೆಯೇ ಇರುವ ಸನಕಸನಂದನಾದಿ ಕುಮಾರರಿಗಿಂತ, ಸಂಸಾರದಲ್ಲೇ ಇರುವ ಚೇತನರು ಇದನ್ನು ಸಾಧಿಸುವಲ್ಲಿ ಹೆಚ್ಚಳ ಉಂಟು. ನನ್ನನ್ನು ಸೇರಲು ಇದು ನೇರ, ಚಿಕ್ಕ, ಚೊಕ್ಕ ದಾರಿ... ಇನ್ನು ಎರಡನೇ ಪ್ರಶ್ನೆಗೆ ಉತ್ತರ ಕೇಳು. ಪ್ರತಿಯೊಂದು ಜೀವಜಾತದ ಜನ್ಮಕ್ಕೂ ಅರ್ಥವಿದೆಯೇ? ಎಂಬುದು ಪ್ರಶ್ನೆ. ಗಮನವಾಗಿ ಕೇಳು. ಕಾಲದೇಶಗಳು ಒಂದನ್ನೊಂದು ಎಲ್ಲಿ ಸಂಧಿಸುವುವೋ ಆ ಬಿಂದುವಿಗೆ, ಆ ಕಾಲಕ್ಕೂ, ಅದೇ ದೇಶಕ್ಕೂ ಮಾತ್ರವೇ ಹೊಂದಿಕೊಂಡಂತೆ ಒಂದು ಗುರಿಯು ಕಾಲಪ್ರವಾಹದಲ್ಲಿ ತೋರಿಕೊಂಡೇ ತೀರಬೇಕಾದುದೇ ಕಾಲದ ಧರ್ಮ! ಅರ್ಥವಾಯಿತೇ, ಯೋಚಿಸು! ಇಲ್ಲವಾದರೆ ಕಾಲ ದೇಶಗಳ 'ಸಂಧಿ' ಎಂಬ ಮಾತಿಗೆ ಅರ್ಥವಿಲ್ಲ. ಉದಾಹರಣೆಗೆ ಒಂದು ರಥವನ್ನು ನೋಡು. ಎರಡು ಗಾಲಿಗಳ

ಮೇಲೆ ಓಡುವ ಈ ವಸ್ತುವಿಗೆ ಏನರ್ಥ? ಏನು ಪ್ರಯೋಜನ? ಜನರನ್ನೋ ವಸ್ತುಗಳನ್ನೋ ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸುವುದು ಅಲ್ಲವೆ? ಅದರ ರೂಪ, ನಾಮ, ಆಕಾರಗಳೆಲ್ಲ ಕಾಲದೇಶಗಳಲ್ಲಿ ಈ ಪ್ರಯೋಜನಕ್ಕಾಗಿಯೇ ಉಂಟಾದವು. ನೀರಿನಂತೆ ಪ್ರವಹಿಸುವುದೋ, ಗಾಳಿಯಂತೆ ವ್ಯಾಪಿಸಿರುವುದೋ ಅದರ ಧರ್ಮವೂ, ಸ್ವರೂಪವೂ, ಪ್ರಯೋಜನವೂ, ಅರ್ಥವೂ ಅಲ್ಲ! ಮನುಷ್ಯ ಶರೀರದಲ್ಲೇ ಇರುವ ಇಂದ್ರಿಯಾದಿಗಳನ್ನು ನೋಡು. ಒಂದರರ್ಥ ಇನ್ನೊಂದಕ್ಕಿರುವುದಿಲ್ಲ! ಮೂಸುವುದು ಮೂಗಿನ ಧರ್ಮ, ಮೂಗಿನ ಅರ್ಥ! ರುಚಿ ನೋಡುವುದು ನಾಲಗೆಯ ಅರ್ಥ! ಕರ್ಮೇಂದ್ರಿಯಗಳಿಗೂ ಹಾಗೇ. ನಡೆಯುವುದು ಕಾಲಿನ ಅರ್ಥ; ಬರೆಯುವುದು, ಅರ್ಚಿಸುವುದು ಇತ್ಯಾದಿ ಕೈಯಿನ ಅರ್ಥ. ಇಂದ್ರಿಯ ಸಂಘಾತಕ್ಕೆ, ಶರೀರಕ್ಕೆ, ಕರ್ಮಧರ್ಮ ಸಂಯೋಗದಿಂದಾದ, ಪ್ರಾಚೀನ ಹಿನ್ನೆಲೆಯೂ ಇರುತ್ತದೆ. ಭವಿತವ್ಯಾರ್ಥವೂ ಇರುತ್ತದೆ; ಹಳೆಯ ಕರ್ಮವನ್ನು ಇದು ತೊಳೆಯಲೂ ಬಹುದು; ಹೊಸದನ್ನು ಸಂಪಾದಿಸಲೂ ಬಹುದು; ಕರ್ಮಗಳನ್ನು ಕ್ಷಯಿಸಿಕೊಂಡು, ಮುಕ್ತಿಯನ್ನು ತನ್ನಲ್ಲಿನ ಚೇತನನಿಗೆ ಸಾಧ್ಯಮಾಡಿ, ಈಶ್ವರನಲ್ಲಿಗೆ ಹೋಗಲು ಸಾಧನವೂ ಆಗಬಲ್ಲದು."

ಉದ್ಧವ: "ಇದೆಲ್ಲ ಸರಿಯಾಯಿತು ಸ್ವಾಮಿ. ತುಂಬ ಚೆನ್ನಾಗಿ ಪ್ರತಿಪಾದಿಸಿ, ಅಜ್ಞರಿಗೂ ತಿಳಿಯುವಂತೆ ಹೇಳಿದೆ. ಆದರೆ, ಇಷ್ಟು ಮುಖ್ಯ ಪ್ರಮೇಯವು ಚೇತನರಿಗೆ ತಿಳಿಯದೆಯೇ ಅವರು ವ್ಯರ್ಥವಾಗಿ ಸಾಯುವರೇಕೆ?"

ಶ್ರೀಕೃಷ್ಣ: "ನೀನೇ, ನಿನಗರಿಯದೆಯೇ ಉತ್ತರಿಸಿದೆ! ನೋಡು!! 'ವ್ಯರ್ಥ' ಎಂದೆ! ಏನರ್ಥ? 'ವಿಗತ ಅರ್ಥ' ಅರ್ಥ ಕಳಕೊಂಡದ್ದು ಯಾವುದೋ ಅದೇ ವ್ಯರ್ಥ! ಉದಾರಹಣೆಗೆ: ಕಾಲಿದ್ದವನು ಒಮ್ಮೆಯೂ ನಡೆಯದೆಯೇ ಹೋದರೆ ಅದು ವ್ಯರ್ಥ. ಕಣ್ಣಿದ್ದವನು ನೋಡದೆಯೇ ಹೋದರೆ ಅದೂ ವ್ಯರ್ಥ. ಕಾಲದೇಶ ಸಂಗಮದಲ್ಲಿ, ನಾಮರೂಪಾಕಾರಗಳನ್ನು ಪಡೆದು ಹುಟ್ಟಿದ ವಸ್ತುವು ಅವುಗಳನ್ನು ಸದುಪಯೋಗ ಮಾಡದೆಯೇ ನಾಶವಾದರೆ ಅದು ಮಹಾವ್ಯರ್ಥ! ಹಾಗೆ ಅವನ್ನು ವ್ಯರ್ಥ ಮಾಡಿಸುವ ಶಕ್ತಿ, ಪ್ರಚೋದನೆ, ಚೇತನನಿಗೆ ಎಲ್ಲಿಯದು?... ಉತ್ತರ ಕೇಳು. ನೀನು ಜನ್ಮವನ್ನು ಸಾರ್ಥಕ ಮಾಡಿಕೊಳ್ಳುವೆಯೋ ಬಿಡುವೆಯೋ, ದೇವರಂತೂ ನಿನಗೆ ನಿಯತವಾದ ಆಯುಷ್ಯವನ್ನು ಕೊಡುತ್ತಾನೆ. ಆ ನಿಯತಿ ನಿನಗೆ ತಿಳಿಯಬೇಕೆಂಬುದೇನಿಲ್ಲ! ನಿಯತಿಯಂತೂ ಉಂಟು. ಅಚೇತನಕ್ಕಿಲ್ಲದ ಒಂದು ವಿಶೇಷವನ್ನು ಚೇತನ ವಸ್ತುವಿಗೆ ದೇವರು ಅನುಗ್ರಹಿಸಿದ್ದಾನೆ. ಅದೇ ಸ್ವಾತಂತ್ರ್ಯ! ಯಾವುದೇ ಅನುಭವವಾಗುತ್ತಿರುವ ಅರಿವೆಂಬುದು ಒಂದು ವಿಶೇಷವಾದರೆ, ಈ ಕರ್ಮಸ್ವಾತಂತ್ರ್ಯ ಇನ್ನೊಂದು! ಅದು ಪರಿಪೂರ್ಣವಲ್ಲವೆನ್ನೋಣ ಆದರೆ ಅದು ಉಂಟು..."

ಉದ್ಧವ: "ಅಂದರೆ ಚೇತನರಿಗೆ ಬದುಕಿನ ಅರ್ಥ ತಿಳಿಯಲು, ತಿಳಿಯದೇ ಇರಲು, ಗುರಿ ಸಾಧಿಸಲು, ಬಿಡಲು, ಈ ಸ್ವಾತಂತ್ರ್ಯವೇ ಕಾರಣವಾಗುವುದಾದರೆ, ಇದನ್ನು ಕೊಟ್ಟ ಈಶ್ವರನ ತಂತ್ರ ಏನೆಂದೇ ತಿಳಿಯುವುದಿಲ್ಲವಲ್ಲ? ಚೇತನನ ಆತ್ಮನಾಶಕ್ಕೆ ಉಪಯುಕ್ತವಾಗುವ ಇದನ್ನು ಕೊಟ್ಟನೇಕೆ?"

ಶ್ರೀಕೃಷ್ಣ: "ಇಲ್ಲಿ ನೋಡು, ಈ ಬಾಣವನ್ನು ಇಕೋ ಈ ಬಿಲ್ಲಿನಲ್ಲಿ ಹೂಡಿ ಪ್ರಯೋಗಿಸುತ್ತೇನೆಂದು ಇಟ್ಟುಕೋ! ಬಿಲ್ಲಿನಿಂದ ಮುಕ್ತವಾದ ಬಾಣಕ್ಕೆ 'ಎಂಥವನ ಕೈಯ್ಯಿಂದ, ಎಂಥ ಬಿಲ್ಲಿನಿಂದ ಹೊರಬಂದೆ!' ಎಂಬ ಅರಿವು ಇಲ್ಲದಿರುವಂತೆ, 'ಎದುರಿಗಿರುವವನ್ನು ಕೊಲ್ಲಬೇಕೋ ಬಿಡಬೇಕೋ' ಎಂಬ ಸ್ವಾತಂತ್ರ್ಯವೂ ಇರುವುದಿಲ್ಲ! ಕೇವಲ ಭೌತಿಕ ನಿಯಮಕ್ಕೆ ಒಳಪಟ್ಟ ವಸ್ತು ಅದು. ಚೇತನನಿಗೆ ಆಗಲೇ ಹೇಳಿದ ಎರಡು ವಿಶೇಷಗಳಿರುವುದರಿಂದ, ಈ ನಿಮಿತ್ತ ಬರುವ ಸುಖವೂ, ಹೊಣೆಗಾರಿಕೆಯೂ, ಗುರಿ ಸಾಧಿಸಿದ ತೃಪ್ತಿಯೂ ಇರುತ್ತದೆ. ಇದು ಭಾಗ್ಯವಲ್ಲವೆ? ಈಗ ನಿನ್ನನ್ನು ಬದರಿಕಾಶ್ರಮಕ್ಕೆ ಹೋಗಿರು ಎಂದೆ! ನೀನು ಹಿಗ್ಗುತ್ತೀಯೆ! ಇಲ್ಲಿಂದ ಅಲ್ಲಿಗೆ ಒಂದು ಕಲ್ಲನ್ನು ಎಸೆದಿದ್ದರೆ ಆ ಹಿಗ್ಗು ಅದಕ್ಕಿರುತ್ತಿತ್ತೆ! ಸ್ವಾತಂತ್ರ್ಯದಿಂದ ಲಾಭವೇನೆಂದರೆ, ಸರಿಯಾಗಿ ಉಪಯೋಗಿಸಿದರೆ, ಅವಿವೇಕ

ನಿವೃತ್ತಿಯೂ, ಅಂತರ್ಜೀವನದ ವಿಕಾಸವೂ, ಜ್ಞಾನ ವಿಕಾಸವೂ, ಮನಸ್ಸೆಂಬುದರ ಸದುಪಯೋಗವೂ ಸಾಧ್ಯ."

ಉದ್ಧವ: "ಪ್ರಭು!... ಹಾಗಾದರೆ, ಸ್ವಾತಂತ್ರ್ಯದ ದುರುಪಯೋಗದ ಅವಕಾಶವನ್ನೂ ದೇವರು ಕಲ್ಪಿಸಿ ಉಳಿಸಿದನೇಕೆ?"

ಶ್ರೀಕೃಷ್ಣ: "ಬೃಹಸ್ಪತಿ ಶಿಷ್ಯನೊಬ್ಬ ಈ ಪ್ರಶ್ನೆಯನ್ನು ಕೇಳುತ್ತಿದ್ದಾನೆಂಬುದೇ ನನಗೆ ಪರಮಾಶ್ಚರ್ಯವಾಗಿದೆ! ಅಯ್ಯಾ ಮಿತ್ರನೇ! ಕೇಳು. ಜೀವಿಗಳೆಲ್ಲ ಈಗ ಇಲ್ಲಿರುವುದೇ ಕಾಲಕರ್ಮಕೃತ ದೇಶದಲ್ಲಿ. ಪರಿಪೂರ್ಣರಿಗೆ ಇಲ್ಲಿ ಕೆಲಸವಿಲ್ಲ. ಪ್ರತಿಯೊಬ್ಬ ಚೇತನನೂ ಸ್ವಾತಂತ್ರ್ಯದ ದುರುಪಯೋಗಕ್ಕೆ ಅವಕಾಶವೇ ಇಲ್ಲದಂತೆ ಇರಬೇಕಾದರೆ, (೧) ಅವನು ಪರಿಪೂರ್ಣನಾಗಿಯಾದರೂ ಇರಬೇಕು. (೨) ಇಲ್ಲವಾದರೆ ಅವನಿಗೆ ಸ್ವಾತಂತ್ರ್ಯವೇ ಇರಬಾರದು! ಪರಿಪೂರ್ಣತೆ ಇದ್ದಲ್ಲಿ ಸ್ವಾತಂತ್ರ್ಯಕ್ಕೇನರ್ಥ? ಕಾಲದೇಶ ಲೋಕದಲ್ಲಿ ಏನಿದ್ದರೂ ಸಾಧನೆ ನಡೆಸುವುದಷ್ಟೇ ಶಕ್ಯ! ಸಿದ್ಧರಿಗೆ ಇದು ಲೋಕವಲ್ಲ. ಆದರೆ ಇಲ್ಲಿ ಇದ್ದೇವೆ! ಏನರ್ಥ!! ಅಪರಿಪೂರ್ಣರಾಗಿದ್ದೇವೆಂದೇ ಅಲ್ಲವೆ? ಅಂದಮೇಲೆ, ಇಲ್ಲಿಗೆ ಬಂದದ್ದು ಪರಿಪೂರ್ಣತೆ ಸಾಧಿಸಲೆಂದೇ ತಾನೇ? 'ಅಪರಿಪೂರ್ಣತೆಯಿಂದ ಪೂರ್ಣತೆಯೆಡೆಗೆ ನನ್ನನ್ನು ಸಾಧಿಸು, ಸಾಗಿಸು" ಎಂಬ ವೈದಿಕವಾಕ್ಯದ, ಅರ್ಥವೇನಯ್ಯ? ಕಾಲದೇಶಗಳಿಲ್ಲದ, ಅವ್ಯವಹಾರ್ಯ ಲೋಕವೊಂದರಲ್ಲಿ ಈ ಶ್ರುತಿಗೆ- 'ಅಸತೋ ಮಾ ಸದ್ಗಮಯ' ಎಂಬುದಕ್ಕೆ-ಅರ್ಥವಿದೆಯೆ? ಮೇಲಾಗಿ, ನಿನ್ನ ಇನ್ನೊಂದು ಆ ಕೊನೆಯ ಪ್ರಶ್ನೆಗೆ ಉತ್ತರಿಸುತ್ತೇನೆ, ಕೇಳು..."

ಉದ್ಧವ: "ಈಶ್ವರ ಲೀಲೆಗೇನರ್ಥ?"

ಶ್ರೀಕೃಷ್ಣ: "ಅದನ್ನೇ ವಿವರಿಸುವೆ, ಕೇಳು. ಜೀವನವು ಮಂಗಳಮಯವಾಗಿ ಮುಗಿಯಬೇಕೆಂಬುದೇ ಈಶ್ವರನ ಸಂಕಲ್ಪ. ಆದರೆ ಅವನು ಅದನ್ನು ಈ ಕಾಲಕರ್ಮ ಕೃತ ಲೋಕದಲ್ಲಿ ಬಲಾತ್ಕಾರವಾಗಿ ಸಾಧಿಸುವುದಿಲ್ಲ! ಬಲಾತ್ಕಾರ ತಂದರೆ ಲೀಲೆ ಇರುವುದಿಲ್ಲ!! ಆಗಲೇ ಹೇಳಿದೆ, ಇದು ದ್ವಂದ್ವಗಳ ಲೋಕ ಎಂದು. ಚೇತನರಿಗೆ ಸ್ವಾತಂತ್ರ್ಯ ಕೊಟ್ಟು, ಮುಕ್ತಿ ಅಥವಾ ಬಂಧನದತ್ತ ಹೋಗುವ ಅವಕಾಶವನ್ನೂ ಇತ್ತು, ಅವರ ಕೈಲೇ ಅವರನ್ನು, ಕರ್ಮಫಲಕ್ಷಯಿಸುವ ಮೂಲಕ, ಉಪಾಸನೆ ಮಾಡಿಸುವ ಮೂಲಕ, ತಿದ್ದಿ, ಜನ್ಮಜನ್ಮಾಂತರಗಳ ದೀರ್ಘ ಅವಕಾಶ ಕೊಟ್ಟು, ತಾನು ಉದ್ದಕ್ಕೂ ಸಂರಕ್ಷಕನಾಗಿ ಅಂತರ್ಯಾಮಿಯಾಗಿ ನಿಂತು, ಪಾಪ-ಪುಣ್ಯ ಫಲಗಳನ್ನೀಯುತ್ತಾ, ಅವುಗಳ ಲೆಖ್ಖ ಇಟ್ಟು, ಜಗದೀಶ್ವರ ಕಾಲ ಕಾಯುತ್ತಾನೆ."

ಉದ್ಧವ: "ಈ ದೇವಾಸುರ ಸಂಗ್ರಾಮದ ಅರ್ಥ?"

ಶ್ರೀಕೃಷ್ಣ: "ಜನ್ಮಜನ್ಮಾಂತರಗಳಲ್ಲಿ ಪುರುಷಾರ್ಥ ಜ್ಞಾನಭ್ರಷ್ಟರಾಗಿ, ಈಶ್ವರನನ್ನು ಮರೆತು, ಸತ್ವಗುಣವನ್ನು ಕ್ರಮೇಣ ಕಳೆದುಕೊಳ್ಳುತ್ತಾ, ಕೆಳಕೆಳಗಿನ ಅನುಭವ ಲೋಕಕ್ಕೆ ಹೋಗುತ್ತಾ, ಪಾಪಪುಣ್ಯ ಪ್ರಜ್ಞಾಶೂನ್ಯರಾಗಿ, ಪ್ರಾಣಿಗಳಿಗಿಂತ ಕಡೆಯಾದ ಜನ್ಮವನ್ನೆತ್ತುವವರು ಒಂದು ಬಗೆ. ಅದೇ ಜನ್ಮಜನ್ಮಾಂತರಗಳಲ್ಲಿ ವಿಶುದ್ಧರಾಗುತ್ತಾ, ಈಶ್ವರನ ಸಾಮೀಪ್ಯವನ್ನು ಸಾಧಿಸಿ, ಸತ್ವ ಪ್ರಧಾನರಾಗಿ, ಮೇಲು ಮೇಲಿನ ದಿವ್ಯಾನುಭವವನ್ನು ಪಡೆಯುತ್ತಾ, ಪಾಪಪುಣ್ಯಗಳೆಂಬ ಎರಡೂ ಕರ್ಮಫಲಗಳನ್ನೂ ಅಂಟದೆ, ಈಶ್ವರಾರ್ಪಿತ ಕರ್ಮಗಳನ್ನು ಮಾತ್ರ ಮಾಡುತ್ತಾ ನಿತ್ಯಸೂರಿಗಳಂತೆ ಬಾಳುವವರು ಇನ್ನೊಂದು ಬಗೆ! ಮುಕ್ತಿಯಾಗದ ಇಬ್ಬರೂ ಈ ಒಂದೇ ಲೋಕದಲ್ಲಿ ಬಾಳುವ ತನಕ, ಜೀವನ, ದೇವಾಸುರ ಸಂಗ್ರಾಮವಾಗದೇ ಇರಲು ಹೇಗೆ ಸಾಧ್ಯ? ಆಸುರೀ ಪ್ರವೃತ್ತಿಯವನಿಗೂ, ದೈವೀ ಪ್ರವೃತ್ತಿಯವನಿಗೂ ಜೀವನವೆಂಬುದು ಸಮಾನ ಅವಕಾಶವಾಗಿರುವುದು ಅನಿವಾರ್ಯ. ಅದೇ ಈಶ ಸಂಕಲ್ಪ! ಇದನ್ನೆಲ್ಲ ಅರ್ಜುನನಿಗೂ ಹೇಳಿದ್ದೆ! ನೀನೂ ಮತ್ತೆ ಕೇಳಿದೆ! ತಿಳಿಯಿತಲ್ಲ!"

ರುಕ್ಮಿಣಿಯ ಮುಖದಲ್ಲಿ ತನ್ನ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ದೊರೆತ ತೃಪ್ತಿಯ ನಿಮಿತ್ತ ಒಂದು ಮಂದಹಾಸ ಸೂಸಲಾರಂಭಿಸಿತು!

ಉದ್ಧವನಿಗೂ ತೃಪ್ತಿ ಆಗಿತ್ತು. ಪ್ರಶ್ನೋತ್ತರಗಳು ಮುಗಿದ ಮೇಲೆ, ಉದ್ಧವನಿಗೆ, ಮತ್ತೆ, ಶ್ರೀಕೃಷ್ಣನನ್ನು ಇನ್ನು ಶಾಶ್ವತವಾಗಿ ಅಗಲಿರಬೇಕಾದ, ದೂರದ ಬದರಿಕಾಶ್ರಮದಲ್ಲಿರಬೇಕಾದ ಅಪ್ಪಣೆಯ ನೆನಪಾಗಿ, ಮುಖ ಮತ್ತೆ ವ್ಯಗ್ರವಾಯಿತು!

ಶ್ರೀಕೃಷ್ಣ ಹೇಳಿದ: "ಉದ್ಧವ! ಚಿಂತಿಸಬೇಡ. ನೀನು ಈಗ ಹೋಗಲಿರುವ ಕ್ಷೇತ್ರದ ಪವಿತ್ರತೆ ವಾಚಾಮಗೋಚರ. ನನ್ನ ಸಖನಾಗಲು, ಸೇವಕನಾಗಲು, ವೇದಾತ್ಮನಾದ ಗರುಡದೇವ ತಪಸ್ಸು ಮಾಡಿ ಸಿದ್ಧಿಹೊಂದಿದ ಸ್ಥಳ ಅದು. ಕುಬೇರನಿಗೆ ದಿಕ್ಪಾಲಕತ್ವವನ್ನೂ, ಧನಾಧಿಪತಿತ್ವವನ್ನೂ ನಾನು ಅನುಗ್ರಹಿಸಿದುದೂ ಅಲ್ಲೇ. ನರನಾರಾಯಣ ರೂಪಿಯಾಗಿ ನಾನೇ ತಪಸ್ಸು ಮಾಡಿ, ಗುರುಶಿಷ್ಯ ರೂಪದಲ್ಲಿ ಶ್ರೀ ಅಷ್ಟಾಕ್ಷರ ಮಂತ್ರವನ್ನು ಲೋಕದಲ್ಲಿ ಪ್ರವರ್ತಿಸಿದ್ದೂ ಅಲ್ಲೇ! ಚಿರಂಜೀವಿಯಾದ ಹನುಮಂತ ಇನ್ನೂ ರಾಮಕಥೆ ಕೇಳುತ್ತಾ ಗಂಧರ್ವರೊಡನೆ ಹಾಡುತ್ತಾ ಕುಳಿತಿರುವುದೂ ಅದರ ಸಮೀಪದಲ್ಲೇ. ನನ್ನ ದಿವ್ಯಲೋಕಕ್ಕೆ ಮಹಾದ್ವಾರ ಇರುವುದೂ ಅಲ್ಲೇ! ನಿನಗೂ ನನಗೂ ಅಗಲಿಕೆ ಎಂದರೇನು?"

ಉದ್ಧವ ಕಣ್ಣೀರು ಒರೆಸಿಕೊಂಡು, ಎದ್ದು, ಪ್ರಣಾಮ ಮಾಡಿ ಹೊರಟ. ರುಕ್ಮಿಣೀದೇವಿ ಪ್ರಭುವನ್ನು ಕೇಳಿದಳು:

ರುಕ್ಮಿಣಿ: "ಪ್ರಭು! ಇವನನ್ನು ತಾವು ಅಗಲುವುದೆಂದರೇನು? ಯಾವ ಯಾತ್ರೆಗಾಗಿ ಅವನನ್ನು ಕಳುಹುತ್ತಿರುವಿರಿ?"

ಶ್ರೀಕೃಷ್ಣ: "ಅವನು ಬದರಿಕಾಶ್ರಮಕ್ಕೆ ಹೊರಟಿದ್ದಾನೆ. ನಾವೂ ಇಂದು ಸಂಜೆಯೋ, ನಾಳೆ ಬೆಳಿಗ್ಗೆಯೋ ಯಾತ್ರೆ ಹೊರಟಿದ್ದೇವಲ್ಲವೆ? ಯಾತ್ರೆ ದೀರ್ಘವೂ ಆಗಬಹುದು; ಬೇಗಲೂ ಮುಗಿಯಬಹುದು. ಮುಂದಾಗುವುದನ್ನು ಕಂಡವರಾರು? ಯಾತ್ರಾದಾನ ಎಂಬ ನಿಯಮವೊಂದಿದೆ ಅಲ್ಲವೆ? ದೇವಿ! ನಮ್ಮ ಸಂಪತ್ತಿನ ಬಹುಪಾಲನ್ನು ಶಿಷ್ಟರಾದ ಬ್ರಾಹ್ಮಣರಿಗೆ, ಸುವಾಸಿನಿಯರಿಗೆ ದಾನಮಾಡಿಬಿಡೋಣ. ಎಲ್ಲ ಸಿದ್ಧಮಾಡು. ಮೊದಲು ಗೋಸಂಪತ್ತು ವಿನಿಯೋಗವಾಗಲಿ."

ರುಕ್ಮಿಣಿಗೆ ಈ ಮಾತುಗಳ ದ್ವಂದ್ವಾರ್ಥ ಅರ್ಥವಾಗದೆ, ಪತಿಯ ಮುಖವನ್ನೇ ನಿಟ್ಟಿಸಿ ನೋಡಿದಳು. ಶ್ರೀಕೃಷ್ಣನ ಶ್ರೀಮುಖದ ಪ್ರಶಾಂತ ಮುದ್ರೆ ಒಂದು ಬಗೆಯಾಗಿ ಅವಳಿಗೆ ನೆಮ್ಮದಿ ತಂದು, ರಾಣೀವಾಸದತ್ತ ತೆರಳಿದಳು.

* * * * *

# ೭. ಮಹಾಪ್ರಸ್ಥಾನ

ದ್ವಾರಕೆಯ ಬ್ರಾಹ್ಮಣರಿಗೆ ದಾನದ ಸುಗ್ಗಿಯೋ ಸುಗ್ಗಿ! ಒಬ್ಬೊಬ್ಬರಿಗೂ ಅಪರಿಮಿತ ಗೋದಾನದೊಡನೆ ಪುಷ್ಕಳ ಹಿರಣ್ಯದಾನವೂ ಇತರ ದಾನಗಳೂ ಸಿಕ್ಕಿ, ಇಟ್ಟುಕೊಳ್ಳಲು ಜಾಗವಿಲ್ಲದೆ ದ್ವಾರಕೆಯ ಸುತ್ತಲ ಸಮೀಪದ ಗ್ರಾಮಗಳಿಗೆ, ತಮಗೆ ದಾನವಾಗಿ ಸಿಕ್ಕ ಹಳ್ಳಿಗಳಿಗೆ ನಿರಾಬಾಧವಾಗಿ ವಲಸೆ ಹೊರಟರು. ಇದನ್ನು ಕಣ್ಣಾರೆ ಕಂಡ ಶ್ರೀಕೃಷ್ಣ ಒಂದು ನೆಮ್ಮದಿಯ ನಿಟ್ಟುಸಿರಿಟ್ಟ!

ಯಾತ್ರೆ ಹೊರಟ ಯಾದವವೀರರು ಬಹುಕಾಲ ಹಿಂದಿರುಗಿ ಬರಲಾರರೆಂದು ಊರಿನ ಜೋಯಿಸರೂ, ಶಕುನಶಾಸ್ತ್ರ ತಿಳಿದವರೂ ಹೇಳಲಾರಂಭಿಸಿದ್ದರು! ಊರೇ ಸಮುದ್ರದಲ್ಲಿ ಮುಳುಗುವ ಭೀತಿಯಿದೆಯೆಂದೂ ಭವಿಷ್ಯ ನುಡಿದರು. ಭೀಕರ ಉತ್ಪಾತಗಳು ಬೇರೆ ತೋರಿಕೊಳ್ಳಲಾರಂಭಿಸಿದ್ದವು! "ಹೇಗಾದರಾಗಲಿ! ಊರಿಗೆ ಸುಭಿಕ್ಷ ಮತ್ತೆ ನೆಲೆಸಿದ ಮೇಲೆ ಬರೋಣ!" ಎನ್ನುತ್ತಾ ವಣಿಗ್ಜನರು ಕುದುರೆಗಳ ಮೇಲೂ ಒಂಟೆಗಳ ಮೇಲೂ, ಎತ್ತಿನಗಾಡಿಗಳಲ್ಲೂ ಸಾಮಾನು, ಸರಕು, ಸರಂಜಾಮುಗಳನ್ನು ಹೇರಿಸಿಕೊಂಡು ಹಲವರು ದಕ್ಷಿಣಾಭಿಮುಖರಾಗಿಯೂ ಮತ್ತೆ ಹಲವರು ಈಶಾನ್ಯದತ್ತ, ಸುಭಿಕ್ಷದಲ್ಲಿದ್ದ ಹಸ್ತಿನಾವತಿಯ ಕಡೆಗೂ ಹೊರಟರು. ಶೂದ್ರರು ಇವರ ಸೇವೆಯಲ್ಲಿರುತ್ತಾ ಬಹುದೊಡ್ಡ ಸಂಖ್ಯೆಯಲ್ಲಿ ಹಿಂಬಾಲಿಸಿದರು. ಶ್ರೀಕೃಷ್ಣ ಇವರ ಯಾನವನ್ನು ಕಂಡು ಎರಡನೆಯ, ನೆಮ್ಮದಿಯ, ನಿಟ್ಟುಸಿರಿಟ್ಟ!!

* * * * *

"ಊರನ್ನು ಹೀಗೆ ಖಾಲಿ ಮಾಡಲು ಇವರಿಗೇನಾಗಿದೆ?" ಎಂದು ಕೃತವರ್ಮ ಸಿಡಿಮಿಡಿಗೊಂಡ! ದ್ವಾರಕೆ ಮುಳುಗುವ ವಿಷಯವನ್ನು ಅವನು ಅಲ್ಲಿ ಇಲ್ಲಿ ಜ್ಯೋತಿಷಿಗಳ ಮೂಲಕ ಕೇಳಿದ್ದರೂ "ಇದೆಲ್ಲ ಮೂಢನಂಬಿಕೆ! ದ್ವಾರಕೆ ಮುಳುಗಿದರೆ, ಭರತ ವರ್ಷವೇ ಮುಳುಗಬೇಕು! ಎಲ್ಲಿಯಾದರೂ ಒಂದೇ ಒಂದು ಊರು, ಯಾರೋ ಹೇಳಿದಂತೆ, ಮುಳುಗುವುದೆಂದರೇನು? ಹುಡುಗಾಟಿಕೆಯ ಮಾತೇ?" ಎಂದು, ವಾರ್ತೆ ತಂದವರನ್ನು ಗೇಲಿಮಾಡಿದ್ದ!

"ದ್ವಾರಕೆಗೆ ಒಡೆಯನಾಗಲು ಇದೇ ಸಂಧಿ! ಪಿಂಡಾರಕಕ್ಕೆ ಯಾತ್ರೆ ಹೋಗಿ ಬರುವ ವಿಚಾರ ಕೃಷ್ಣನದೇ ಇರಲಿ, ಉಗ್ರಸೇನನದೇ ಇರಲಿ, ಇದು ತನಗೇ ಅನುಕೂಲವಾದ ಅವಕಾಶ" ಎಂದು ಕೃತವರ್ಮ ಬಗೆದ. "ಮೊದಲು ಉಳಿದ ಯಾದವ ವೀರರೆಲ್ಲ ಗಾಡಿಗಳಲ್ಲಿ, ಇತರ ವಾಹನಗಳಲ್ಲಿ ಹೊರಡಲಿ! ಆಮೇಲೆ ತಾನೂ 'ಯಾತ್ರೆ'ಗೆ ಹೊರಡುವುದು!! ಯಾವ ಯಾತ್ರೆ? ಇನ್ನೆಂಥದು! ಅದು ರಣಯಾತ್ರೆ! ಮೊದಲು ಸಾತ್ಯಕಿಯನ್ನೂ, ಇತರ ಪ್ರತಿಸ್ಪರ್ಧಿಗಳನ್ನು ಅಲ್ಲಿ ಮುಗಿಸಿ ಬಿಡಬೇಕು!! ಆಮೇಲೆ ಈ ಕಪಟಿ, ಕೃಷ್ಣನ ಸಂತಾನ- ಅದೇನು ಕಮ್ಮಿ ಸಂಖ್ಯೆಯದೇ- ಅವರೆಲ್ಲರನ್ನು ಒಬ್ಬರನ್ನೂ ಬಿಡದಂತೆ ಮುಗಿಸಿಬಿಡಬೇಕು! ಅಷ್ಟು ಶಸ್ತ್ರಾಸ್ತ್ರಗಳನ್ನು ಈ ತೀರ್ಥಯಾತ್ರೆಯ ನೆಪದಲ್ಲಿ, ರಹಸ್ಯದಲ್ಲಿ, ಕೊನೆಯಲ್ಲಿ ಒಯ್ದು, ಬಿಡಾರಕ್ಕೆ ಸಮೀಪದಲ್ಲಿ ಬಚ್ಚಿಡಬೇಕು! ಆ ಕಳ್ಳಕೃಷ್ಣ, ತಾನೂ ಕೊನೆಗೆ ನಿಂತು, ಹೇಗೂ ಪತ್ತೆ ಹಚ್ಚಿದರೆ, 'ದ್ವಾರಕೆ ಮುಳುಗುವುದು ಎಂದು ಪ್ರಚಾರ ನಡೆಸುತ್ತಿರುವೆಯಷ್ಟೆ! ಇದು ಊರಿನ ಆಪತ್ಕಾಲದ ರಕ್ಷಣೆಗೆ' ಎಂದರೆ ಮುಗಿಯಿತು! ಎಲ್ಲರೂ ಮಲಗಿದ ಮೇಲೆ, ನಡುರಾತ್ರಿಯಲ್ಲಿ ಈ ಶಸ್ತ್ರಸಾಗಣೆ ನಡೆಯಬೇಕು!" ಇದು ಕೃತವರ್ಮನ ವಿಚಾರವಾಗಿತ್ತು. ಸಾತ್ಯಕಿಗೆ ಈ ವಿಷಯ

ಗೊತ್ತಾಗಬಾರದೆಂದೂ, ಅವನು ಯಾವಾಗ ಹೇಗೆ, ಎಷ್ಟು ಜನರೊಡನೆ, ಆಯುಧ ಸಹಿತನಾಗಿಯೋ, ಅವನ್ನು ಬಿಟ್ಟೋ, ಯಾವ ರೀತಿ ಪಿಂಡಾರಕಕ್ಕೆ ಹೋಗುವನೆಂಬುದನ್ನು ಗಮನಿಸಲು ಗೂಢಚಾರರನ್ನು ಇಟ್ಟ!

*****

ಸಾತ್ಯಕಿಯ ಗೂಢಚಾರರು ರಹಸ್ಯದಲ್ಲಿ ಇದನ್ನೆಲ್ಲ ಅರಿತು ಅವನಿಗೆ ಅರುಹಿದರು! ಸಾತ್ಯಕಿ ಚಕಿತನಾದ! ಕೃತವರ್ಮನ ಮಹತ್ವಾಕಾಂಕ್ಷೆಯ ಬಗ್ಗೆ ಅವನಿಗೆ ಅಷ್ಟಿಷ್ಟು ಗೊತ್ತಿದ್ದರೂ, ಇದೇ ಸಂಧಿಯನ್ನು ಹೀಗೆ ಉಪಯೋಗಿಸಿಯಾನೆಂಬ ನಿರೀಕ್ಷೆ ಅವನಿಗಿರಲಿಲ್ಲ!

"ಇದನ್ನು ಹೇಗಾದರೂ ಆಗಗೊಡಬಾರದು!" ಎಂದವನೇ, ವಣಿಗ್ಜನರ ವೇಷದಲ್ಲಿ ತನ್ನವರನ್ನು ಕಳುಹಲು ಏರ್ಪಡಿಸಿ ಪಿಂಡಾರಕ ಕ್ಷೇತ್ರಕ್ಕೆ ಆನೆ, ಕುದುರೆ, ಒಂಟೆಗಳ ಮೇಲೆ, ಆಯುಧಗಳನ್ನು ಸರಕುಗಳಂತೆ ಗಂಟುಕಟ್ಟಿ ಮುಚ್ಚಿ, ಅನುಮಾನ ಬಾರದಂತೆ, ಕೃತವರ್ಮನಿಗಿಂತ ಮುಂಚಿತವಾಗಿಯೇ ಕಳುಹಿದ!

ಸಂಧ್ಯಾಕಾಲಕ್ಕೆ ಸರಿಯಾಗಿ ಸಾತ್ಯಕಿಯ ಜನರು ಆಯುಧಗಳನ್ನು ಪ್ರಭಾಸಕ್ಷೇತ್ರಕ್ಕೇ ತಂದರು! ಪಿಂಡಾರಕ ಸಣ್ಣಗ್ರಾಮ. ಅಲ್ಲಿ ಈ ಆಯುಧಗಳನ್ನು ಎಲ್ಲಿಟ್ಟರೂ ಎಲ್ಲರಿಗೂ ತಿಳಿದೇ ಬಿಡುವುದು! ಹೇಗೂ ಸ್ನಾನಕ್ಕೆ ಸಮುದ್ರ ತೀರಕ್ಕೇ ಬರಬೇಕಲ್ಲ! ಗೋಮತೀ ನದಿಯು ಸಮುದ್ರವನ್ನು ಸೇರುವುದು ಒಂದು ಸ್ನಾನ ಘಟ್ಟ! ಸರಸ್ವತಿಯು ಪಶ್ಚಿಮಾಭಿಮುಖಿಯಾಗಿ ಸಮುದ್ರ ಸೇರುವುದು ಇನ್ನೊಂದು ಘಟ್ಟ!

ಯಾದವರಿಗೆ ವಸತಿಯ ಉಸ್ತುವಾರಿ ನೋಡುವ ನೆಪದಲ್ಲಿ, ಸೂರ್ಯಾಸ್ತಮಾನವಾದ ಮೇಲೆ ಸ್ವಯಂ ಸಾತ್ಯಕಿಯೇ ಅತ್ತ ಬಂದ! ಎರಡೂ ಸ್ನಾನಘಟ್ಟಗಳನ್ನು ಪರಿಶೀಲಿಸಿದ ನಂತರ ಸರಸ್ವತೀ ಸಮುದ್ರ ಸಂಗಮ ಕ್ಷೇತ್ರವೇ ಸಾವಿರಾರು ಜನರಿಗೆ ಸ್ನಾನ, ತರ್ಪಣಾದಿಗಳಿಗೆ ಯೋಗ್ಯವೆಂದು ನಿಶ್ಚಯಿಸಿ, ಅಲ್ಲೇ ಎಲ್ಲಾದರೂ ಈ ಆಯುಧಗಳನ್ನು ಇಡಲು ಸರಿಯಾದ ಜಾಗ ಇರುವುದೇ ಹೇಗೆಂದು ಸುತ್ತಲೂ ಪರೀಕ್ಷಿಸಿದ.

ಸಮುದ್ರ ದಂಡೆಗೆ ದೂರದಲ್ಲಿ ಗುಡ್ಡಗಾಡು ಇದ್ದರೂ, ಅಲ್ಲಲ್ಲಿ ಕುರುಚಲು ಗಿಡಗಳೂ ಬಂಡೆಕಲ್ಲುಗಳು ಇದ್ದರೂ, ಅಲ್ಲೆಲ್ಲಾದರೂ ಬಚ್ಚಿಟ್ಟ ಆಯುಧಗಳು ತೀರದಲ್ಲಿ ತಟ್ಟಕ್ಕನೆ ನೆನೆಸಿದಾಗ ಒದಗಲಾರವೆಂದು ಸಾತ್ಯಕಿ ತರ್ಕಿಸಿದ! ಸಮುದ್ರತೀರವನ್ನೇ ಉದ್ದಕ್ಕೂ ಪರೀಕ್ಷಿಸಿದ.

ಒಂದು ಗಾವುದಕ್ಕಿಂತ ಹೆಚ್ಚು ಸಮುದ್ರ ತೀರದುದ್ದಕ್ಕೂ ಸಾಂದ್ರವಾಗಿ ಒಂದು ಬಗೆಯ ಜೊಂಡು ಹುಲ್ಲು ಬೆಳೆದು, ಆಳೆತ್ತರಕ್ಕೆ ತಲೆ ಎತ್ತಿನಿಂತಿತ್ತು!

ಅಂಥ ಜೊಂಡನ್ನು ಅವನೆಲ್ಲೂ ಆ ಹಿಂದೆ ನೋಡಿರಲಿಲ್ಲ!! ಒಂದನ್ನು ಹಿಡಿದು ಬಗ್ಗಿಸಿ ನೋಡಿದ! ಆ ಜಾಗವೆಲ್ಲ ಜೌಗಾಗಿ ಮಣ್ಣು ತೀರ ಹೆಪ್ಪುಗಟ್ಟಿನಿಂತಿತ್ತು. ಸಮುದ್ರ ಹಿಂದೆ ಹಿಂದೆ ಸರಿಯುವಂತೆ ಭಾಸವಾಯಿತು. ಮುಟ್ಟಿದ ಜೊಂಡಾದರೂ ಕಬ್ಬಿಣದ ಒನಕೆಯಂತೆ ಗಟ್ಟಿಯಾಗಿದ್ದು, ಬಗ್ಗಲು ಕಠಿಣವಾಗಿತ್ತು. ಅದರ ನಾಲ್ಕೂ ಬದಿಯ ಅಲಗುಗಳು ದರ್ಭೆಯ ಹುಲ್ಲಿನ ಗರಿಯಂತೆ ಹರಿತವಾಗಿದ್ದು, ಎಚ್ಚರತಪ್ಪಿ ಬಗ್ಗಿಸಿದ್ದರೆ, ಅದು ಸಾತ್ಯಕಿಯ ಕೈಯನ್ನೇ ಕೊಯ್ಯಬಹುದಾಗಿದ್ದಂತೆ ತೋರಿತು!

ಸಾತ್ಯಕಿ ಯೋಚಿಸಿದ! "ಇದೇ ಸರಿಯಾದ ಜಾಗ! ಈ ಜೊಂಡಿನ ನಡುವೆ ಇಟ್ಟರೆ ಆಯುಧಗಳು ಯಾರಿಗೂ ಪತ್ತೆಯಾಗುವುದಿಲ್ಲ! ಇಲ್ಲಿ ಇವನ್ನು ಇಡಬಹುದೆಂದು ಯಾರು ನಿರೀಕ್ಷಿಸಿದ್ದಾರು! ಸಮೀಪವೂ ಆಗುತ್ತೆ! ದಂಡೆಯಲ್ಲಿ ವಿಶ್ರಾಂತರಾಗುವಾಗ ಕೃತವರ್ಮನ ಕಡೆಯವರನ್ನು ಮುಗಿಸಲು ಸುಲಭವಾಗಿ ಕೈಗೆ ಸಿಗುತ್ತದೆ!" ಎಂದು ನಿರ್ಧರಿಸಿ, ತನ್ನ ಕಡೆಯ ಯೋಧರಿಗೆ,

ಸಮುದ್ರದಂಚಿನ ಉಗ್ರಾಣಕ್ಕೆ ಕತ್ತಿ ಗದೆ, ಈಟಿ, ಮುದ್ಗರ ಚಕ್ರ, ಶೂಲಾದಿ ಆಯುಧಗಳನ್ನೆಲ್ಲ ಬಚ್ಚಿಡುವಂತೆ ಆಜ್ಞಾಪಿಸಿದ.

"ಕೃತವರ್ಮ ಇನ್ನೂ ಊರಲ್ಲೇ ಇದ್ದಾನೆ. ಅವನಿಗಿನ್ನೂ ನಮ್ಮ ಜಾಡು ತಿಳಿದಿಲ್ಲ. ಈ ರಾತ್ರಿಯೇ ಅವನೂ ಆಯುಧಗಳನ್ನು ಸಾಗಿಸಬಹುದು" ಎಂದು ಸಾತ್ಯಕಿಯ ಆಪ್ತಗೂಢಚಾರ ಬಂದು ತಿಳಿಸಿದ. ತನ್ನವರನ್ನು ಅಲ್ಲೇ ಬಿಟ್ಟು ಸರಿ ರಾತ್ರಿಯಾಗುವ ಮುನ್ನವೇ ಸಾತ್ಯಕಿ ದ್ವಾರಕೆಗೆ ಮರಳಿದ!

* * * * *

ಶ್ರೀಕೃಷ್ಣ ಸಾಯಂ ಸಂಧ್ಯೆ ಮುಗಿಸಿ ವಸುದೇವನ ಭವನಕ್ಕೆ ತೆರಳಿದ. ದೇವಕೀದೇವಿ ಸುಖಾಸನದಲ್ಲಿ ಕುಳಿತು ಧ್ಯಾನಾಸಕ್ತಳಾಗಿದ್ದಳು. ವಸುದೇವ ಆಕೆಯ ಬಳಿ ಕುಳಿತು, ಆ ಹದಿನೈದು ದಿನಗಳಲ್ಲಿ ದ್ವಾರಕೆಯಲ್ಲಿ ನಡೆಯಲಾರಂಭಿಸಿದ್ದ ಕರಾಳ ವ್ಯಾಪಾರಗಳನ್ನು ಕುರಿತು ಚಿಂತಿಸುತ್ತಾ, ವ್ಯಗ್ರಮನಸ್ಕನಾಗಿ, ಕಣ್ಣುಮುಚ್ಚಿದ್ದ.

ಪ್ರತೀಹಾರಿಯು ಶ್ರೀಕೃಷ್ಣಾಗಮನವನ್ನು ಸೂಚಿಸಲು, ಆಳುಗಳು ಮೂಲೆಗಳ ರತ್ನದೀಪಗಳ ಪ್ರಖರತೆಯನ್ನು ಹೆಚ್ಚು ಮಾಡಿ ಬಾಗಿಲಾಚೆಗೆ ಸರಿದರು.

"ಶ್ರೀಕೃಷ್ಣ ಬಂದ!" ಎಂಬುದನ್ನು ಕೇಳಿ ವಸುದೇವ ಮೇಲೇಳಲು ಹೊರಟ. ಬಹಳ ವಯಸ್ಸಾಗಿ, ಶರೀರ ಸ್ಥೂಲವೂ ಆಗಿ, ಏಳಲು ಶ್ರಮಪಡುತ್ತಿರುವಷ್ಟರಲ್ಲೇ, ಶ್ರೀಕೃಷ್ಣ ಬಳಿ ಬಂದು ತಂದೆಗೆ ಸಾಷ್ಟಾಂಗ ಮಾಡಿ ಅಭಿವಾದನ ಮಾಡಿದ. "ಆಯುಷ್ಮಾನ್ ಭವ; ಗುಣವಾನ್‌ಭವ" ಎಂದು ಹರಸಿದ ಮುದುಕ ವಸುದೇವ ಶ್ರೀಕೃಷ್ಣನನ್ನು ಬಾಚಿ ತಬ್ಬಿಕೊಂಡು ನೆತ್ತಿ ಮೂಸಿನೋಡಿ, ಗದ್ಗದಿತನಾದ.

ದೇವಕಿಯೂ ಧ್ಯಾನಬಹಿರ್ಮುಖಿಳಾಗಿ, ಕೃಷ್ಣ ದಿಢೀರನೆ ಬಂದ ಕಾರಣ ತಿಳಿಯದೆ, ಕಣ್ಣರಳಿಸಿ ನೋಡಿ, ಮಗ ಕಣ್ಣಿಗೆ ಕಂಡದ್ದೇ ಹಬ್ಬವಾಗಿ, ಹಳೆಯ ನೆನಪುಗಳು ಅಗಲಿಕೆ, ಕೂಡುವಿಕೆ ಎಲ್ಲ ಒಂದರ ಮೇಲೊಂದಾಗಿ ಮನದಲ್ಲಿ ಹಾದು, ಬಾಷ್ಪ ಗದ್ಗದಿತೆಯಾಗುತ್ತಾಳೆ. ಇಬ್ಬರೂ "ಏನು ಈಗಿನ ವಿಷಯ ?" ಎಂಬಂತೆ ಶ್ರೀಕೃಷ್ಣನ ಮುಖ ನೋಡುತ್ತಾರೆ.

ಶ್ರೀಕೃಷ್ಣ:"ಅಪ್ಪಾಜಿ! ಹರಸುವಾಗೆಲ್ಲ ಎಲ್ಲ ಹಿರಿಯರ ವಾಡಿಕೆಯಂತೆ ನೀವು 'ಆಯುಷ್ಮಾನ್ ಭವ" ಎಂದು ಹರಸುತ್ತೀರಷ್ಟೆ! ಇತರ ಸಂದರ್ಭಗಳು ಕೂಡಿಬರದೆ, ಬರೀ ದೀರ್ಘಾಯುಷ್ಯದಿಂದೇನು ಸುಖ ? 'ಅತಿ ದೀರ್ಘೇ ಜೀವಿತೇ ಕೋ ರಮೇತ ?" ಎಂಬ ಶ್ರುತಿಯನ್ನು ನೀವೂ ನಾವೂ ಕೇಳಿಯೇ ಇರುವೆವಷ್ಟೆ! 'ಗುಣವಾನ್ ಭವ' ಎಂಬುದೇನೋ ಸರಿ! ಆದರೆ ಗುಣವರಿಯದ ಜಗತ್ತಿನಲ್ಲಿ ಗುಣವಂತನಿಗೆ ಗುಣದಿಂದೇನು ಲಾಭ ?"

ವಸುದೇವ:"ಮಗನೇ! ನನಗೆ ವಯಸ್ಸಾಯಿತು ಎಂಬ ಎಚ್ಚರಿಕೆಯ ಮಾತನ್ನಾಡುತ್ತಿರುವೆಯಲ್ಲವೆ ?"

ಶ್ರೀಕೃಷ್ಣ:"ತಮಗೆ ವಯಸ್ಸಾದ ಬಗೆಗಲ್ಲ! ನನ್ನ ಬಗೆಗೇ ಹಾಗಾಡಿದೆ!"

ವಸುದೇವ:"ಮಗು! ನನಗಾಗದ ವಯಸ್ಸು, ನಿನ್ನ ತಾಯಿಗಾಗದ್ದು, ನಿನಗಾಗಿ ಹೋಯಿತೇ!"

ಶ್ರೀಕೃಷ್ಣ:"ನೋಡಿದಿರಾ! ನನ್ನನ್ನು 'ಮಗು'ಎಂದು ಸಂಬೋಧಿಸುತ್ತೀರಿ! ನನ್ನ ಮೊಮ್ಮಕ್ಕಳು ಮರಿಮಕ್ಕಳೂ ಕೇಳಿದರೆ ನನ್ನನ್ನು ನಿಮ್ಮನ್ನು ಅಪಹಾಸ್ಯ ಮಾಡಲಾರರೆ ?"

ವಸುದೇವ:"ಯಾರು ಅಪಹಾಸ್ಯ ಮಾಡಿದರೆ ನನಗೇನು, ಮಗು ? ನೀನೆಷ್ಟು ವಯಸ್ಸಾದರೂ ನನಗೆ ಮಗುವೆ ಅಲ್ಲವೇ ? ಕಿರಿಯರ ರೀತಿ ಕಿರಿಯರಿಗೆ! ಅವರು ಏನನ್ನು ತಾನೇ ಅಪಹಾಸ್ಯ ಮಾಡಲಾರರು ?"

ಏನನ್ನೋ ನೆನೆಸಿ ವಸುದೇವ ಮತ್ತೆ ಗದ್ಗದಿತನಾಗುತ್ತಾನೆ. ಕಣ್ಣೀರು ಕಂಗಳಿಂದ ಉದುರಲಾಗುತ್ತದೆ! ಅದನ್ನು ಕಂಡು ದೇವಕಿಯೂ ಭಾವಾವಿಷ್ಟಳಾಗುತ್ತಾಳೆ. ಶ್ರೀಕೃಷ್ಣನೂ ಅಧೋಮುಖವಾಗಿ ಕುಳಿರುತ್ತಾನೆ.

ಶ್ರೀಕೃಷ್ಣ:"ಪ್ರಭು! ನಾನು ಪುತ್ರನಾಗಿ ಜನಿಸಿ ನೀವಿಬ್ಬರೂ ಯಾವ ವಿಧದಲ್ಲೂ ನನ್ನಿಂದ ಸುಖಪಡಲಿಲ್ಲ! ಸಾಮಾನ್ಯ ತಾಯಿತಂದೆಯರು ಬಯಸುವಂತೆ ಮಕ್ಕಳ ಎಳವೆ, ಬಾಲಲೀಲೆಗಳನ್ನು ನನ್ನಿಂದ ನೀವು ಅನುಭವಿಸಲಾಗಲಿಲ್ಲ! ಹದಿಮೂರು ವರ್ಷ ನನಗೆ ವಯಸ್ಸಾಗುವ ತನಕ, ನನ್ನ ನಿಮಿತ್ತ ಕಾರಾಗಾರದಲ್ಲೇ ಕೊಳೆಯುವಂತಾಯಿತು! ನಾನು ತಾಯಿಯ ಗರ್ಭದಲ್ಲಿ ಕಾಲಿಟ್ಟ ವೇಳಾಗುಣ!.....

ದೇವಕಿ:(ಬಿಕ್ಕಿ ಅಳುತ್ತಾ)"ಮಗು! ಹಾಗೆಲ್ಲ ಹೇಳಬೇಡವಪ್ಪ! ಅದು ನನ್ನ ಕರ್ಮ! ನಿನ್ನ ಮಾವ ಕಂಸನಿಂದಾದ ಈ ಶಿಕ್ಷೆಗೆ ನೀನು ಹೇಗೆ ಹೊಣೆ!...ಅದೆಲ್ಲ ಮುಗಿದ ಕತೆ ತಾನೇ? ಈಗೇಕೆ ಆ ನೆನಪು?"

ಶ್ರೀಕೃಷ್ಣ: "ತಾಯಿ! ನೆನಪು ಸಿಹಿಯಾಗಲಿ, ಕಹಿಯಾಗಲಿ, ವ್ಯಕ್ತಿಯ ಚರಿತ್ರೆಯಾಗಿ ವ್ಯಕ್ತಿತ್ವದ ಭಾಗವೇ ಆಗಿಹೋಗಿರುತ್ತದೆ. ಬೆಳೆದ ಮರ ತನ್ನ ಬೇರನ್ನು ನೆನೆಸಿಕೊಳ್ಳುವುದರಲ್ಲಿ ಅನೌಚಿತ್ಯವಿಲ್ಲ. ಅದನ್ನು ಮರೆಯುವುದರಿಂದ ಅನರ್ಥವೂ ಉಂಟು!....ನೋಡಬೇಕಾದ್ದನ್ನು ನೋಡಿ ಆನಂದಿಸುವ ಭಾಗ್ಯ ಇಲ್ಲದ ಜೊತೆಗೆ, ನೋಡಬಾರದ್ದನ್ನು ನೋಡಿ ದುಃಖದಿಂದ ಎದೆಯೊಡೆಸುವ ಕರ್ಮಭೂಮಿ ಈ ಸಂಸಾರ! ಅತಿ ದೀರ್ಘಾಯುಷ್ಯದ ಅನರ್ಥಗಳಲ್ಲಿ ಇದೂ ಒಂದೆಂಬುದು ಶ್ರುತಿಯ ಅರ್ಥ!"

ವಸುದೇವ ದೇವಕಿಯರು ಈ ವ್ಯಾಖ್ಯಾನದಿಂದ ಚಕಿತರಾಗುತ್ತಾರೆ! ಏಕೋ ಒಂದು ಬಗೆಯ ಭಯ ತಾತ್ಕಾಲಿಕವಾಗಿ ಅವರನ್ನಾವರಿಸುತ್ತದೆ!....ಮೌನಮುರಿದು ವಸುದೇವನೇ ಆಡುತ್ತಾನೆ.

ವಸುದೇವ:"ನೋಡಬಾರದ್ದನ್ನು ಎಂದರೇನು?"

ಶ್ರೀಕೃಷ್ಣ: "ಅಪ್ಪಾ! ಹಸ್ತಿನಾವತಿಯ ಘಟನೆಗಳನ್ನು ನೆನೆಯಿರಿ! ಧೃತರಾಷ್ಟ್ರ ಇನ್ನೂ ಇದ್ದಾನೆ! ನೋಡಬಾರದ್ದೆಲ್ಲಾ ಅವರು ನೋಡಲಿಲ್ಲವೆ?"

ವಸುದೇವ: "ಹಸ್ತಿನಾವತಿಯ ನೆನಪು ಈಗೇಕೆ, ಮಗನೆ?....ನೀನು ಏನನ್ನೋ ಮರೆಸಿ ಹೇಳುತ್ತಿರುವೆ! ಮುದುಕರಾದ ನಮಗೆ ಬಿಡಿಸಿ ಹೇಳಿ ಉಪಕರಿಸು!...." (ಅಳುತ್ತಾನೆ)"

ದೇವಕಿ: "ಮುನಿಶಾಪವನ್ನು ಪರಿಹರಿಸಲು ಪ್ರಭಾಸಯಾತ್ರೆಯೂ ಏರ್ಪಾಡಾಗಿದೆಯಷ್ಟೆ! ಇನ್ನೇನು ಅನರ್ಥ ಕಾದಿದೆಯಪ್ಪ!"

ಶ್ರೀಕೃಷ್ಣ: "ತಾಯಿ! ಅಪ್ಪಾಜಿ! ದೈವಸಂಕಲ್ಪದಿಂದಾಗುವುದೇನನ್ನೂ ನಾನು ಅನರ್ಥವೆಂದು ಭಾವಿಸುವುದಿಲ್ಲ. ದೇವರು ಏನನ್ನೂ ಅರ್ಥವತ್ತಾಗಿಯೇ ಮಾಡುತ್ತಾನೆ ಎಂಬುದೇ ವೇದಾಂತವನ್ನು ನಾನು ತಿಳಿದ ಕ್ರಮ; ನನಗೆ ಉಪದೇಶಿಸಿದ ಗುರುಗಳೂ ಅದನ್ನೇ ಹೇಳುತ್ತಿದ್ದರು; ನನ್ನ ಶಿಷ್ಯರಿಗೂ ನಾನು ಅದನ್ನೇ ಉಪದೇಶಿಸಿದ್ದೇನೆ. ಅನರ್ಥವೇನೆಂಬುದಿದ್ದರೆ, ಅದು ಮನುಷ್ಯ ಸಂಕಲ್ಪದಿಂದಲೇ, ಅವಿವೇಕದಿಂದಲೇ ಉದಿಸುವುದೆಂಬುದೂ ಕರ್ಮಸಿದ್ಧಾಂತದ ಸತ್ಯ. ದೇವರು ಅನುಗ್ರಹಿಸುವ ಅನುಭವ, ಸಿಹಿಯಾಗಲಿ, ಕಹಿಯಾಗಲಿ, ಯಾವ ನೆನಪಾದರೂ ಅದರಿಂದ ನಮಗೆ ಅನರ್ಥವಿಲ್ಲ. ಅನರ್ಥದ ಸ್ಮರಣೆಯಿಂದ ಅರ್ಥಸಿದ್ಧಿಯೂ ಉಂಟು! ಅರ್ಥಸ್ಮರಣೆಯಿಂದ ಅನರ್ಥವೂ ಉಂಟು! ನಾನು ಹೇಳಬಂದದ್ದು ಇದನ್ನಲ್ಲ!.... ಮಕ್ಕಳ ಬಾಲ್ಯ, ಶೈಶವ ಲೀಲೆಗಳನ್ನು ಕಂಡು ಆನಂದಿಸಬೇಕಾದ ನೀವು ನನ್ನಿಂದಲೂ ಅಣ್ಣ ರಾಮನಿಂದಲೂ ಆ ಸುಖದಿಂದ ವಂಚಿತರಾದಿರಿ! ಈಗ ಈ ವೃದ್ಧಾಪ್ಯದಲ್ಲೂ ನಿಮ್ಮ ಸೇವೆಗೆ ವೇಳೆ ಸಿಗದಂತೆ, ರಾಜಕೀಯ ನನ್ನನ್ನು ಬಿಗಿದು ಹಾಕಿದೆ ಎಂದಷ್ಟೇ ಹೇಳಬಂದೆ."

ವಸುದೇವನೇನೋ ಈ ವಿವರಣೆಯಿಂದ ಒಂದು ಬಗೆಯ ತಾತ್ಕಾಲಿಕ ತೃಪ್ತಿಪಟ್ಟುಕೊಂಡು "ಇಷ್ಟೇಯೋ! ಅದು ನಮ್ಮ ಅನುಭವದಲ್ಲೇ ಅನೇಕ ವರ್ಷಗಳಿಂದಿರುವ ಸತ್ಯ! ಕೃಷ್ಣಾ! ನಿನ್ನ ಬಾಲಲೀಲೆಗಳನ್ನು ಕೇಳಿಯಾದರೂ ಅನುಭವಿಸಿರುವೆವಷ್ಟೆ! ಆ ತೃಪ್ತಿಯೇ ಸಾಕು! ಮೊಮ್ಮಕ್ಕಳು, ಮರಿಮಕ್ಕಳು, ಅವರ ಮಕ್ಕಳೆಲ್ಲ ಆಡಿದ ಆಟನೋಡಿ ಸಂತೋಷ ಪಡುವ ಭಾಗ್ಯವನ್ನಾದರೂ ಕೊಟ್ಟಿನಲ್ಲ, ದೇವರು! ಅದೇ ಸಾಕು!!"ಎನ್ನುತ್ತಾನೆ.

ಆದರೆ ದೇವಕಿಗೆ ಮಾತ್ರ ಇನ್ನೇನೋ ಅರ್ಥವಾಗಿ ಶ್ರೀಕೃಷ್ಣನ ಮುಖವನ್ನು ದಿಟ್ಟಿಸಿನೋಡುತ್ತಾಳೆ! ತನ್ನ ಅಭಿಪ್ರಾಯ ಅವಳಿಗೆ ತಿಳಿಯಿತೆಂದು ಶ್ರೀಕೃಷ್ಣನಿಗೆ ಅನ್ನಿಸಿ, ಹೃದಯ ಮುಗುಡ ಕಮ್ಮಿಯಾಗಿ ಹಗುರವಾಗುತ್ತದೆ. ತಾಯಿಯನ್ನು ದಿಟ್ಟಿಸಿ ನೋಡುತ್ತಾನೆ....

ಶ್ರೀಕೃಷ್ಣ: "ಮಕ್ಕಳ ಕರ್ತವ್ಯ ಬರೀ ಬಾಲಲೀಲೆಗಳನ್ನು ತೋರಿಸಿ ಮಾಯವಾಗಿ ಬಿಡುವುದಲ್ಲ, ತಾಯಿ! ಅಥವಾ ತಾನು ಸಂಪಾದಿಸಿ ಅವರ ವೃದ್ಧಾಪ್ಯದಲ್ಲಿ ಕೈಬಿಡದೆ ಅವರನ್ನು ಕಾಪಾಡಿದ ಮಾತ್ರದಿಂದಲೂ ಆ ಕರ್ತವ್ಯ ಮುಗಿಯುವುದಿಲ್ಲ. ಇದರಲ್ಲಿ ಔದಾರ್ಯವೇನಿಲ್ಲ. ಪ್ರಕೃತಿನಿಯಮ ಅದು. ಇನ್ನು ಒಂದು ಕರ್ತವ್ಯ ಇರುತ್ತದೆ. ಅದನ್ನು ಮಾಡುವುದಕ್ಕೆ ಮಕ್ಕಳಿಗೂ ಭಾಗ್ಯಬೇಕು; ಮಾಡಿಸಿಕೊಳ್ಳಲು ಹಿರಿಯರಿಗೂ ಬಾಗ್ಯಬೇಕು! ಈ ಕರ್ತವ್ಯ-ಕರ್ಮ-ಕ್ರಿಯಾ ಭಾಗ್ಯವನ್ನು ಏರ್ಪಡಿಸುವವನು ಜಗದೀಶ್ವರ!....ಮುನಿಶಾಪ ತೀರುವುದೂ ಬಿಡುವುದೂ ಈಶ್ವರನ ಕೈಯ್ಯಲ್ಲಿದೆ. ಅದು ತೀರಲಿ, ಬಿಡಲಿ, ನಿಮ್ಮ ದರ್ಶನ ಮಾಡಿಹೋಗೋಣ ಎಂದು ಬಂದೆ... ಕರ್ತವ್ಯ ತೀರಿಸಲಾಗದೆ ಹೋದರೆ ನನ್ನನ್ನು ಕ್ಷಮಿಸಿ!!ನನ್ನನ್ನು ಕ್ಷಮಿಸಿ!!"

ಶ್ರೀಕೃಷ್ಣ ದೇವಕಿಯ ಪಾದ ಹಿಡಿದು ನಮಸ್ಕರಿಸಿ, ಅದನ್ನು ತನ್ನ ಅಶ್ರುಗಳಿಂದ ತೋಯಿಸುತ್ತಾನೆ.

ಶ್ರೀಕೃಷ್ಣ: "ಅಮ್ಮ! ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಭಾಗ್ಯದಿಂದ ನನ್ನ ಹೆಸರೂ ನಿನ್ನದರೊಡನೆ ವೇದದಲ್ಲೇರಿ ಕುಳಿತಿತು! ಅಪ್ಪಾಜಿ! ನಿಮ್ಮ ಪುತ್ರನಾದುದರಿಂದ ನನ್ನ ಹೆಸರು 'ವಾಸುದೇವ'ನೆಂದು ಮಂತ್ರಾರೂಢವಾಗಿ ಕುಳಿತಿತು! ನಿಮಗೆ ಯಾವ ಜನ್ಮದಲ್ಲಿ ಈ ಉಪಕಾರ ತೀರಿಸಲಿ! ಇಂಥ ಮಾತಾಪಿತೃಗಳ ತಪಸ್ಸಿನಿಂದ, ರಕ್ತದಿಂದ ಹುಟ್ಟಿ ನನಗೆಂದೂ ಬುದ್ಧಿ ಕೆಡಲಿಲ್ಲ!... ಕಾಲಚಕ್ರದ ವಶದಲ್ಲಿರುವ ಈ ಕರ್ಮ ಲೋಕದಲ್ಲಿ ಇಷ್ಟು ಪವಿತ್ರ ಸಂಬಂಧವೂ ಒಂದು ದಿನ ಮುಗಿಯುಲೇ ಬೇಕಲ್ಲವೇ?... ನನ್ನನ್ನು 'ಕ್ಷಮಿಸಿದೆವು' ಎಂದು ಹೇಳಿ." ಎನ್ನುತ್ತಾ ಶ್ರೀಕೃಷ್ಣ, ಅವರ ಉತ್ತರಕ್ಕಾಗಿ ಕಾಯದೇ ನಿರ್ಗಮಿಸುತ್ತಾನೆ.

ದೇವಕಿ ಗರಬಡಿದವಳಂತೆ, ಆಶೀರ್ವಾದವನ್ನೂ ಮಾಡದೆ ಅಧೋಮುಖಿಯಾಗಿ ಕೂಡುತ್ತಾಳೆ. ವಸುದೇವ ಕೇಳಿದ:"ಇನ್ನು ಒಂದು ಕರ್ತವ್ಯ ಎಂದನಲ್ಲ, ಮಗು? ಅದೇನು?" "ತಿಳಿಯಲಿಲ್ಲವೇ?" ಎಂದಳುತ್ತಾ, ದೇವಕಿ ಹೇಳುತ್ತಾಳೆ, "ಮುನಿಶಾಪ ಫಲಿಸುವುದು ಖಂಡಿತ. ವಂಶವೇ ನಾಶವಾದರೆ, ನಿಮಗೂ ನನಗೂ ಅಂತ್ಯ ಸಂಸ್ಕಾರ ಮಾಡುವವರಾರು?"

*****

ಆ ವಾರವೆಲ್ಲ ದ್ವಾರಕೆಯ ಕೋಟೆ ಬಾಗಿಲನ್ನು ಮುಚ್ಚಲೇ ಇಲ್ಲ. ಜನರು ವಲಸೆ ಹೊರಟಿದ್ದೂ ಹೊರಟದ್ದೇ! ದ್ವಾರಕೆಯ ಬೀದಿಗಳಲ್ಲಿ ಧೂಳೋ ಧೂಳು! ಶ್ರೀಕೃಷ್ಣನ ಅರಮನೆಯ ಬಂಗಾರದ ಹೊದ್ದಿಕ್ಕೆಯ ಮೇಲೆಲ್ಲಾ ಸಾಂದ್ರವಾಗಿ ಕೆಂಪು ಧೂಳು ಕುಳಿತು, ಬಂಗಾರಕ್ಕೇ ಇನ್ನೊಂದು ಬಣ್ಣ ಬಂದಂತೆ ಕಾಣುತ್ತಿತ್ತು. ಆನೆ, ಕುದುರೆ, ಒಂಟೆ, ರಥ, ಗಾಡಿ, ಎತ್ತುಗಳು, ಹೇಸರ ಕತ್ತೆಗಳು ಯಾವ ಪ್ರಾಣಿಗಳ ಮೇಲೂ ಜನ ಮೂಟೆ ಮೂಟೆಯಾಗಿ ಸಾಮಾನು ಸಾಗಿಸಿ ಹೊರಟಿದ್ದೂ ಹೊರಟದ್ದೇ!

*****

ಗರ್ಗಾಚಾರ್ಯರನ್ನು ಶ್ರೀಕೃಷ್ಣ ಭೇಟಿಯಾದ:"ಗುರುವರ್ಯ! ದಿನಕ್ಕೊಂದರಂತೆ ಅರವತ್ತು ನಾಲ್ಕು ಕಲೆಗಳನ್ನು ಅರವತ್ತ ನಾಲ್ಕೇ ದಿನಗಳಲ್ಲಿ ಕಲಿಸಿದ ಸಾಂದೀಪನೀ ಗುರುಗಳ ಸಮ ತಾವು! ಈ ವಾರ ತಾವು ನನ್ನನ್ನು ಬಿಟ್ಟು ಎಲ್ಲೂ ಹೋಗಬಾರದು" ಎಂದ.

ಗರ್ಗರು ಹೇಳಿದರು:"ಅಯ್ಯಾ ಮಹಾಮಹಿಮ! ಅದರ ಬದಲು ಹೀಗೆನ್ನಬೇಕು! ಅರವತ್ತು ನಾಲ್ಕು ಕಲೆಗಳನ್ನು ದಿನಕ್ಕೊಂದರಂತೆ ಕಲಿತವನು ನೀನು! ನೀನೇ ಧೀಮಂತ! ನನ್ನ ನಿಜಭಾಗ್ಯವೆಂದರೆ

ನಿನಗೆ. ರಹಸ್ಯದಲ್ಲಿ ನಾಮಕರಣ ಮಾಡಿಸಿದ್ದು! ಅದೂ ಗೋಕುಲದಲ್ಲಿ ಕಂಸನ ಸಮೀಪದ ಪುಟ್ಟ ಹಳ್ಳಿಯಲ್ಲಿ... ನಿನ್ನನ್ನು ಬಿಟ್ಟು ನಾನೆಲ್ಲಿ ಹೋಗಲಿ? ಹೀಗೇಕೆನ್ನುವೆ?"

ಶ್ರೀಕೃಷ್ಣ: "ಹಾಗಲ್ಲ ಆಚಾರ್ಯ, ದ್ವಾರಕೆಯ ಬ್ರಾಹ್ಮಣರೆಲ್ಲ ಸುತ್ತಮುತ್ತಣ ಅಗ್ರಹಾರಗಳಿಗೆ ಹೋಗಿ ಸುರಕ್ಷಿತವಾಗಿ ನೆಮ್ಮದಿಯಿಂದಿರುವರು. ನಮ್ಮ ಅರಮನೆಯ ಯುವಕರೂ ನಾಳೆ ಪಿಂಡಾರಕಕ್ಕೆ ತೀರ್ಥಯಾತ್ರೆಗಾಗಿ ಹೊರಟಿದ್ದಾರೆ! ಅಲ್ಲಿ ಪಿತೃಶ್ರಾದ್ಧಾದಿಗಳನ್ನು, ದಾನಕರ್ಮಗಳನ್ನು, ಇತರ ಪೂಜಾ ವಿಧಿಗಳನ್ನೂ ಮಾಡಿಸಲು ತಾವು ಶಿಷ್ಯರೊಡನೆ ಬರಬೇಕು. ಅರಮನೆಯವರೆಲ್ಲ ಹೊರಟ ನಂತರ, ಕೊನೆಯ ಪ್ರಯಾಣ ನನ್ನದು. ನನ್ನೊಡನೆಯೇ ತಾವೂ ಬರಬೇಕು. ದರ್ದೆಗಳ ಹೊರೆ, ಎಳ್ಳಿನ ಮೂಟೆಗಳನ್ನು ಹೊರಲು ವಿಶೇಷ ರಥವೊಂದು ನಿಮ್ಮನ್ನು ಅನುಸರಿಸುತ್ತದೆ..."

ಗರ್ಗರು ನಕ್ಕು: "ಇಷ್ಟೇ ತಾನೆ? ಅರಮನೆಯ ಪುರೋಹಿತನಾದ ನನಗೆ ಇದು ಕರ್ತವ್ಯವಲ್ಲವೇ? ಇದನ್ನು ನೆನೆಪಿಸಲು ನೀನೇ ಬರಬೇಕಿತ್ತೆ? ಅಥವಾ ನನಗೆ ನೆನಪಿರಲಿಕ್ಕಿಲ್ಲ ಎಂದು ಭಾವಿಸಿದಂತಿದೆ!"

ಶ್ರೀಕೃಷ್ಣ: "ಹಾಗೇನಿಲ್ಲ!...ಇನ್ನೊಂದು ಮಾತು ಗುರುವರ್ಯ! ಹೇಗೆ ಹೇಳಲಿ! ಉಗ್ರಸೇನ ಮಹಾರಾಜರು ಹಣ್ಣುಮುದುಕರು! ನನ್ನ ತಂದೆತಾಯಿಯರೂ ಸಹ!...ಅವರು ಅರಮನೆಯಲ್ಲೇ ಸುರಕ್ಷಿತವಾಗಿರಲು ಏರ್ಪಡಿಸಿದ್ದೇನೆ...ಏನೇ ಕಾರಣದಿಂದಲೂ, ಏನೇ ನಡೆದರೂ ತಾವು ಧೈರ್ಯಗೆಡದೆ ಆಗಬೇಕಾದ್ದನ್ನು ನಡೆಸಿಯೇತೀರಬೇಕು! ನಾನಾಗಿ ಬಾಯಿಬಿಟ್ಟು ಹೇಳದ ಸಂಭವಗಳು ಬಂದರೂ, ಕಾಲಕಾಲಕ್ಕೆ ನಡೆಸಬೇಕಾದುದನ್ನು, ಅರಮನೆಯಲ್ಲೇ ಆಗಲಿ, ಪ್ರಭಾಸದಲ್ಲಾಗಲಿ, ತಾವು ನಡೆಸಿಯೇ ತೀರಬೇಕು...ನಾನಿರಲಿ, ನನ್ನ ಪ್ರತಿನಿಧಿ ಇರಲಿ..ತಾವು ಚಿಂತಿಸಬಾರದು.."

ಗರ್ಗರು:"(ಕೊಂಚ ಚಿಂತಿಸಿ): ಧೈರ್ಯಗೆಡುವುದೇನು ಬಂತು? ಅರಮನೆಯ ಸಹಸ್ರಾರು ಯಾದವರಿಗೆ ಏಕಕಾಲದಲ್ಲಿ ತೀರ್ಥಶ್ರಾದ್ಧಾದಿಗಳನ್ನು ಹೀಗೆಂದೂ ಮಾಡಿಸಿದ ಪ್ರಸಂಗ ಬರಲಿಲ್ಲವೆನ್ನು! ಅದಕ್ಕೆಲ್ಲ ನನ್ನ ಶಿಷ್ಯರಿದ್ದಾರೆ. ಯೋಚಿಸಬೇಡ! (ಎನ್ನುತ್ತಾ, ಏನೋ ತಟ್ಟನೆ ಹೊಳೆದವರಂತೆ!)....ಅಥವಾ, ನೀನು ಬೇರೇನೆನ್ನುತ್ತಿರುವೆಯೋ?....ಹಾಗಾಗದಿರಲಿ! ಶಾಂತಂ ಪಾಪಂ!....ಕೃಷ್ಣಾ! ನಿನ್ನ ಮಾಯೆ ನನಗೆ ತಿಳಿಯುವುದಿಲ್ಲವಪ್ಪ!....ನನ್ನ ಬುದ್ಧಿಗೆಟುಕದ್ದನ್ನು ಮುಂಚೆಯೇ ಸೂಚಿಸಿ, ಎಚ್ಚರಿಸುವ ಈ ನಿನ್ನ ಕರ್ತವ್ಯ ಪ್ರಜ್ಞೆಗೆ ಸೋತುಶರಣಾಗಿದ್ದೇನೆ! ಪ್ರಭು! ನಾನು ಬಡಬ್ರಾಹ್ಮಣ! ಭವಿಷ್ಯವನ್ನು ನನಗೆ ಹೇಳಬೇಡ! ವರ್ತಮಾನವನ್ನಷ್ಟೇ ಹೇಳು!..... ಸ್ವಾಮಿ! ನನ್ನನ್ನನುಗ್ರಹಿಸು..." ಎನ್ನುತ್ತಾ ಗರ್ಗಾಚಾರ್ಯರು ಕೈಮುಗಿಯುತ್ತಾ ಶ್ರೀಕೃಷ್ಣನ ಪಾದಗಳನ್ನು ಹಿಡಿಯಲು ಬರುತ್ತಾರೆ!! ಶ್ರೀಕೃಷ್ಣನ ಕಣ್ಣಲ್ಲಿ ನೀರು ಹನಿಯುತ್ತದೆ.

ಶ್ರೀಕೃಷ್ಣ: "ಆಚಾರ್ಯ! 'ಧೀರಸ್ತತ್ರ ನ ಮುಹ್ಯತಿ' ಎಂಬುದು ನನ್ನದೇ ವಾಣಿ. ತಾವು ಅಂಥಾ ಧೀರರು! ಪ್ರಜ್ಞೆ-ಧೀಃ ಇದರಿಂದ ಮಾತ್ರ ಬಂದ ಭಾವ ಧೈರ್ಯ. ತಾವು ಯಾವ ಕಾರಣಕ್ಕೂ ಧೈರ್ಯಗೆಡಬಾರದು, ಪ್ರಜ್ಞೆ ಕಳೆದುಕೊಳ್ಳಬಾರದೆಂದಷ್ಟೇ ನಾನು ಹೇಳಿದೆ."

ಗರ್ಗರು[redacted]ಮನೋಭಾವದಿಂದಲೇ): "ವೈದ್ಯನೂ ಪುರೋಹಿತನೂ ಧೈರ್ಯ ಕಳೆದುಕೊ[redacted] ಈಚೆ, ಮರಣದ ಆಚೆ ಏನಿದೆಯೆಂದು ಅರಿಯಬಲ್ಲ, ಕುತೂಹಲಿಗಳಿಗೆ ವೇದಾಂತಿಗೂ ಆ ಧೈರ್ಯ ಬೇಕಾದುದೇ! ನಿನಗೆ ಉಪದೇಶ ಕೊಡುವ ನೆಪದಲ್ಲಿ ನಾನೂ ಅಷ್ಟಿಷ್ಟು ಧೈರ್ಯವನ್ನು ಅಭ್ಯಾಸಮಾಡಿಯೇ ಇದ್ದೇನೆ! ಪ್ರಭು! ನಿನ್ನ ಉಪ್ಪು ತಿಂದು ಬೆಳೆದ ಈ ಶರೀರ ನಿನಗೇ ಅರ್ಪಿತವಾಗಲಿ; ಆ ಧೈರ್ಯ. ನಿನ್ನ ಸೇವೆಗೇ ವಿನಿಯೋಗವಾಗಲಿ. ನಾನೂ ನಿನ್ನ ಪ್ರತಿನಿಧಿಯೇ! ಸಮಯಕ್ಕೆ ಬೇಕಾದ ಪ್ರಜ್ಞೆಯನ್ನು ಮಾತ್ರ ನೀನೇ ಕೊಡು" ಎನ್ನುತ್ತಾ ಆಯಾಸಪಟ್ಟು ಕುಸಿಯುತ್ತಾರೆ. ಶಿಷ್ಯನೊಬ್ಬ ಶೈತ್ಯೋಪಚಾರ ನಡೆಸುತ್ತಾನೆ. ಶ್ರೀಕೃಷ್ಣ ಮೌನವಾಗಿ ಮುಂದೆ ನಡೆಯುತ್ತಾನೆ.

ಸಾತ್ಯಕಿಯ ಅನುಚರರಲ್ಲಿ ಬಹುಪಾಲು, ಸೂರ್ಯಾಸ್ತವಾಗಿ ಬಹುಹೊತ್ತಿನ ಮೇಲೆ, ನಿರಾಯುಧರಾಗಿ ಪಿಂಡಾರಕಕ್ಕೆ ಹೊರಟರೆಂಬುದನ್ನು ಅರಿತ ಕೃತವರ್ಮ ಹಿಗ್ಗಿದ!...ಸರಿರಾತ್ರಿಯಲ್ಲಿ ತನ್ನ ಆಯುಧಾಗಾರವನ್ನೆಲ್ಲ ಬರಿದು ಮಾಡಿ, ಧಾನ್ಯದವಸ ಸಾಗಿಸುವ ತೊಗಲು ಚೀಲಗಳಲ್ಲಿ ಮುಚ್ಚಿಟ್ಟು ಅವೆಲ್ಲವನ್ನು ಪಿಂಡಾರಕಕ್ಕೆ ರವಾನಿಸಿದ! ನಾನಾ ಬಗೆಯ ಮದ್ಯಗಳೂ, ಆಸವಗಳೂ, ಮೈರೇಯಗಳೂ ಪ್ರಚ್ಛನ್ನವಾಗಿ ಹಾಗೇ ವಾಹನಗಳ ಮೇಲೆ ಪಿಂಡಾರಕವನ್ನು ತಲುಪಿದವು! ಸಾತ್ಯಕಿಯ ಕಡೆಯವರೂ ಹಾಗೆಯೇ ಮುಂಚೆ ಸಾಗಿಸಿದ್ದನ್ನು ಕೃತವರ್ಮನೂ ಅವನ ಕಡೆಯವರೂ ಗಮನಿಸಿರಲಿಲ್ಲ. ಶ್ರೀಕೃಷ್ಣಪುತ್ರರೂ, ಪೌತ್ರರೂ, ಉಳಿದ ಯಾದವರೂ ಅದನ್ನೇ ಮಾಡಿದ್ದರು.

ದ್ವಾರಕೆಯ ಮದ್ಯವೆಲ್ಲ ಈಗ ಪಿಂಡಾರಕದಲ್ಲಿದೆ! ಮೃತ್ಯುದೇವತೆಯ ಆದೇಶವನ್ನು ಕಾಯುತ್ತಾ, ಯಾದವ ವೀರರ ನೆತ್ತಿಗೆ ಅಮಲಿನ ರೂಪದಲ್ಲಿ ತಂದ ವಿಷಗಳಿಗೆಯನ್ನು ಅದು ನಿರೀಕ್ಷಿಸುತ್ತಿದೆ!

ಕೃತವರ್ಮನ ಕಡೆಯವರೂ ಆಯುಧಗಳನ್ನು ಎಲ್ಲಿ ಬಚ್ಚಿಡುವುದೆಂದು ಬಹುವಾಗಿ ಚಿಂತಿಸಿ, ಸಾತ್ಯಕಿಯ ಕಡೆಯವರು ಮಾಡಿದಂತೆಯೇ, ಏರಕದ ಜೊಂಡಿನ ನಡುವೆಯೇ ಬಚ್ಚಿಡಲು ಹೋದರು! ಅಲ್ಲಿ ಕೈ ಹಾಕಿದವನೊಬ್ಬೊಬ್ಬನಿಗೂ ಅಲ್ಲೇ ಮುಂಚೆಯೇ ನಿಕ್ಷಿಪ್ತವಾಗಿದ್ದ ಬೇರೊಂದು ಆಯುಧಗಳ ಗಂಟು ಕೈಗೆ ಸೋಕಿದಾಗ, ಆಶ್ಚರ್ಯವೇನೂ ಎನಿಸಲಿಲ್ಲ! ತಮಗಿಂತ ಮುಂಚಿನ ತಂಡದಲ್ಲಿ ಬಂದ ಕೃತವರ್ಮನ ವೀರರು ಅವನ್ನು ಅಲ್ಲಿ ಇಟ್ಟಿರಬೇಕೆಂದೂಹಿಸಿ, ತಮ್ಮ ನಿಶ್ಚಯವನ್ನು ಸಮರ್ಥಿಸಿಕೊಂಡರು!

ಮೃತ್ಯುದೇವತೆ, ಹೀಗೆ ಕೃತವರ್ಮನ, ಸಾತ್ಯಕಿಯ ಆಯುಧಗಳನ್ನು ಬೆರೆಸಿ, ಸೋಂಕಿಸಿ ಇಟ್ಟು ಬಿಟ್ಟಿತು! ಯೋಧರ ಕೈಕ್ಕೆ ಕೂಡುವುದೊಂದೇ ಉಳಿಯಿತು! ಅದನ್ನು ಮದಿರಾ ದೇವತೆ ತಾನು ಮಾಡುವುದಾಗಿ ವಾಗ್ದಾನ ಮಾಡಿ, ಪಿಂಡಾರಕದಲ್ಲಿ ಬಂದಿಳಿದಿತ್ತು!

ದೂರದ ಶಿವಾಲಯದ ರುದ್ರದೇವ ತನ್ನ ರುದ್ರತಾಂಡವದ ವೇಳೆಯನ್ನು ನಿರೀಕ್ಷಿಸುತ್ತಿದ್ದ. ಶ್ರೀಕೃಷ್ಣ ಯದುಸಂಹಾರಕ್ಕೆ, ಯಾದವರ ಕೈಯ್ಯಲ್ಲೇ, ಸರಿಯಾದ ರುದ್ರಭೂಮಿಯನ್ನು ಆರಿಸಿಟ್ಟಿದ್ದ.

ಪಿಂಡಾರಕದ ಬಡಬ್ರಾಹ್ಮಣರು ಭೀತರಾಗಿದ್ದರು! ಬಹುಪಾಲು ಊರುಬಿಟ್ಟು ಹೋಗಿದ್ದರು. "ತೀರ್ಥಯಾತ್ರೆಗೆ ಬರುವ ಯಾದವರು ಆಯುಧ ಏಕೆ ತರುತ್ತಿದ್ದಾರೆ? ಮದ್ಯವನ್ನೇಕೆ ತರುತ್ತಿದ್ದಾರೆ?" ಎಂದು ಅವರು ಗಾಬರಿಯಾದರು! ಪ್ರಶ್ನಿಸಿದವರು ಯಾದವ ವೀರರ ಪ್ರಹಾರಕ್ಕೂ ತುತ್ತಾಗಿದ್ದರು. ಹಲವು ಮನೆಗಳನ್ನು ಯದುವೀರರು ಬಲಾತ್ಕಾರವಾಗಿಯೂ ಆಕ್ರಮಿಸಿದ್ದರು. ಪಿಂಡಾರಕದ ಸ್ತ್ರೀಯರು ತಮಗೆ ಉಳಿಗಾಲಲಿಲ್ಲವೆಂದು ಪತಿಗಳೊಂದಿಗೆ ಸಿಕ್ಕದಿಕ್ಕುಗಳತ್ತ ಓಡಹತ್ತಿದ್ದರು. ಅಗ್ರಹಾರದ ಸುತ್ತ ಇತರ ವರ್ಣದವರೂ ಊರು ಬಿಟ್ಟು ಯಾದವರಿಗೆ ಅನುಕೂಲವನ್ನೇ ಮಾಡಿದ್ದರು. ಸಾವಿರಾರು ತಾತ್ಕಾಲಿಕ ಶಿಬಿರಗಳಿಂದ ಅಲಂಕೃತವಾಗಿದ್ದ ಪ್ರಭಾಸದ ಆ ಪುಣ್ಯತೀರ ಏಕೋ ಯುದ್ಧಭೂಮಿಯಂತೆ ಕಾಣುತ್ತಾ, ಅನುಭವ ಶಾಲಿಗಳಾಗಿದ್ದ ಹಿರಿಯರಿಗೆ ಕುರುಕ್ಷೇತ್ರವನ್ನೇ ನೆನೆಪಿಸುತ್ತಿತ್ತು.

ಶ್ರೀಕೃಷ್ಣನ ರಥ ಕೊನೆಯದಾಗಿ ಅತ್ತ ಹೊರಟಿತ್ತು!

* * * * *

# ೮. ಮಹಾಪಾನ! ಸರ್ವನಾಶ!!

ಶ್ರೀ ಕೃಷ್ಣ ಪತ್ನಿಯರೆಲ್ಲ ಅವರವರ ಪುತ್ರರ ನೇತೃತ್ವದಲ್ಲಿ ಪಿಂಡಾರಕವನ್ನು ಸೇರಿಯಾಗಿತ್ತು. ಶ್ರೀಕೃಷ್ಣನೊಬ್ಬ ಮಾತ್ರ ಹಿಂದೆ ಉಳಿದಿದ್ದ. ಉಗ್ರಸೇನ ಮಹಾರಾಜನನ್ನು ಕೊನೆಯದಾಗಿ ಕಂಡು, ನಮಸ್ಕರಿಸಿ, ಸಾಂತ್ವನದ ಮಾತುಗಳನ್ನಾಡಿ, ಊರಿನಲ್ಲಿ ಭೋಜಾಂಧಕವೃಷ್ಣಿ ಯದುವೀರರಲ್ಲಿ ಕೇವಲ ವಯೋವೃದ್ಧರೂ, ದುರ್ಬಲರೂ ಮಾತ್ರವೇ ಉಳಿದಿರುವರೆಂಬುದನ್ನು ಚಾರರ ಮೂಲಕ ಅರಿತು, ಇನ್ನೇನು ಹೊರಡಬೇಕೆಂಬಷ್ಟರಲ್ಲಿ, ಆ ಏಕಾಂತ ಗೃಹಕ್ಕೆ ವಾಯುದೇವನೂ, ಬ್ರಹ್ಮನೂ, ದೇವ ಮುಖ್ಯರೂ ನಾರದರೂ ರಹಸ್ಯವಾಗಿ ಆಗಮಿಸಿದರು. ಶ್ರೀಕೃಷ್ಣನಿಗೆ ಅಚ್ಚರಿ ಏನಾಗಲಿಲ್ಲ!

"ಪ್ರಭು! ಭೂಲೋಕದಲ್ಲಿ ನಿನ್ನ ವ್ಯಾಪಾರವೆಲ್ಲ ಮುಗಿದಂತಾಯಿತಲ್ಲವೆ? ಸ್ವಸ್ಥಾನಕ್ಕೆ ತೆರಳುವುದಕ್ಕೆ ಇಷ್ಟವಾದಲ್ಲಿ ಆಗಬಹುದು. ನಮ್ಮ ಕಾರ್ಯವನ್ನೂ ಮುಗಿಸಿಕೊಟ್ಟು ಭೂಭಾರವನ್ನು ಇಳುಹಿದ ನಿನಗೆ ಮಂಗಳವಾಗಲಿ, ಜಯಮಸ್ತು" ಎಂದು ಮಂಗಳಾಚರಣ ಮಾಡಿದರು.

ಶ್ರೀಕೃಷ್ಣ: "ಸರಿಯಾದ ಸಮಯಕ್ಕೆ ಬಂದಿದ್ದೀರಿ! ಇನ್ನು ಕೊಂಚವೇ ವ್ಯಾಪಾರ ಉಳಿದಿದೆ!' ನಡೆಯಿರಿ ಬರುತ್ತೇನೆ" ಎಂದ. ದೇವತೆಗಳು ಅದೃಶ್ಯರಾದರು.

ಸೂರ್ಯೋದಯವಾಗಲು ಇನ್ನು ಎರಡು ಮುಹೂರ್ತವಷ್ಟೇ ಉಳಿದಿತ್ತು. ಆ ರಾತ್ರಿ ದ್ವಾರಕೆಯಲ್ಲಿ ಯಾರೂ ನಿದ್ರಿಸಿದಂತೆ ಕಾಣಲಿಲ್ಲ! ವೈಭವೋಪೇತವಾಗಿದ್ದು, ಧನಧಾನ್ಯ ಸಮೃದ್ಧಿಯಿಂದಲೂ, ಗೋಸಂಪತ್ತಿನಿಂದಲೂ, ಮೇಲಾಗಿ ಅವತಾರಿಯ ನಿವಾಸದಿಂದಲೂ, ಲಕ್ಷ್ಮೀನಿವಾಸವಾಗಿ ಆವರೆಗೆ ಶೋಭಿಸುತ್ತಿದ್ದ ಆ ದಿವ್ಯನಗರಿಯಲ್ಲಿ ಅಂದು ವಿಲಕ್ಷಣ ಶೂನ್ಯ ವಾತಾವರಣ ಕಾಣಬರುತ್ತಿತ್ತು.

ದಾರುಕ ಶ್ರೀಕೃಷ್ಣನ ದಿವ್ಯರಥವನ್ನು ಅಣಿಮಾಡಿ ಅರಮನೆಯ ಮುಂದೆ ತಂದು ನಿಲ್ಲಿಸಿದ್ದ. "ಸ್ನಾನವನ್ನು ಗೋಮತೀ ನದಿಯಲ್ಲಿ ಮುಗಿಸಿ, ಪ್ರಾತರಗ್ನಿ ಹೋತ್ರವನ್ನೂ, ದಾನಧರ್ಮಗಳನ್ನೂ, ಇತರ ಹೆಚ್ಚಿನ ಅಂದಿನ ಕಟ್ಟಳೆಗಳನ್ನೂ ಸಮುದ್ರ ತೀರದಲ್ಲೇ ಉಳಿದ ಯಾದವ ವೀರರೊಡನೆ ಮಾಡಿದರಾಯಿತು! ನಡೆ" ಎಂದೊಡನೆ, ರಥವನ್ನು ದಾರುಕ ನಡೆಸಿದ.

ಶ್ರೀಕೃಷ್ಣರಥದ ಕುದುರೆಗಳು ಬಿಸಿಗಣ್ಣೀರನ್ನು ಸುರಿಸುತ್ತಾ ಇಷ್ಟವಿಲ್ಲದೆ ಓಡುತ್ತಿದ್ದುದನ್ನು ಗಮನಿಸಿ, ದಾರುಕ ಮಾರ್ಗಮಧ್ಯದಲ್ಲಿ ರಥವನ್ನು ನಿಲ್ಲಿಸಿ, ಕೆಳಗಿಳಿದು ಕುದುರೆಗಳ ಮೈತಡವಿ, ಬೆನ್ನುತಟ್ಟಿ, ಅವುಗಳನ್ನು ಸಮಾಧಾನ ಸ್ಥಿತಿಗೆ ತರಲು ಅಶ್ವವಿದ್ಯಾಶಾಸ್ತ್ರದಲ್ಲಿ ಹೇಳಿದ್ದ ವಿಧಾನವನ್ನು ಅನುಸರಿಸಿದ! ಆದರೂ ಕುದುರೆಗಳು ಅಳುತ್ತಿದ್ದುದು ಶ್ರೀಕೃಷ್ಣನ ವ್ಯಗ್ರಮನಸ್ಕ ಸ್ಥಿತಿಯಲ್ಲೂ ಕಣ್ಣಿಗೆ ಬಿದ್ದಿತು!!

ಒಡನೆಯೇ ಶ್ರೀಕೃಷ್ಣ ಪ್ರಭುವು ಕೆಳಗಿಳಿದು ಕುದುರೆಗಳನ್ನು ನೇವರಿಸಿ, ಹಿಂದೆ ಗೋಕುಲದಲ್ಲಿ ಗೋವುಗಳನ್ನೂ ಕರುಗಳನ್ನೂ ಮುದ್ದಿಸುತ್ತಿದ್ದಂತೆ, ಆ ಪ್ರೇಮಾರ್ದ್ರಹೃದಯದ ಅಶ್ವಗಳನ್ನು ಮುದ್ದಾಡಿ, ತಾನೂ ಬಾಷ್ಪಸುರಿಸಲಾರಂಭಿಸಿದ!

ದಾರುಕನಿಗೆ ಏನೂ ತಿಳಿಯಲಿಲ್ಲ! ಶ್ರೀಕೃಷ್ಣ ಹೇಳಿದ "ದಾರುಕ! ಈ ರಥದಲ್ಲಿ ಇದು ನನ್ನ ಕಡೆಯ ಯಾತ್ರೆ! ದ್ವಾರಕೆಯ ನಮ್ಮ ಯಾದವರಿಗೆ ಅರ್ಥವಾಗದ ಈ ವಿಷಯ ಈ ಮೂಕಜಂತುಗಳಿಗೆ ಹೇಗೋ ತಿಳಿದಿರುವ ಈ ಆಶ್ಚರ್ಯ ನೋಡು!... ಜ್ಞಾನಿಯಾಗಿ ದೇವರ ಸೇವೆ ಮಾಡುತ್ತ ಧನ್ಯವಾಗಿ

ಬಾಳಲು, ಆಯುಷ್ಯ ಸಾರ್ಥಕ ಮಾಡಿಕೊಳ್ಳಲು ಯಾವ ಜನ್ಮವಾದರೇನು, ದಾರುಕ? ಅದನ್ನು ಮಾಡದ ಮನುಷ್ಯ ಜನ್ಮ ಎಷ್ಟು ವ್ಯರ್ಥ!" ಎಂದವನೇ "ಇನ್ನೊಂದು ಮಾತಿದೆ... ಮುಂದೆ ಗಡಿಬಿಡಿಯಲ್ಲಿ ವಿವರವಾಗಿ ಹೇಳುವುದಕ್ಕೆ ನನಗೆ ಅವಕಾಶ ಸಿಗುವುದೋ ಇಲ್ಲವೋ; ಈಗಲೇ ಹೇಳಿಬಿಡುತ್ತೇನೆ... ನಿನಗೊಂದು ಕರ್ತವ್ಯ ಇದೆ. ನಮ್ಮ ಯಾದವ ವೀರರೆಲ್ಲ, ಈಗ ನಾನೂ ನೀನೂ ಹೊರಟಿರುವ ಜಾಗಕ್ಕೆ, ಪಿಂಡಾರಕಕ್ಕೆ ಹೋಗಿಸೇರಿರುವರಷ್ಟೆ! ಇಂದು ಪುಣ್ಯಕಾಲ, ಪರ್ವಕಾಲ. ಉಪವಾಸ,ಪೂಜೆ, ಪಾರಾಯಣಗಳಿಂದ ಈ ದಿನ ಮುಗಿಸಿದರೆ, ಪಾಪ ಪರಿಹಾರವಾದೀತು... ಆದರೆ ನಮ್ಮವರು ಇದನ್ನೊಂದು ಋಷಿಯ ವಿಹಾರವೆಂದು ತಿಳಿದು ಮದ್ಯವನ್ನೂ, ಆಯುಧಗಳನ್ನೂ, ಪತ್ನಿಯರಲ್ಲದೆ ಭೋಗಸ್ತ್ರೀಯರನ್ನೂ ಹೇರಳ ಸಂಖ್ಯೆಯಲ್ಲಿ ಅಲ್ಲಿ ಸೇರಿಸಿರುವುದು ಕೇಡುಗಾಲದ ಸೂಚನೆ! ಮುಂದೇನು ಅಪಾಯ ಕಾದಿದೆಯೋ ಹೇಳಬರುವಂತಿಲ್ಲ!! ಇಲ್ಲಿನ ಸ್ಥಿತಿ ವಿಷಮವಾದರೆ, ನನ್ನ ಕೈ ಸಹ ಮೀರುವಂತಾದರೆ, ನೀನು ಹಸ್ತಿನಾವತಿಗೆ ತುರ್ತಾಗಿ ಹೋಗಿ ಬರಬೇಕಾಗುತ್ತದೆ! ಪಂಚಪಾಂಡವರು ನನ್ನ ಬಹಿಃಪ್ರಾಣಗಳೆಂಬುದು ಲೋಕಪ್ರಸಿದ್ಧವಷ್ಟೆ! ಅದರಲ್ಲಿ ಅರ್ಜುನನಿಗೂ ನನಗೂ ಇರುವ ತಾದಾತ್ಮವನ್ನು ನೀನೂ ಚೆನ್ನಾಗಿ ಬಲ್ಲೆ! 'ಯೋಽಹಂ ತಮರ್ಜುನಂ ವಿದ್ಧಿ ಯೋಽರ್ಜುನಃ ಸೋಽಹಮೇವತು!' (ಅರ್ಜುನನು ಯಾರೋ ಅವನು ನಾನೇ ಎಂದು, ನಾನಾರೋ ಅವನು ಅರ್ಜುನನೇ ಎಂದೂ ತಿಳಿ) ಎಂಬ ಮಾತೂ ನನ್ನದು ಪ್ರಸಿದ್ಧವಿದೆ! ಕೈಮೀರಿ, ಅನಾಹುತವಾದರೆ, ಅರ್ಜುನನನ್ನು ಕಂಡು ಇಲ್ಲಿ ನಡೆಯುವುದನ್ನೆಲ್ಲ ವಿವರಿಸಿಹೇಳಿ, ಬೇಗ ಅವನನ್ನು ಇಲ್ಲಿಗೆ ಕರೆತರಬೇಕಾಗುತ್ತದೆ! ಈ ರಥ ಆಗ ನಿನಗೆ ಸಿಗಲಾರದು! ಯಾವ ರಥವಾದರೂ ಸರಿ, ಯಾವ ಕುದುರೆಗಳಾದರೂ ಸರಿ! ಯಾರನ್ನೂ ನೀನಾಗ ಕೇಳಬೇಕಾಗಿರುವುದಿಲ್ಲ! ...ಹೆಚ್ಚಿನ ವಿವರಗಳನ್ನು ಈಗ ಕೇಳಬೇಡ! ನನ್ನ ಅನಿಸಿಕೆಯನ್ನು ಮಾತ್ರ ನಿನಗೆ ಮುಂಗಡವಾಗಿ ಹೇಳಿದ್ದೇನೆ. ಮನಸ್ಸಿನಲ್ಲಿಟ್ಟುಕೋ. ಸೂಕ್ತಕಾಲದಲ್ಲಿ ನಾನು ಹೇಳಿದಂತೆ ನಡೆ."

ದಾರುಕ 'ಏನೂ ತಿಳಿಯಲಿಲ್ಲ'ವೆಂಬಂತೆ ತಲೆಯಲ್ಲಾಡಿಸಿದ! ಕುದುರೆಗಳು ಭಾರವಾದ ಹೆಜ್ಜೆಗಳನ್ನಿಕ್ಕುತ್ತ ಪಿಂಡಾರಕದತ್ತ ನಡೆಯಲಾರಂಭಿಸಿದವು!

* * * * *

ರಥ ಓಡುತ್ತಿತ್ತು. ಶ್ರೀಕೃಷ್ಣ ತನ್ನ 'ಸೋದರಿ' ಯೋಗಮಾಯೆಯನ್ನು ಮನದಲ್ಲಿ ನೆನೆದ:

ದುರ್ಗೆ: "ಅಣ್ಣ! ಏಕೆ ನನ್ನನ್ನು ನೆನೆಸಿದೆ?"

ಶ್ರೀಕೃಷ್ಣ: "ತಂಗಿ! ನಾನು ಅವತರಿಸಿದ ಸಂದರ್ಭದಲ್ಲಿ ನಿನಗೆ ಕೊಟ್ಟ ವರಗಳ ನೆನಪಿದೆಯೆ?"

ದುರ್ಗೆ: "ಏಕಿಲ್ಲ! ನಿನ್ನ ಅವತಾರ ವೇಳೆಯಲ್ಲಿ ನಿನ್ನ ಆಜ್ಞೆಯನ್ನು ಪರಿಪಾಲಿಸುವುದು ನನ್ನ ಕರ್ತವ್ಯವೇ ಆಗಿದ್ದರೂ, ನೀನಾಗಿಯೇ ಆಗ ಕೊಟ್ಟ ವರಗಳು ಅವು. ಈಗ ಆ ನೆನಪೇಕೆ?"

ಶ್ರೀಕೃಷ್ಣ: "ಕಾರಣ ಆಮೇಲೆ ಹೇಳುತ್ತೇನೆ... ಏನು ವರ ಕೊಟ್ಟೆ ಹೇಳು."

ದುರ್ಗೆ: "ಇಂದ್ರದೇವ ನನ್ನನ್ನು ಸೋದರಿಯನ್ನಾಗಿ ಸ್ವೀಕರಿಸಲಿ, ನನಗೆ ಕೌಶಿಕೀ ಎಂದು ಹೆಸರಾಗಲಿ ಎಂಬುದೊಂದು."

ಶ್ರೀಕೃಷ್ಣ: "ಆಮೇಲೆ?"

ದುರ್ಗೆ: "ಆಮೇಲೆ, ಶುಂಭನಿಶುಂಭರನ್ನು ನಾನು ಸಂಹರಿಸಲೆಂದೂ, ಸಾವಿರಾರು ದೈತ್ಯ ದಾನವರ ವಧೆಗೆ ಕಾರಣಳಾಗಬೇಕೆಂದೂ, ಜನರು ನನ್ನನ್ನು ನಾನಾ ಸ್ಥಾನಗಳಲ್ಲಿ, ಬೆಟ್ಟಗಳಲ್ಲಿ, ದುರ್ಗಗಳಲ್ಲಿ, ಗುಹೆಗಳಲ್ಲಿ, ನದೀ ತಟಾಕ ತೀರಗಳಲ್ಲಿ, ಕಾಡುಗಳಲ್ಲಿ, ದಾರಿಗಳು ಸೇರುವಲ್ಲಿ, ಎಲ್ಲೆಂದರಲ್ಲಿ, ಜಗತ್ತಿನ ಎಲ್ಲೆಡೆ ಪೂಜಿಸುವಂತಾಗಲೆಂಬುದು ಇನ್ನೊಂದು."

ಶ್ರೀಕೃಷ್ಣ: "ಆಮೇಲೆ?"

ದುರ್ಗೆ: (ನಗುತ್ತಾ) "ಎಲ್ಲ ಹೇಳಬೇಕೇನು? ಈಗ ಯಾವುದಕ್ಕಾಗಿ ಇದೆಲ್ಲ ಕೇಳುತ್ತಿರುವೆಯೆಂದು ತಿಳಿದರೆ, ತಟ್ಟನೆ ಆ ವರ ನೆನಪಾಗುತ್ತದೆ...(ಯೋಚಿಸಿ) ನಾನು ಎಲ್ಲರ ದೇವಿಯಾಗಿ 'ಎಲ್ಲಮ್ಮ'ನಾಗಿ, ಶಬರ, ಬರ್ಬರ, ಪುಳಿಂದ, ನಾಗ, ಯಕ್ಷಾದಿ ಸರ್ವರಿಂದಲೂ ಪೂಜಿಸಲ್ಪಡುತ್ತಾ, ಕೋಳಿ, ಆಡು, ಸಿಂಹ, ಹುಲಿ ಮೊದಲಾದ ಸಾಧುಪ್ರಾಣಿಗಳಿಂದಲೂ ಭಯಂಕರ ಆರಣ್ಯಕ ಪ್ರಾಣಿಗಳಿಂದಲೂ ಸದಾ ಸುತ್ತುವರೆಯಲ್ಪಡುತ್ತಾ, ವಿಶೇಷವಾಗಿ, ವಿಂಧ್ಯಾಟವಿಯಲ್ಲಿ, ನನ್ನ ಸುತ್ತ ಸದಾ ಘಂಟಾನಾದವು ಕೇಳಿ ಬರುತ್ತಿರುವಂತೆ ಆಗಲೆಂದೂ, ನಾನು ಭಯಂಕರ ಆಯುಧಗಳನ್ನು ಕೈಯಲ್ಲಿ ಹಿಡಿದು, ಬಿಚ್ಚಿದ ತಲೆಗೂದಲುಗಳಿಂದ, ಭಯಂಕರಿಯಾಗಿ ಕಾಣುತ್ತಾ, ಮಂಗಳೆಯಾದರೂ ಅಮಂಗಳ ರೂಪದಲ್ಲಿ ವಿಹರಿಸುತ್ತಾ, ಭಕ್ತರು ಕೊಡುವ ಮದ್ಯಮಾಂಸ, ಪಶುಬಲಿಗಳನ್ನು ಸ್ವೀಕರಿಸುತ್ತಾ, ದಾನವ ಸಂಹಾರ ಕಾರ್ಯದಲ್ಲಿ ಸದಾ ನಿನಗೆ ನೆರವಾಗಿರಬೇಕೆಂಬುದು ಮತ್ತೊಂದು".

ಶ್ರೀಕೃಷ್ಣ: "ಈ ಕೊನೆಯದನ್ನು ಮತ್ತೊಮ್ಮೆ ಹೇಳು.... ನನ್ನ ವಾಕ್ಯಗಳೇ ನನೆಪಾದರೆ ಅದನ್ನೇ ಹೇಳು..."

ದುರ್ಗೆ: "ನಿನ್ನ ವಾಕ್ಯಗಳನ್ನೇ ಹೇಳುವೆ, ಕೇಳು:

*ಪ್ರಕೀರ್ಣಕೇಶೀ ಮೃತ್ಯುಶ್ಚ ಸುರಾಮಾಂಸಬಲಿಪ್ರಿಯಾ!*
*ಸುರಾಮಾಂಸೋಪಹಾರೈಶ್ಚ ಭಕ್ಷ್ಯಭೋಜ್ಯೈಶ್ಚ ಪೂಜಿತಾ!*
*ನೃಣಾಂ ಅಶೇಷಕಾಮಾಂಸ್ತ್ವಂ ಪ್ರಸನ್ನಾ ಸಂಪ್ರದಾಸ್ಯಸಿ!!*

ಇದೇ ತಾನೇ ಇಲ್ಲಿ ನೀನು ನೆನೆದದ್ದು?

ಶ್ರೀಕೃಷ್ಣ: "ಹೌದು. ಅದರರ್ಥವನ್ನು ನಿನಗೆ ನಾನು ಹೇಳಬೇಕಿಲ್ಲವಷ್ಟೆ! ಈಗ ನೀನು ನನಗೆ ಮತ್ತೊಮ್ಮೆ ಸಹಾಯ ಮಾಡಬೇಕಾಗಿದೆ. ಹೆಂಡದ ಹೊಳೆ ಹರಿಯುವಲ್ಲಿ, ಮಾಂಸದ ರಾಶಿ ಬೀಳುವಲ್ಲಿ, ನೀನು ಮತ್ತೆ ಕಾಣಿಸಿಕೊಂಡು, ಕಾಳಿಯಾಗಿ, ಭದ್ರಕಾಳಿಯಾಗಿ, ವಿಹರಿಸಬೇಕಾಗಿದೆ."

ದುರ್ಗೆ: "ಅಣ್ಣ! ನಿನ್ನ ಆಜ್ಞೆ ಅನುಲ್ಲಂಘನೀಯವೆಂಬುದೇನೋ ಸರಿಯೆ! ಆದರೆ ನಿನ್ನ ಮಾಯಾ ರೂಪಿಣಿಯಾಗಿ, ಯೋಗನಿದ್ರೆ ಎನಿಸಿದ ನನಗೆ ಈ ಘೋರ ತಾಮಸ ವ್ಯಾಪಾರವೇಕೆ? ಅಪವಿತ್ರವೆನಿಸಿದ ಮದ್ಯಮಾಂಸಗಳಿಂದ ನನಗೇನಾಗಬೇಕಾಗಿದೆ?"

ಶ್ರೀಕೃಷ್ಣ: "ಆಗಬೇಕಾದುದು ನಿನಗೇನಲ್ಲ! ತಾಮಸ ವ್ಯಾಪಾರವು ಸಾತ್ವಿಕರಿಗೆ ಬೇಡವಾದರೂ, ಜಗದ್ವ್ಯಾಪಾರಕಾರ್ಯದಲ್ಲಿ ಅದು ಅನಿವಾರ್ಯ. ದುಷ್ಟಬುದ್ಧಿಯ ದಾನವರು, ಅಸುರರು, ದೈತ್ಯರು ಇತ್ತ ತಿದ್ದಿಕೊಂಡು ಬಾಳದವರೂ, ಅತ್ತ ಅಳಿಯಲಾರದವರೂ ಆದರೆ, ಲೋಕದ ಗತಿ ಸಾಗುವುದೆಂತು? ಮದ್ಯಮಾಂಸದ ಚಟ ಅಂಟಿದವನು, ಅಮಲು ತಲೆಗೇರಿದವನು, ಅದರ ಸೆಳೆತದಿಂದ, ಪಾಶದಿಂದ, ಬಿಡುಗಡೆ ಹೊಂದುವನೇ? ಅವನನ್ನು ಅವನ ಪಾಶದಿಂದಲೇ ಮುಗಿಸಿ ಲೋಕಕಲ್ಯಾಣವನ್ನು ನಾನು ಮಾಡಬೇಕಾಗಿದೆ. ಮದ್ಯಪಾನದಿಂದ ಬುದ್ಧಿ ಕೆಡುವುದರ ಮೂಲಕ, ಕಾರ್ಯಾಕಾರ್ಯವಿವೇಕವೂ ಕೆಟ್ಟು, ಪುಣ್ಯ ಪಾಪ ವ್ಯತ್ಯಾಸ ನಶಿಸಿ, ನೀತಿ-ಅನೀತಿಗಳ ಮರ್ಮ ತಿಳಿಯದೆ, ಒಳಗಣ್ಣು ಕುರುಡಾಗಿಯೇ ಅಲ್ಲವೆ, ಮನುಷ್ಯರು ಅಧೋಗತಿಗಿಳಿಯುವುದು? ನನ್ನವರೆನಿಸಿದ ಈ ಯಾದವರ ಈಗಿನ ಸ್ಥಿತಿ ನೋಡು! ಅವರು ಮಾಡದ ಅಕಾರ್ಯ ಉಂಟೇ?... ಅವರು ಭೂಮಿಯ ಮೇಲೆ ಬಾಳುವ ಹಕ್ಕನ್ನು ಕಳೆದುಕೊಂಡ ನತದೃಷ್ಟರು!!... ಹಾದರಕ್ಕೂ ಇಳಿದವರು, ಈ ಕೊಲೆಗಡುಕರು!!...."

ದುರ್ಗೆ: "ನಾನೇನು ಮಾಡಬೇಕೆನ್ನುವೆ?"

ಶ್ರೀಕೃಷ್ಣ: "ಹೇಳಿದೆನಲ್ಲ! ಅವರ ಕುಡಿತದ ಪ್ರವದಲ್ಲಿ ಸೇರಿಕೊಂಡು ನರ್ತಿಸಲಾರಂಭಿಸು. ನಿನ್ನ ಅನೇಕ ನಾಮಗಳಲ್ಲಿ, ರೂಪಗಳಲ್ಲಿ 'ಮದಿರಾ' ಎಂಬುದೂ ಒಂದು ಉಂಟಷ್ಟೆ! ಆ ರೂಪದಲ್ಲಿ ಈ ಅಯೋಗ್ಯರನ್ನು ಇಂದು ಮುಗಿಸು."

ದುರ್ಗೆ: "ಅಪ್ಪಣೆ" ಎನ್ನುತ್ತಾ ಮಾಯವಾಗುತ್ತಾಳೆ.

*****

ಪಿಂಡಾರಕದಲ್ಲಿ ಸೂರ್ಯೋದಯವಾಯಿತು. ಅಲ್ಲಿ ಸೇರಿದ್ದ ಯಾದವ ವೀರರಿಗೆಲ್ಲ ಯಾದವ ಕುಮಾರರಿಗೆಲ್ಲ ಅದು ಕೊನೆಯ ಸೂರ್ಯೋದಯವೆಂಬುದನ್ನು ಅವರಾರೂ ಅರಿತಿದ್ದಂತಿಲ್ಲ!

ಕೃತವರ್ಮ, ಸಾತ್ಯಕಿ, ಅಕ್ರೂರ, ಸಾಂಬ... ಇವರಾರೂ ಹಿಂದಿನ ರಾತ್ರಿ ನಿದ್ರಿಸಿಯೇ ಇರಲಿಲ್ಲ.

ವಯಸ್ಸಾದವರು ಕೆಲವರು ಸಮುದ್ರ ಸ್ನಾನ ಮಾಡಿ, ಪಿತೃತರ್ಪಣಾದಿಗಳನ್ನು ಆಚರಿಸುತ್ತಿದ್ದರು. ಗರ್ಗರೂ ಅವರ ಶಿಷ್ಯರೂ ಚಟುವಟಿಕೆಯಿಂದ ಆ ಕಾರ್ಯವನ್ನು ನಡೆಸುತ್ತಿದ್ದರು.

ಯಾದವ ಮಹಿಳೆಯರು ಬಗೆಬಗೆಯ ಬಣ್ಣದ ಚೀನಾಂಬರಗಳನ್ನುಟ್ಟು ಬಾಗಿನಗಳನ್ನು ಅಲ್ಲಿ ದಾನಾರ್ಥಿಗಳಾಗಿ ಸೇರಿದ್ದವರಿಗೆ ಹಂಚುತ್ತಿದ್ದುದು ಇನ್ನೊಂದು ಕಡೆಯ ದೃಶ್ಯವಾಗಿತ್ತು.

ಆಶೀರ್ವಾದ ಹೇಳುತ್ತಿದ್ದ ಬ್ರಾಹ್ಮಣರ ವೇದಘೋಷ ಮುಗಿಲನ್ನು ಮುಟ್ಟುತ್ತಿತ್ತು. ಮಧ್ಯವಯಸ್ಸಿನ ಯಾದವವೀರರು ಈ ದಾನಧರ್ಮಗಳನ್ನೂ, ಆಶೀರ್ವಾದ ಹೇಳುತ್ತಿದ್ದ ಬ್ರಾಹ್ಮಣರನ್ನೂ ತಿರಸ್ಕಾರದಿಂದ ನೋಡುತ್ತಾ ಮೀಸೆ ತಿರುವುತ್ತಾ ಸಮುದ್ರತೀರದಲ್ಲಿ ಅತ್ತಿಂದಿತ್ತ ಇತ್ತಣಿಂದತ್ತ ತಿರುಗಾಡುತ್ತಿದ್ದರು! ಅವರ ಮನಸ್ಸಿನಲ್ಲಿ ಏನೋ ವಿಧವಾದ ಅಶಾಂತಿ ಇದ್ದುದು ವ್ಯಕ್ತವಾಗುತ್ತಿತ್ತು.

*****

ಶತಧನ್ವನ ಮಗ ಸಹಸ್ರಧನ್ವ ಕೋಪಾವಿಷ್ಟನಾಗಿ ಕೃತವರ್ಮನ ಶಿಬಿರದ ಬಳಿ ತನ್ನ ಅನುಚರರೊಡನೆ ಅಡ್ಡಾಡುತ್ತ ಏನೋ ಅವಕಾಶಕಾಯುತ್ತಿದ್ದವನಂತೆ ಕಂಡ. ಹಿಂದಿನ ರಾತ್ರಿಯಷ್ಟೆ , ಸಾತ್ಯಕಿ ಅವನನ್ನು ಕಂಡು "ನಿನ್ನ ತಂದೆಯನ್ನು ಸತ್ರಾಜಿತನ ಕೊಲೆಗೆ ಪ್ರೇರಿಸಿದವನು ಈ ಕೃತವರ್ಮ! ಸ್ಯಮಂತಕವನ್ನು ಅವನು ಕದಿಯುವಂತೆ ಪ್ರೇರಿಸಿದವನೂ ಈ ಕೃತವರ್ಮನೇ! ಬಲರಾಮಕೃಷ್ಣರು, ಈ ಅಕೃತ್ಯಗಳು ನಡೆದ ಮೇಲೆ, ನಿನ್ನ ತಂದೆಯನ್ನು ಬೆನ್ನಟ್ಟಿದಾಗ ಅವನು ಸಹಾಯ ಕೇಳಿದ್ದೂ ಈ ಹಾಳು ಕೃತವರ್ಮನನ್ನೇ! ಆಗ ನಿನ್ನ ತಂದೆಯನ್ನು ಕೈಬಿಟ್ಟವನೂ ಈ ದುರುಳ ಕೃತವರ್ಮನೇ!! ಅಂತೂ ಶ್ರೀಕೃಷ್ಣನ ಚಕ್ರಾಯುಧಕ್ಕೆ ನಿನ್ನ ತಂದೆ ಆಹುತಿಯಾದ; ಅದೂ ದ್ವಾರಕೆಯಲ್ಲಲ್ಲ! ಮಿಥಿಲೆಯ ಬಳಿ!! ನಿನ್ನ ತಂದೆಯನ್ನು ಹೀಗೆ ದುಷ್ಕೃತ್ಯಗಳಿಗೆ ಪ್ರೇರಿಸಿ, ತಾನು ಹಿಂದೆ ಸರಿದು, ಅವನನ್ನು ಕೊಲ್ಲಿಸಿ ಜೀವಹಿಡಿದುಳಿದ ಈ ಉಸಿರುಗಳ್ಳ ಇನ್ನೂ ಬದುಕಿರಬೇಕೋ, ಬೇಡವೋ ಎಂದು ನಿಶ್ಚಯಿಸಿ ಕಾರ್ಯೋನ್ಮುಖನಾಗಲು ಇಂದು ನಿನಗೆ ಸದವಕಾಶ; ಇದನ್ನು ಬಿಟ್ಟರೆ ಇಂಥದೊಂದು ಮುಂದೆ ಎಂದೂ ನಿನಗೆ ದೊರೆಯಲಾರದು, ಎಚ್ಚರಿಕೆ. ನಿನಗೆ ಮಂಗಳವಾಗಲಿ. ನಿನಗೆ ಸಹಾಯಕ್ಕೆ ನಾನೂ ನನ್ನವರೂ ಇದ್ದೇವೆ. ಭಯಪಡಬೇಡ" ಎಂದು ಸಾತ್ಯಕಿ ಅವನನ್ನು ಹುರಿದುಂಬಿಸಿದ್ದ.

ಗೂಢಚಾರರ ಮೂಲಕ ಇದನ್ನರಿತ ಕೃತವರ್ಮ ಒಂದತ್ತ ಸಾತ್ಯಕಿಯ ಮೇಲೂ ಇನ್ನೊಂದತ್ತ ಸಹಸ್ರಧನ್ವನ ಮೇಲೂ ಎರಗಲು ಕಾಲಕಾಯುತ್ತ ಕುದಿಯುತ್ತಿದ್ದ.

*****

ಬಲರಾಮ ಸಮುದ್ರ ದಂಡೆಯ ಮಳಲ ದಿನ್ನೆಯ ಮೇಲೆ ಏಕಾಂತವಾಗಿ ಏನನ್ನೋ ಚಿಂತಿಸುತ್ತಿದ್ದಾನೆ! ಶ್ರೀಕೃಷ್ಣ ಅವನ ಬಳಿ ಗಡಿಬಿಡಿಯಿಂದ ಬಂದು ನಮಸ್ಕರಿಸಿ ಕುಳಿತ.

ಬಲರಾಮ ಅವನ ಮುಖವನ್ನೇ ದಿಟ್ಟಿಸಿನೋಡಿ, ಏನನ್ನೋ ಹೇಳಲು ಹೊರಟ. ಮಾತು ಬಾಯಿಂದ ಹೊರಬರಲಿಲ್ಲ. ತುಟಿಗಳು ಆ ಅದಮ್ಯ ಭಾವದಲ್ಲಿ ಅದುರುತ್ತಿದ್ದವು!... ಶ್ರೀಕೃಷ್ಣ ಆ ಅವ್ಯಕ್ತ ಭಾವನೆಗಳನ್ನು ಅರ್ಥಮಾಡಿಕೊಂಡಂತೆ, ಒಂದು ತೃಪ್ತಿಯ ಮಂದಹಾಸವನ್ನು ಸೂಸಿದ! ಅದನ್ನು ಕಂಡು ಬಲರಾಮನ ಒಳಗುದಿ ಕೊಂಚ ಶಾಂತವಾದಂತೆ ಶ್ರೀಕೃಷ್ಣನಿಗೆ ಭಾಸವಾಯಿತು.

ಬಲರಾಮ: "ತಮ್ಮ! ನಿನ್ನ ಮಾಯೆ ನನಗೂ ತಿಳಿಯಲಾರದು! ಇಂದೇನೋ ವಿಪರೀತ ನಡೆಯುವಂತೆ ಕಾಣುತ್ತಿದೆ. ಹಲವಾರು ದಿನಗಳಿಂದ ಏನೋ ಬಗೆಯ ಅಶಾಂತಿ ಇಡೀ ದ್ವಾರಕೆಯನ್ನೇ ಆವರಿಸಿದೆ. ಇದಕ್ಕೆ ನಾನೆಷ್ಟು ಬಗೆಯಲ್ಲಿ ಕಾರಣನೋ ಕಾಣೆ! ಈ ಅಶಾಂತಿಯಿಂದ ನಮ್ಮ ಜನರನ್ನು ಮುಕ್ತ ಮಾಡುವುದು ನನಗಂತೂ ಆಗದು. ನೀನಾದರೂ ಮಾಡಬಾರದೆ? ಅಂದು ಕೌರವ ಪಾಂಡವ ಯುದ್ಧದಲ್ಲಿ ನಾನು ಹೇಗೆ ತಟಸ್ಥನಾಗಿ ಉಳಿದೆನೋ, ಅದೂ ನಿನ್ನ ಮಾಯೆ! ಇಂದೂ ನನ್ನನ್ನು ತಟಸ್ಥನನ್ನಾಗಿ ಉಳಿಸಿ, ನಿನ್ನಿಷ್ಟ ಪೂರೈಸಿಕೋ!"

ಶ್ರೀಕೃಷ್ಣ: "ಅಣ್ಣ! ನಾಟಕದ ಕೊನೆಯ ಅಂಕಕ್ಕೆ ಬಂದುಮುಟ್ಟಿ, ನಾಟಕ ಇನ್ನೂ ಮುಗಿಯಲಿಲ್ಲ ಎಂದು ಚಡಪಡಿಸಬಾರದು. ಆಗುವುದನ್ನು ಕಾಲಪುರುಷ ಯಾವಾಗಲೂ ವಿಚಕ್ಷಣತೆಯಿಂದಲೇ ಮಾಡುತ್ತಾನೆ. ಯಾರೂ ಅವನಿಗೆ ಅವಸರಪಡಿಸಲಾರರು. ಆ ಕಾಲವೇ ನನ್ನ ಸುದರ್ಶನ ಚಕ್ರ! ಅಣ್ಣ, ನೀನಾರೆಂಬುದನ್ನು ನೆನೆಯುವ ಕಾಲ ಬಂದಿದೆ!... ಸ್ವಸ್ಥಾನಕ್ಕೆ ನನಗಿಂತ ಮೊದಲು ಹೊರಡಬೇಕಾದವನು ನೀನು. ನಿನ್ನ ಅಣ್ಣತನದ, ನನ್ನ ತಮ್ಮತನದ ಕೊನೆಯ ಕ್ಷಣದ ಅಭಿನಯಗಳ ಸಮ್ಮೇಳನವೇ ಈ ಗಳಿಗೆ. ಏನಾದರೂ ಸಂದೇಹ ಇದ್ದರೆ ಕೇಳು."

ಬಲರಾಮನ ಮಾಯಾಪಾಶ ಹರಿಯುತ್ತದೆ. ತನ್ನ ಜೀವಿತದ ಎಲ್ಲ ಘಟನೆಗಳೂ ಒಂದೊಂದಾಗಿ ಶೀಘ್ರಗತಿಯಲ್ಲಿ ಅವನ ಕಣ್ಣಮುಂದೆ ಹಾಯುತ್ತವೆ. ಬಲರಾಮನ ಕಂಗಳಲ್ಲಿ ನೀರು ಹರಿಯಲು ಆರಂಭವಾಗುತ್ತದೆ... ಶ್ರೀಕೃಷ್ಣ ಅವನ ಬಳಿ ಸೇರಿ, ಮಂಡಿಯೂರಿ ಕುಳಿತು, ಉತ್ತರೀಯದ ಸೆರಗಿನಿಂದ ಆ ಕಣ್ಣೀರನ್ನು ಒರೆಸುತ್ತಾನೆ. ಅವನ ಕಂಗಳೂ ಹನಿಗೂಡುತ್ತವೆ.... ಕ್ಷಣಹೊತ್ತು ಮಾತ್ರ... ಬಲಭದ್ರನೇ ಮಾತಾಡುತ್ತಾನೆ...

ಬಲರಾಮ: "ನಾಟಕದ ಭಾಷೆಯಲ್ಲೇ ಮುಂದುವರೆದು ಹೇಳುತ್ತೇನೆ... ತಮ್ಮ!... ಎಷ್ಟೋ ವರ್ಷಗಳ ಹಿಂದೆ, ನೆನಪಿದೆಯೇ... ಹಾಳು ಜರಾಸಂಧ ನಮ್ಮ ಮಧುರಾಪುರಿಯನ್ನು ಹದಿನೆಂಟು ಸಲ ಮುತ್ತಿ, ಸೋತು ಓಡಿಹೋದನಷ್ಟೆ! ಕೊನೆಯಸಲ ಅತ್ತ ಕಾಲಯವನನೂ ಇತ್ತ ಇವನೂ ಮಧುರೆಯನ್ನು ಮುತ್ತಿದಾಗ, ಊರನ್ನು ಉಳಿಸಲು ನೀನು ದ್ವಾರಕೆಯನ್ನು ಸಮುದ್ರದಿಂದೆತ್ತಿ ನಮ್ಮವರಿಗೆ ಕೊಟ್ಟೆ! ನಾವಿಬ್ಬರೂ ಪರಶುರಾಮರ ಗೋಮಾಂತಕ ಕ್ಷೇತ್ರದಲ್ಲಿ ವಿಹರಿಸಿ, ಅಡಗಿದ್ದೆವು... ನೆನಪಿದೆಯೇ! ಜರಾಸಂಧನನ್ನು ಆಗಲೂ ಹಣ್ಣು ಮಾಡಿಯೇ ಕಳುಹಿಯಾಯ್ತು ಎನ್ನು... ಮುಂದೆ ನಾವು ಆ ಕರಾವಳಿಯಲ್ಲೆ ಹಲವಾರು ದಿನ ವಿಹರಿಸುತ್ತಿದ್ದಾಗ, ನನಗೆ ವರುಣದೇವ ಪಶ್ಚಿಮದ ಕಡೆಯಿಂದ 'ವಾರುಣೀ' ಎಂಬ ಉನ್ಮಾದಕ ಪೇಯವನ್ನು ತಂದು ಸಮರ್ಪಿಸಿದ! ನಾನು ಅದನ್ನು ಉಪಯೋಗಿಸಿದೆ! ಮುಂದೆ ಅದು ಚಟವಾಗಿ ಅಂಟಿಕೊಂಡಿತು!!... ಇದರಲ್ಲಿ ನಿನ್ನ ಮಾಯೆ ಏನೋ ಅಡಗಿರಬೇಕು! ನಿನ್ನ ಸೇವೆಗಾಗಿಯೇ ಕರೆತಂದ ಈ ಸೇವಕನನ್ನು ಹೀಗೆಲ್ಲ ಪರೀಕ್ಷಿಸಬಹುದೇ?"

ಶ್ರೀಕೃಷ್ಣ: "ನೀನಿನ್ನೂ ಅಣ್ಣ! ಕೇಳು, ಹೇಳುತ್ತೇನೆ... ಒಂದು ದುಷ್ಟಾಚಾರವು ಸಮಾಜಕ್ಕೆ ಅಂಟಿ, ಅವರು ಅದರಿಂದ ವಿನಾಶವಾಗಬೇಕಾದರೆ, ಅದು ಮೊದಲು ಶಿಷ್ಟರೆಂಬುವರ ವರ್ಗದಲ್ಲೇ ಹುಟ್ಟಿ ಬರಬೇಕಾದುದು ಇತಿಹಾಸದ ಧರ್ಮ! ಇಲ್ಲವಾದರೆ ನಮ್ಮ ಧರ್ಮಪುತ್ರ ಜೂಜಾಡುತ್ತಿದ್ದನೇ? ದ್ರೌಪದಿಯನ್ನು ಪಣವಾಗಿಡುತ್ತಿದ್ದನೇ? ಅವನು ಹಾಗೆಲ್ಲ ಅವಿವೇಕ ಮಾಡದಿದ್ದರೆ ಕೌರವರು ಹಾಗೆ ಮುಂದೆ ಘೋರವಾಗಿ ಸಾಯುತ್ತಿದ್ದರೇ? ಹಿಂದಿನ ಯುಗದ ವಿಷಯವೂ ಹಾಗೆ! ವಾಲಿ, ಹಾದರದಲ್ಲಿ ಎತ್ತಿದ ಕೈಯ್ಯಲ್ಲದಿದ್ದರೆ, ಅವನ ಶಿಷ್ಯನಾದ ರಾವಣ, ಅದನ್ನನುಸರಿಸುತ್ತಿದ್ದನೇ? ಯೋಚಿಸು! ಮುಂದೆ ಬರುವ ಕಲಿಯುಗದಲ್ಲೂ ಹಾಗೆ! ನಾಸ್ತಿಕ ವಾದ ಮಾಡುವುದು ಬ್ರಾಹ್ಮಣರಲ್ಲೇ ಹುಟ್ಟಿದ ಮೇಲೆಯೇ ಓದುಬರಹ ಅರಿಯದ ಇತರ ಅಜ್ಞಾನಿಗಳ ಸಮೂಹವೂ ಆ ನಾಸ್ತಿಕ್ಯಕ್ಕೆ ಬಲಿಯಾಗುತ್ತದೆ... ಕೌರವರು ಸತ್ತ ಮೇಲೆ ಈಗ ಲೋಕವೆಲ್ಲ ನಮ್ಮ ಯಾದವರನ್ನೇ ಶಿಷ್ಟರೆಂದು ಅನುಕರಿಸುತ್ತಿದೆ. ಈ ಕುಲಕ್ಕೆ ನೀನು ಮುಕುಟಪ್ರಾಯ! ಅಂದು ನಿನಗೆ ಈ ಚಟ ಹತ್ತಿರದಿದ್ದರೆ, ಇಂದು ಈ ಕುಲವಿನಾಶಕ್ಕೆ ನನಗೆ

ಸಹಾಯವಾಗುತ್ತಿತ್ತೆ?... ಹಿಂದಿನ ಅವತಾರದಲ್ಲಿ ಉಜ್ವಲ ಬ್ರಹ್ಮಚರ್ಯವನ್ನು ಮೆರೆದ ನೀನು ಈ ಅವತಾರದಲ್ಲಿ ಕೊಂಚ ಲೌಕಿಕದ ರೀತಿಯನ್ನು ನೋಡಲಿ ಎಂದು ಆಶಿಸಿದೆ, ಅಷ್ಟೆ! ತಪ್ಪಾಗಿದ್ದರೆ, ಮನ್ನಿಸು!" ಕೃಷ್ಣ ಮುಸಿ ನಗುತ್ತಾನೆ.

ಬಲಭದ್ರ: "ನಿನ್ನ ಅವತಾರಕ್ಕೆ ಸಹಾಯವಾಗಿ ನೀನೇ ತಂದವನನ್ನು ಹೀಗೆ ಹೀನಾಚಾರಗಳಿಂದ ದೂಷಿತನನ್ನಾಗಿಸಿ ನಿನಗಾವ ಆನಂದವಪ್ಪ! ತಮ್ಮ!!"

ಶ್ರೀಕೃಷ್ಣ: "ಆಚಾರವು ಹೀನವಾಗುವುದೂ ಬಿಡುವುದೂ ಅದರ ಹಿಂದಿನ ಉದ್ದೇಶ್ಯದಿಂದ!... ಕ್ಷತ್ರಿಯನ ಆಚಾರವೆಲ್ಲ ಕೊಲೆಯೇ! ಯುದ್ಧವೇ!! ಅದನ್ನು ಅವನಿಗೆ ಕರ್ತವ್ಯವನ್ನಾಗಿಸಿದ ಈಶ್ವರನು ಅದನ್ನು ಹೀನವಾಗಿ ಕಲ್ಪಿಸಲಿಲ್ಲವಷ್ಟೆ! ಶಿಷ್ಟಾಚಾರವೂ ಅಷ್ಟೆ. ಯಜ್ಞಾಚರಣೆಯನ್ನೇ ನೋಡು. ಎಷ್ಟೊಂದು ಪವಿತ್ರ ಈ ಯಜ್ಞ, ಈ ಯಾಗ, ಈ ವೇದೋಕ್ತ ಕ್ರಿಯಾಚರಣೆಗಳು. ಇಂದು ಆ ಸಂಸ್ಥೆಯೇ ದೂಷಿತವಾಗಿರುವುದು ಈಶ್ವರ ಸಂಕಲ್ಪವೇ? ನೀನಂತೂ ಕರ್ಮವಶ್ಯನಲ್ಲ; ಈಶ್ವರವಶ್ಯ; ನಿನ್ನನ್ನು ತನ್ನ ಉಪಕರಣವನ್ನಾಗಿ ಆರಿಸಿದ ಈಶ್ವರ ಈ ಯಾದವ ವಿನಾಶಕ್ಕೆಂದೇ ಅಂದು ನಿನಗೆ ಈ ಚಟವನ್ನು ಅಂಟಿಸಿದ್ದರೆ, ನೀನೇಕೆ ಪರಿತಪಿಸಬೇಕು?"

ಬಲಭದ್ರ: "ಪರಭಾವದಲ್ಲಿ ನಾನಿನ್ನು ಇದನ್ನು ಕಾಣಲಾರೆ! ನನಗಂತೂ ಇದು ಸರಿ ಎನಿಸುವುದಿಲ್ಲ!"

ಶ್ರೀಕೃಷ್ಣ: "ಹಿಂದೆ, ಪರಶುರಾಮರು ಜಮದಗ್ನಿಗಳ ಆಜ್ಞೆಯಂತೆ ತಮ್ಮ ತಾಯಿಯನ್ನೇ ಕೊಂದರಲ್ಲ! ಅದು ಅವರಿಗೆ ಆಗ ಸರಿಯಾಗಿ ಕಂಡಿತೇ?... ಪ್ರಹ್ಲಾದನ ನಿಮಿತ್ತ ಅವನ ತಂದೆ ಸಾಯುವಂತಾಯಿತಲ್ಲ! ಹಲವರಿಗೆ ಇನ್ನೂ ಇದು ಸರಿಯಾಗಿ ಕಾಣುವುದೇ? ಇಂದಿನ ಇತಿಹಾಸದವರಿಗೆ ಸರಿಯಾಗಿ ಕಾಣದ ಎಷ್ಟೋ ಭಾವಗಳು, ಘಟನೆಗಳು, ವರ್ತನೆಗಳು ಭೂತಕಾಲದಲ್ಲಿ ನಡೆದು ಮುಗಿದೇ ಹೋಗಿವೆ! ಕಾಲಚಕ್ರವನ್ನು ಉರುಳಿಸುವ ಜಗದೀಶ್ವರನಲ್ಲದೆ ಈ ಘಟನೆಗಳ ಸರಿತಪ್ಪುಗಳನ್ನು ನಿರ್ಣಯಿಸಬಲ್ಲವರಾರು? ಈಗ ನಿನ್ನನ್ನೇ ಕೇಳುತ್ತೇನೆ! ನೀನು ಬಂದೊಡನೆಯೇ ಎದ್ದು ಗೌರವಿಸಲಿಲ್ಲವೆಂಬ ಕಾರಣಕ್ಕಾಗಿ ಸೂತಪೌರಾಣಿಕರನ್ನು ನೀನು ಕೊಂದೆಯೇಕೆ? ನೀನೇ ಉತ್ತರಿಸಬಲ್ಲೆಯಾ?"

ಬಲಭದ್ರ ಅವಕ್ಕಾಗುತ್ತಾನೆ! ತಲೆತಗ್ಗಿಸುತ್ತಾನೆ! ಶ್ರೀಕೃಷ್ಣ ಮುಂದುವರೆದು ಹೇಳುತ್ತಾನೆ.

ಶ್ರೀಕೃಷ್ಣ: "ನಮಗೆ ಸರಿ ಎನಿಸದ್ದು ಒಂದು ನಮ್ಮ ಕೈಯ್ಯಿಂದಲೇ ನಡೆಯುವಂತಾದರೆ, ಅದರಲ್ಲಿ ದೈವತಂತ್ರವನ್ನು ಮಾತ್ರವೇ ಅಲ್ಲಿ ಆಗ ಕಾಣಬೇಕು! ಅದನ್ನು ಮಾಡಿಸಿದ್ದು ಆಗ ದೈವ. ಅವನಿಗೆ ಏನು ಉದ್ದೇಶ್ಯವೆಂಬುದು, ಅದನ್ನು ಮಾಡಿದವನಿಗೆ, ತಿಳಿಯದುದೇ ಪ್ರಮಾಣ. ತಿಳಿದೇ ಅಕಾರ್ಯ ಮಾಡುವವನು ಶಿಷ್ಟನಾಗಲಾರ! ಮನವೂ ಒಪ್ಪದೇ, ಏಕೆ ಮಾಡಿದೆನೆಂದು ತಿಳಿಯದೇ ಪರಿತಪಿಸುವುದೇ ಆಗ ಆ ನಿಮಿತ್ತಮಾತ್ರನ ಶಿಷ್ಟತೆಗೆ ಸಾಕ್ಷಿ."

ಬಲಭದ್ರ: "ಏನೋಪ್ಪ! ನನಗೇನೂ ತಿಳಿಯುವುದಿಲ್ಲ. ತಮ್ಮನಾಗಿ ಹುಟ್ಟಿ ನಿನ್ನ ಲೀಲೆ ನೋಡಿ, ಅರಿಯದೆ ಹೋದೆ! ಈಗ ಅಣ್ಣನಾಗಿ ಹುಟ್ಟಿಯೂ ಅಷ್ಟೆ!"

ಶ್ರೀಕೃಷ್ಣ: "ಮುಂದೆ ತಂದೆಯಾಗಿ ಹುಟ್ಟಿ ನೋಡುವುದೊಂದು ಬಾಕಿ ಇದೆ ಎನ್ನುವಿಯಾ?... ಆಗಲಿ."

ಇಬ್ಬರೂ ಕ್ಷಣಕಾಲ ನಿರ್ಮಲವಾಗಿ ನಗುತ್ತಾರೆ.

ಶ್ರೀಕೃಷ್ಣ: "ಅಣ್ಣ! ಇದೋ ಕೊನೆಯ ನಮಸ್ಕಾರ... ನೀನು ಮುಂದೆ ಹೊರಡಬೇಕಾಗಿದೆ... ಚಿಂತಿಸಬೇಡ" ಎನ್ನುತ್ತಾ ಅಣ್ಣನಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಶ್ರೀಕೃಷ್ಣ ಹೊರಟ.

*****

ಮಧ್ಯಾಹ್ನದ ಸೂರ್ಯ ಪ್ರಖರನಾಗುತ್ತಿದ್ದ. ಯಾದವ ವೀರರಿಗೆ ಹಸಿವೆ ಪ್ರಬಲವಾಗಿತ್ತು. ಇಷ್ಟವಿಲ್ಲದ ಉಪವಾಸವನ್ನು ಹಲವರು ಆ ಬೆಳಿಗ್ಗೆಯಿಂದ ಆಚರಿಸಿದ್ದರು. ಮೊದಲ ರಾತ್ರಿ ಎಷ್ಟೋ ಯಾದವ ವೀರರ ಶಿಬಿರಗಳಲ್ಲಿ ಸುತ್ತಮುತ್ತಲ ಗ್ರಾಮಗಳ ಆಭೀರ ಸ್ತ್ರೀಯರೂ, ದಸ್ಯುಸ್ತ್ರೀಯರೂ ಕಾಣಿಸಿಕೊಂಡು ಯಾದವ ಯುವಕರ ಬಿಗಿಯಾದ ಆಲಿಂಗನಾದಿಗಳಲ್ಲಿ ಸಿಕ್ಕಿದ್ದನ್ನು ಶ್ರೀಕೃಷ್ಣನಿಗೆ ಚಾರರು ಅರುಹಿದ್ದರು. ರಹಸ್ಯದಲ್ಲಿ ಮದ್ಯಪಾನವೂ ನಡೆದು ಉಗ್ರಸೇನನ ಆಜ್ಞೆಯ ನಗೆಪಾಟಲೂ, ಗುಟುಕು ಗುಟುಕಿಗೆ ನಡೆದೇ ಇತ್ತು. ಆ ಸ್ತ್ರೀಯರಿಗೆ ಮಾನವಿತ್ತೋ ಇಲ್ಲವೋ, ಬಹಿರಂಗವಾಗಿ ಅವರನ್ನು ಮಾನಗೆಡಿಸಿದ ಘಟನೆಗಾಗಿ ಆ ದಸ್ಯು ವೀರರು ಕತ್ತಿ ಮಸೆಯುತ್ತಾ ಸೇಡಿಗಾಗಿ ಬೇರೆ ಎಡೆ ಕಾಲಾವಕಾಶ ಕಾಯುತ್ತಾ ಕುಳಿತಿದ್ದರು.

"ಭೋಜನದ ವೇಳೆ" ಎಂದು ಚಾರನೊಬ್ಬ ಶಿಬಿರ ಶಿಬಿರಗಳಲ್ಲಿ ಸಾರುತ್ತಾ ತಮಟೆ ಬಡಿಯುತ್ತಾ ಹೊರಟ.

ಉತ್ಸುಕರಾಗಿ ಯಾದವ ಸ್ತ್ರೀ ಪುರುಷರು ಸಾಲುಗಟ್ಟಿ ಆ ಸಮುದ್ರತೀರದಲ್ಲೇ ಕುಳಿತರು. ಉದ್ದನೆಯ ಬಾಳೆ ಎಲೆಗಳನ್ನು ಹಾಸಲಾಗಿತ್ತು. ಶ್ರೀಕೃಷ್ಣ, ಬಲಭದ್ರ, ಅಕ್ರೂರ, ಬಭ್ರು, ಗದ, ಸಾತ್ಯಕಿ, ಕೃತವರ್ಮ ಮುಂತಾದವರೂ, ಅವರವರ ಪುತ್ರರೂ, ಪೌತ್ರರೂ, ಅವರವರ ಮಡದಿಯರೂ, ಸಹಸ್ರ ಸಂಖ್ಯೆಯಲ್ಲಿ ಊಟಕ್ಕೆ ಕುಳಿತರು.

ಭಟರು ಶ್ರಮಪಟ್ಟು ಬೆಳಿಗ್ಗೆಯಿಂದ ತಯಾರಿಸಿದ ಊಟವನ್ನು ಬಡಿಸಲಾರಂಭಿಸಿದರು. ಅನ್ನ, ತೊವ್ವೆ, ಪಾಯಸ, ಪಲ್ಯಗಳು, ಭಕ್ಷ್ಯಗಳು, ಹಣ್ಣುಗಳು, ಒಂದಾದ ಮೇಲೊಂದು ಬಡಿಸಲ್ಪಟ್ಟು, ಪರಿಷೇಚನವೂ ನಡೆದು, ಎಲ್ಲರೂ ತೀರ್ಥ ಸ್ವೀಕರಿಸಿ ಪಂಚಪ್ರಾಣಾಹುತಿ ಮಾಡಿದರು.

ಶ್ರೀಕೃಷ್ಣನಿಗೆ ಮೊದಲ ಪ್ರಾಣಾಹುತಿಯಲ್ಲೇ ಅನ್ನದಲ್ಲಿ ಮದ್ಯ ಬೆರೆತಿರುವುದು ಗೋಚರವಾಯಿತು! ಸಿಟ್ಟಿನಿಂದ ಭಟರನ್ನೂ, ಬಳಿಯ ಕೃತವರ್ಮ ಸಾತ್ಯಕಿ ಮೊದಲಾದವರನ್ನು ನೋಡಿದ!

ಸಾಂಬ, ಚಾರುದೇಷ್ಣ ಮೊದಲಾದವರು ಘೊಳ್ಳನೆ ನಕ್ಕರು! ಅನ್ನದಲ್ಲಿ ಮದ್ಯ ಬೆರೆತಿರುವುದು ಹುಡುಗರ ಕೈವಾಡವೆಂಬುದೂ, ಇದು ಕುಚೇಷ್ಟೆ ಎಂಬುದೂ ವ್ಯಕ್ತವಾಯಿತು! ಕೃಷ್ಣ ಸುಮ್ಮನೆ ಕುಳಿತ.

ಬಲಭದ್ರ ಮುಂದುವರೆದುದನ್ನು ನೋಡಿ ಇತರರೂ ಮುಂದುವರೆದರು.

ಕೃತವರ್ಮ ಹೇಳಿದ "ಅಯ್ಯ ಕೃಷ್ಣ! ಇಷ್ಟು ದಿನ ಪ್ರಕಟವಾಗಿಯೇ ಎಲ್ಲರೂ ಮದ್ಯಪಾನ ಮಾಡಿ, ಈಗ ರಾಜಾಜ್ಞೆಯ ಹೆಸರಲ್ಲಿ ಅದನ್ನು ತೊರೆಯುವ ಈ ಕಪಟವೇಕೆ? ನನಗೆ ಇದೆಲ್ಲ ಹಿಡಿಸದು!" ಎನ್ನುತ್ತಾ ಸಿಡಿಮಿಡಿಗುಟ್ಟಿದ.

ಭಟನೊಬ್ಬ ಅವನ ಕಣ್ಣು ಸನ್ನೆಯಂತೆ ಪ್ರಕಟವಾಗಿಯೇ ಮದ್ಯವನ್ನು ತಂದು ಅನ್ನಕ್ಕೆ ಬಡಿಸಿದ! ಉಳಿದವರೂ ಬೇಕೆಂದು ಕೂಗಾಡಲಾರಂಭಿಸಿದರು! ಅನ್ನಕ್ಕೆ, ತೊವ್ವೆಗೆ, ಪಾಯಸಕ್ಕೆ, ಹೀಗೆ ಎಲ್ಲಕ್ಕೂ ಮದ್ಯ, ಆಸವ, ಮೈರೇಯಗಳನ್ನು ಅಭಿಷೇಕ ಮಾಡಿ, ಯಾದವವೀರರು ರಾಜಾಜ್ಞೆಯನ್ನು ಉಲ್ಲಂಘಿಸಿ, ಹೆಮ್ಮೆಯಿಂದ ಗಹಗಹಿಸಿ ನಗಲಾರಂಭಿಸಿದರು.

ಶ್ರೀಕೃಷ್ಣ ಊಟ ಮಾಡದೆ ಎದ್ದುನಿಂತು ಕ್ರೂರಭಾವದಿಂದ ಆ ಯಾದವರನ್ನು ನೋಡುತ್ತಿದ್ದ! ಶ್ರೀಕೃಷ್ಣ ಪುತ್ರರು ಉತ್ತೇಜಿತರಾಗಿ ಅಶ್ಲೀಲ ಮಾತುಗಳನ್ನಾಡುತ್ತಾ, ಅಶ್ಲೀಲ ಹಾವಭಾವಗಳನ್ನು ತೋರುತ್ತಾ ದುರ್ವಾಸಾದಿ ಮುನಿಗಳನ್ನು, ಬ್ರಾಹ್ಮಣರನ್ನು, ಬೈಯ್ಯುತ್ತಾ, ಗೇಲಿ ಮಾಡುತ್ತಾ ಊಟ ಮಾಡುತ್ತಿದ್ದರು.... ಊಟದ ಈ ಸಂಭ್ರಮ ಒಂದೆರಡು ಗಂಟೆಗಳ ಕಾಲವೇ ನಡೆಯಿತು!

ಅಪರಾಹ್ಣವೂ ಬಂದಿತು. ಊಟ ಮುಗಿಯುವಂತೆ ತೋರಲಿಲ್ಲ! ಸಮುದ್ರ ದಂಡೆಯ ಹಳ್ಳಿಯ ಕಡೆಯಿಂದ ಮಂಗಗಳ ಹಿಂಡೊಂದು, ತಮಗೇನಾದರೂ ಆಹಾರ ಸಿಕ್ಕೀತೋ ಎಂಬಂತೆ ಯಾದವರ ಭೋಜನ ಕೂಟದತ್ತ ಧಾವಿಸಿತು.

ಯಾದವ ವೀರರು ತಮ್ಮ ಎಲೆಗಳಲ್ಲಿ ಮಿಕ್ಕಿದ್ದ ಭಕ್ಷ್ಯಭೋಜ್ಯಗಳನ್ನು ಕೋತಿಗಳತ್ತ ಸಿಕ್ಕಸಿಕ್ಕಂತೆ ತೂರಾಡಿದರು! ಮತ್ತೆ ತರಿಸಿಕೊಂಡು ರುಚಿನೋಡಿ ಅತ್ತ ಒಗೆಯಲಾರಂಭಿಸಿದರು. ಮದ್ಯದ ಅಮಲು ಮಂಗಗಳ ನೆತ್ತಿಗೇರಿ, ಅವು ಕುಣಿದಾಡುತ್ತಾ, ಒಂದರ ಮೇಲೊಂದು ಏರುತ್ತಾ, ಸ್ತ್ರೀ ಪುರುಷ ಮಂಗಗಳು ಮೈಥುನದಲ್ಲೂ ತೊಡಗಿ, ಒಂದಕ್ಕಾಗಿ ಹಲವು ಕಾದಾಡಲಾರಂಭಿಸಿ, ಮಂಗಗಳು ಪರಚಾಡುತ್ತಾ ಸತ್ತು ಬೀಳಲಾರಂಭಿಸಿದವು.

ಇದೆಲ್ಲ ಯಾದವ ಯುವಕರಿಗೆ ತುಂಬಾ ಸ್ಫೂರ್ತಿದಾಯಕವಾದಂತೆ ತೋರಿತು! ತಾವೂ ಕುಣಿದಾಡಲಾರಂಭಿಸಿದರು. ಅಸಭ್ಯ, ಗ್ರಾಮ್ಯ ಗೀತೆಗಳು ಅವರ ಬಾಯಿಂದ ಬರಲಾರಂಭಿಸಿದವು.... ಕುಣಿತವೋ ಕುಣಿತ!... ಸ್ತ್ರೀಯರೂ ಅಲ್ಲಿ ಕೂಡಿಕೊಂಡರು.

ಬಲಭದ್ರ ಮೇಲೆದ್ದ. ಅಡಿಗೆಯ ಭಟನನ್ನು ಕರೆಸಿ "ಮದ್ಯವನ್ನು ತಾ! ಹೆದರಬೇಡ! ರಾಜಾಜ್ಞೆ ತೀರಿತು! ಸಾಯುವವರು ಕುಡಿದೇ ಸಾಯಲಿ!" ಎಂದಾಜ್ಞಾಪಿಸಿದ.

* * * * *

ಶ್ರೀಕೃಷ್ಣ ಇದನ್ನೆಲ್ಲ ನೋಡಲಾರದೆ ಏಕಾಂತದ ಸಮುದ್ರ ತೀರದ ಬಳಿಸಾರ್ದು, ನಿರ್ವಿಣ್ಣನೆಂಬಂತೆ ಮರಳ ದಿಣ್ಣೆಯ ಮೇಲೆ ಕುಳಿತು, ಪಶ್ಚಿಮ ದಿಗಂತವನ್ನು ನೋಡಲಾರಂಭಿಸಿದ! ಸೂರ್ಯದೇವ ಈ ಚಂದ್ರವಂಶೀಯರನ್ನು ಆಗ ಅಪಹಾಸ್ಯ ಮಾಡುವಂತೆ ಕಂಡುಬಂದ!... ಶ್ರೀಕೃಷ್ಣ ಸುದರ್ಶನ ಚಕ್ರವನ್ನು ಸ್ಮರಿಸಿದ. ಚಕ್ರರಾಜ ಪ್ರತ್ಯಕ್ಷನಾಗಿ "ಏನಪ್ಪಣೆ!" ಎಂದು ಬೇಡಿದ. ವ್ಯಗ್ರನಾದ ಶ್ರೀಕೃಷ್ಣ ಅವನಿಗೆಂದ "ಈ ಅವತಾರದಲ್ಲಿ ಇದು ನಿನಗೆ ಕೊನೆಯ ಕೆಲಸ! ಈ ಜೊಂಡು ಹುಲ್ಲಿನಲ್ಲಿ ನಿನ್ನ ಒಂದಂಶವನ್ನಿಟ್ಟು ಅಂತರ್ಧಾನನಾಗು! ಹೋಗಿ ಸೇರಬೇಕಾದಲ್ಲಿ ಹೋಗಿ ಸೇರು." ಸುದರ್ಶನ ಅದೃಶ್ಯನಾದ.

ಅನಂತರ ಶ್ರೀಕೃಷ್ಣ ಪಾಂಚಜನ್ಯವನ್ನು ಸ್ಮರಿಸಿ ಅವನನ್ನು "ಸಮುದ್ರದಲ್ಲಿ ಸೇರಿ ಅಂತರ್ಧಾನನಾಗು" ಎಂದಾಜ್ಞಾಪಿಸಿದ.

ಆಮೇಲೆ ಗರುಡದೇವನನ್ನು ಕರೆಸಿ "ನಿನ್ನ ಸೇವೆ ಸಾಕು. ನಿತ್ಯವಿಭೂತಿಗೆ ತೆರಳು" ಎಂದು ಆಜ್ಞಾಪಿಸಿದ!

ಆಮೇಲೆ ಶ್ರೀಕೃಷ್ಣ ತನ್ನ ದಿವ್ಯ ರಥವನ್ನೂ, ಅಶ್ವಗಳನ್ನೂ ಪ್ರತ್ಯಕ್ಷ ಮಾಡಿಕೊಂಡು, ಅಗ್ನಿದೇವನನ್ನು ಬರಮಾಡಿ "ಅಯ್ಯಾ, ಯಜ್ಞೇಶ್ವರನೇ! ನಿನ್ನ ಸೇವೆ ಸಂದಿತು! ಈ ಉಪಕರಣಗಳನ್ನು ಮತ್ತೆ ಸ್ವೀಕರಿಸು" ಎಂದು ಅವನ್ನು ಹಿಂದಿರುಗಿಸಿದ.

ದೂರದಲ್ಲಿ ಹಿಂದೆ ನಿಂತಿದ್ದ ದಾರುಕ ಇದನ್ನು ಗಮನಿಸಿ, ದಿಕ್ಕು ತೋರದೆ ಭಯ ಭೀತನಾಗಿದ್ದನ್ನು ಕಂಡು, ಶ್ರೀಕೃಷ್ಣ ಅವನಿಗೆ ತಾನು ಹೇಳಿದ್ದನ್ನು ನೆನೆಪಿಸುವಂತೆ ಅಭಯಪ್ರದಾನ ಮಾಡಿದ.

ಸೂರ್ಯ ಇಳಿಯಲಾರಂಭಿಸಿದ್ದ!

* * * * *

ಮಹಾಪಾನ ನಿರ್ಭೀತಿಯಿಂದ, ನಿರ್ಲಜ್ಜೆಯಿಂದ ನಡೆದೇ ಇತ್ತು! ಬಲಭದ್ರ ಪ್ರಕಟವಾಗಿಯೇ ತರಿಸಿದ್ದನ್ನು, ಕುಡಿದದ್ದನ್ನು ನೋಡಿ, ಕೃತವರ್ಮನೂ ಹಾಗೇ ಮಾಡಿದ! ಸಾತ್ಯಕಿ ಅವನನ್ನನುಸರಿಸಿದ. ಗದ, ಬಭ್ರು, ಅಕ್ರೂರ, ಸಾಂಬ, ಚಾರುದೇಷ್ಣಾದಿ ಕೃಷ್ಣಪುತ್ರರೂ ಎಲ್ಲರೂ ಸಿಕ್ಕಂತೆ ಕುಡಿಯಲಾರಂಭಿಸಿದರು!

ಮದಿರಾದೇವಿ ಶ್ರೀಕೃಷ್ಣಾಜ್ಞೆಯನ್ನು ಚೆನ್ನಾಗಿಯೇ ಪಾಲಿಸಲಾರಂಭಿಸಿದ್ದಳು! ಸೂರ್ಯಾಸ್ತಮಾನದ ವರೆಗೂ ಈ ಕುಡಿತ ನಿರರ್ಗಳವಾಗಿ ನಡೆದು, ಕುಡಿಯುವುದಕ್ಕೆ ಇನ್ನೇನೂ ಉಳಿಯಲಿಲ್ಲವೆನ್ನುವ

ತನಕ ನಡೆದೇ ನಡೆಯಿತು. ಯಾದವ ವೀರರ ಭೋಗಕ್ಕೆಂದು ಬಂದಿದ್ದ ಆಭೀರ ದಸ್ಯು ಸ್ತ್ರೀಯರೂ ನಿರ್ಲಜ್ಜರಾಗಿ ಕುಡಿದು ಮತ್ತರಾಗಿ ಬಿದ್ದರು!

ಯಾದವ ಪುರುಷರು ಅವರಿಗಾಗಿ ನಾನು ತಾನೆಂದು ಕಾದಾಡಲಾರಂಭಿಸಿದರು! ಜಗಳ ಆರಂಭವಾದದ್ದು ಹೀಗೆ:

ಕೃತವರ್ಮ ಸಾತ್ಯಕಿಯನ್ನು ನೋಡಿ ವಿಕಟವಾಗಿ ನಕ್ಕು ತೂರಾಡಲಾರಂಭಿಸಿದ! ಸಾತ್ಯಕಿ ಅಷ್ಟಕ್ಕೇ ಕ್ರುದ್ಧನಾಗಿ "ಎಲವೋ! ಮಲಗಿದ್ದ ದ್ರೌಪದೀಪುತ್ರರನ್ನು ನಿಷ್ಕಾರಣವಾಗಿ ಕೊಂದ ಹೇಡಿ ನೀನು! ಮಹಾಭಾರತ ಯುದ್ಧದ ವೀರ ನೀನೆಂದು ಹೇಳಿಕೊಳ್ಳಲು ನಾಚಿಕೆಯಾಗಲಾರದೇ?" ಎಂದು ಮೂದಲಿಸಿದ.

ಕೃತವರ್ಮ ಉತ್ತರಿಸಿದ "ಹೌದು ಹೌದು! ಭೂರಿಶ್ರವಸ್ಸು ಯೋಗಾರೂಢನಾಗಿ ಕುಳಿತಿದ್ದಾಗ ಒಬ್ಬ ವಿಧವಾಪುತ್ರ ಅವನನ್ನು ಕೊಂದನಲ್ಲ! ಅವನೀಗ ಮಹಾಭಾರತವೀರ, ಅಲ್ಲವೇ?"

ತನ್ನನ್ನು ವಿಧವಾಪುತ್ರ ಎಂದುದಕ್ಕೆ ಸಾತ್ಯಕಿ ಬಲು ಕ್ರುದ್ಧನಾಗಿ, ಕೈಯ್ಯೆತ್ತಿ ತನ್ನವರ ಕಡೆ ಕ್ರೂರವಾಗಿ ನೋಡಿ, "ಆರಂಭವಾಗಲಿ" ಎಂಬಂತೆ ಕೈಬೀಸಿದ.

ಕೃತವರ್ಮನನ್ನು ಸಾತ್ಯಕಿ ಬೈದುದಕ್ಕೆ ಪ್ರದ್ಯುಮ್ನ ಗಹಗಹಿಸಿ, ತನ್ನ ಮೆಚ್ಚುಗೆ ಸೂಸಿದ್ದು ಕೃತವರ್ಮನಿಗೆ ಎಷ್ಟೂ ಸಹನೆಯಾಗಲಿಲ್ಲ! ತನ್ನವರ ಕಡೆ ತಾನೂ ಕೈಬೀಸಿದ!

ಶ್ರೀಕೃಷ್ಣ ನಡುವೆ ಪ್ರವೇಶಿಸಿದ್ದ!! ಕೈ ಕೈ ಮಿಲಾಯಿಸುವುದನ್ನು ತಡೆಯಲು ತುಂಬಾ ಶ್ರಮಿಸಿದ. ಅವನ ಮಾತುಗಳನ್ನು ಆ ಅಮಲೇರಿದ ಸ್ಥಿತಿಯಲ್ಲಿ ಯಾರೂ ಕೇಳುವಂತಿರಲಿಲ್ಲ.

ಸಾತ್ಯಕಿಯ ಕೋಪ ಮುಗಿಲೇರಿತ್ತು! ಪಕ್ಕದಲ್ಲಿದ್ದ ಶ್ರೀಕೃಷ್ಣನಿಗೆಂದ: "ಶ್ರೀಕೃಷ್ಣ! ಸತ್ರಾಜಿತನನ್ನು ಕೊಲೆ ಮಾಡಿಸಿದ ನೀಚ ಈ ಕೃತವರ್ಮನೇ! ಶತಧನ್ವನಿಗೆ ಕಿವಿ ಕೆಡಿಸಿ, ಪುಸಲಾಯಿಸಿ, ಸ್ಯಮಂತಕವನ್ನು ಕದಿಯಲು ಪ್ರೇರೇಪಿಸಿ, ನಿಷ್ಪಾಪನಾದ ಆ ಸತ್ರಾಜಿತನನ್ನು ರಹಸ್ಯದಲ್ಲಿ ಇವನಿಂದ ಕೊಲ್ಲಿಸಿ, ಆ ಶತಧನ್ವನನ್ನು ನಿನ್ನ ಕೈಯ್ಯಿಂದಲೇ ಕೊಲ್ಲಿಸಿದ ಪಾಪಿ, ಕಪಟಿ, ಈ ಕೃತವರ್ಮ!"

ಶ್ರೀಕೃಷ್ಣನ ಬಳಿ ಸತ್ಯಭಾಮೆ ನಿಂತಿದ್ದಳು! ಈ ಸಮಾಚಾರ ಅವಳಿಗೆ ಗೊತ್ತಿರಲಿಲ್ಲ! ತಂದೆಯ ನೆನಪೂ, ಅವನ ದಾರುಣ ಮರಣವೂ ನೆನಪಾಗಿ ಅಳುತ್ತಾ ನಿಂತಳು! ಆ ಅಕೃತ್ಯಕ್ಕೆ ಕೃತವರ್ಮನೇ ಪ್ರೇರಕನೆಂಬುದನ್ನು ಈಗ ಅರಿತಮೇಲೆ, ಅವನನ್ನು ಸಿಟ್ಟಿನಿಂದ ನೋಡುತ್ತಾ ನ್ಯಾಯದಾನಕ್ಕೆ ಮೊರೆ ಇಡುವವಳಂತೆ ಶ್ರೀಕೃಷ್ಣನ ಮುಖವನ್ನು ನೋಡಲಾರಂಭಿಸಿದಳು!

ಇದು ಸಾತ್ಯಕಿಗೆ ಇನ್ನಷ್ಟು ಉದ್ರೇಕಕಾರಿಯಾಯ್ತು. ಸತ್ಯಭಾಮೆಗೆಂದ: "ಅಮ್ಮಾ ಸತ್ಯಭಾಮೆ, ಈ ಕೃತವರ್ಮ ಈಗ ಭೂಮಿಗೆ ಭಾರವಾದ! ಬದುಕಿರುವ ಹಕ್ಕು ಅವನಿಗೆ ಈಗ ತೀರಿದೆ. ಮಲಗಿದ್ದ ಮಕ್ಕಳನ್ನು ಕೊಂದ ಈ ವೀರನ ಮಾರ್ಗವನ್ನೇ ನಾನೂ ಈಗ ಅನುಸರಿಸುತ್ತೇನೆ. ದೃಷ್ಟದ್ಯುಮ್ನ, ಶಿಖಂಡಿಗಳು ಎಂದೋ ಅನುಸರಿಸಿದ ದಾರಿಯನ್ನೇ ನಾನೂ ಈಗ ಅನುಸರಿಸುತ್ತೇನೆ, ನೋಡು" ಎಂದವನೇ, ಮುನ್ನುಗ್ಗಿ ಕತ್ತಿಯಿಂದ ಒಂದೇ ಏಟಿಗೆ ಕೃತವರ್ಮನ ತಲೆಯನ್ನು ತುಂಡರಿಸಿದ!

ಅಮಲಿನಲ್ಲಿದ್ದ ಕೃತವರ್ಮನಿಗೆ ತಾನು ಸತ್ತುದೂ ತಿಳಿಯಲಿಲ್ಲ! ಪುಟಿದೇಳುತ್ತೇಳುತ್ತಾ ಅವನ ತಲೆ ಸಮುದ್ರದಲ್ಲಿ ಹೋಗಿಬಿದ್ದಿತು.

ಸಾತ್ಯಕಿಯ ಕೋಪ ಇನ್ನೂ ಆ.ರಲಿಲ್ಲ. ಸುತ್ತಲೂ ನಿಂತಿದ್ದ ಹಲವಾರು ಕೃತವರ್ಮನ ಅನುಚರರನ್ನು ಸರಸರನೆ ಕೊಂದುಹಾಕಿದ!

ಕೃತವರ್ಮನ ಹೆಣ ಮೊದಲು ಉರುಳಿದ ಮೇಲೆ, ಧೈರ್ಯಗೆಟ್ಟ ಅವನ ಕಡೆಯವರು ಸಾವರಿಸಿಕೊಂಡು, ಮತ್ತೆ ಧೈರ್ಯ ಹೊಂದಿ, ಸಾತ್ಯಕಿಯ ಕಡೆಯ ಹಲವಾರು ವೀರರನ್ನು ಅದೇ ದಾರಿಯಲ್ಲಿ ಸಂಹರಿಸಿದರು!

ಆಮೇಲೆ ಈ ಮಾರಣಹೋಮ ಅವ್ಯಾಹತವಾಗಿ ಮುಂದುವರೆಯಿತು! ಸೂರ್ಯ ಮುಳುಗಿದ, ಚಂದ್ರ ಮೇಲೆದ್ದಿದ್ದ! ಬೆಳದಿಂಗಳಲ್ಲಿ ಯಾದವರು ಸಮುದ್ರದ ತೀರದಲ್ಲಿ ಬಚ್ಚಿಟ್ಟಿದ್ದ ಆಯುಧಗಳನ್ನು ಹುಡುಕಿ ತೆಗೆದು ಹೋರಾಡಲಾರಂಭಿಸಿದರು! ಅವು 'ನನ್ನವು, ತನ್ನವು' ಎಂಬ ಜಗಳ ಅಲ್ಲೇ ಹುಟ್ಟಿ, ಆಯುಧಗಳನ್ನು ಹೊರತೆಗೆಯುವ ಮುಂಚೆಯೇ ಅಲ್ಲೇ ಹಲವರು ಸತ್ತರು. ಪರಸ್ಪರ ವೈರಿಗಳ ಗುಂಪಿನವರು ಎಂದು ಸಂಶಯಿತರಾದವರನ್ನು, ಒಂದೇ ಕುಟುಂಬದ ಅಣ್ಣತಮ್ಮಂದಿರೂ, ತಂದೆ ಮಕ್ಕಳೂ, ಮಾವ-ಅಳಿಯ, ಭಾವ-ಮೈದುನ, ಹೀಗೆ ನಾನಾ ಸಂಬಂಧದ ಯಾದವ ವೀರರು ಪರಸ್ಪರ ಹೊಡೆದಾಡಿ, ಕಾದಿ, ಕೊಂದರು.

ಅಷ್ಟರಲ್ಲಿ ಉಳಿದವರು ದಸ್ಯುಸ್ತ್ರೀಯರೊಡನೆ ಕ್ರೀಡಿಸುತ್ತಾ, ನಡೆಯುತ್ತಿದ್ದ ಯುದ್ಧದ ಘೋರತೆಯನ್ನು ಗಮನಿಸದೆ, ಕಾಮಕೇಳಿಯಲ್ಲಿ ಮಗ್ನರಾದರು! ಆ ಸ್ತ್ರೀಯರು ತಮಗೆ ಬೇಕೆಂದು ಉಳಿದವರು ಅವರ ಮೈಮೇಲೆ ಬಿದ್ದರು! ನಗ್ನರಾಗಿದ್ದ ಅವರು ಆ ಅವಸ್ಥೆಯಲ್ಲೂ ಸಮುದ್ರ ದಂಡೆಯಿಂದ ಆಯುಧಗಳನ್ನು ತಂದು ಹೊಡೆದಾಡಿ ಸತ್ತರು. ಕೆಲವರು ಸಿಟ್ಟಿನಲ್ಲಿ ಆ ಸ್ತ್ರೀಯರು ತಮಗೆ ದಕ್ಕಲಿಲ್ಲವೆಂದು ಅವರನ್ನು ಕೊಂದರು.

ಮಾರಣಹೋಮ ನಡೆದಿತ್ತು! ಚಂದ್ರ ಆಕಾಶದ ನಡುವಿಗೇರಿದ್ದ. ರಕ್ತದ ಘಾಟು ಎಲ್ಲೆಡೆ ಆಕಾಶದಲ್ಲಿ ಪಸರಿಸಿತ್ತು. ಭೀತರಾದ ಕೃಷ್ಣ ಪತ್ನಿಯರೂ, ಯಾದವ ಸ್ತ್ರೀಯರೂ, ರಕ್ಷಕರನ್ನು ಕಾಣದೆ ಗೋಳಿಡುತ್ತಿದ್ದರು. ಊರಿಗೆ ಸಮಾಚಾರ ಹೇಳಲು ಯಾರೂ ಹೋಗುವ ಸ್ಥಿತಿಯಲ್ಲಿರಲಿಲ್ಲ! ಹೇಳಿದ್ದರೂ ಅತ್ತಲಿಂದ ಯಾವ ಸಹಾಯವೂ ಬರುವಂತಿರಲಿಲ್ಲ! ಅಲ್ಲಿ ಇನ್ನಾರಿದ್ದರು?

ಇಲ್ಲಿ ಯುದ್ಧ ನಡೆದೇ ಇತ್ತು. ಕೃತವರ್ಮನ ಕಡೆಯವರು ಸಾತ್ಯಕಿಯನ್ನು ಹುಡುಕಲಾರಂಭಿಸಿದ್ದರು. ದೂರದಲ್ಲಿ ನಿಂತು ಕೃತಾರ್ಥಭಾವದಿಂದ ಹಿಗ್ಗುತ್ತಿದ್ದ ಅವನನ್ನು ಕಂಡು ಕೃತವರ್ಮಸೇನೆ ಅವನನ್ನು ಸುತ್ತುವರೆಯಿತು! ಇನ್ನೇನು ಸಾತ್ಯಕಿಯನ್ನು ಅವರೆಲ್ಲ ಪ್ರಹರಿಸಬೇಕೆಂಬಷ್ಟರಲ್ಲಿ ನಡುವೆ ಪ್ರದ್ಯುಮ್ನ ಪ್ರವೇಶಿಸಿದ! ತನ್ನ ಆಯುಧಗಳನ್ನು ಹೊರತೆಗೆದು ಕೃತವರ್ಮಸೇನೆಯನ್ನು ಕತ್ತರಿಸಲಾರಂಭಿಸಿದ! ಆ ಸೇನೆ ಸಮುದ್ರದಂತೆ ಉಕ್ಕಿ ಬರುತ್ತಿದ್ದು, ಪ್ರದ್ಯುಮ್ನನಿಗೆ ಬಹುಕಾಲ ಅದನ್ನು ಎದುರಿಸಲಾಗಲಿಲ್ಲ! ಶ್ರೀಕೃಷ್ಣ ಅಷ್ಟರಲ್ಲಿ ಬಂದು ತಡೆಯಲು ಯತ್ನಿಸಿದ! ಆಗಲಿಲ್ಲ!! ಅವನೆದುರೇ ಪ್ರದ್ಯುಮ್ನ ಹತನಾದ! ಸಾತ್ಯಕಿಯೂ ಸಹ!!

ಶ್ರೀಕೃಷ್ಣನಿಗೆ ಪುತ್ರಶೋಕದ ಕೋಪ ಮಿತಿಮೀರಿತು. ತನ್ನ ಎಲ್ಲ ಆಯುಧಗಳನ್ನೂ ಕಳುಹಿಕೊಟ್ಟಿದ್ದ ಅವನಿಗೆ ಕೈಯ್ಯಲ್ಲಿ ಈಗ ಏನೂ ಉಳಿದಿರಲಿಲ್ಲ. ಜೊಂಡು ಹುಲ್ಲನ್ನೇ ಕಿತ್ತು ಆ ಕೃತವರ್ಮನ ಕಡೆಯವರನ್ನು ಸಹಸ್ರ ಸಂಖ್ಯೆಯಲ್ಲಿ ಕೊಂದುಹಾಕಿದ! ಅವನ ಕೈಲಿ ಅದು ವಜ್ರಾಯುಧ ಆಯಿತು! ಸುದರ್ಶನ ಚಕ್ರವೇ ಆಯಿತು!

ಈಗ ಯಾದವರ ಆಯುಧಗಳೂ ಮುಗಿದಿದ್ದು, ಅವರೂ ಕೃಷ್ಣನ ಉದಾಹರಣೆಯಿಂದ ಜೊಂಡು ಹುಲ್ಲನ್ನೇ ಕಿತ್ತು ಹೊಡೆದಾಡಲಾರಂಭಿಸಿದರು.

ಆಶ್ಚರ್ಯ! ಈ ಮೃತ್ಯು ತಾಂಡವದಿಂದ ತಪ್ಪಿಸಿಕೊಂಡು ಬದುಕಿ ಉಳಿಯಬೇಕೆಂಬಾಸೆ ಯಾರಿಗೂ ಬರಲೇ ಇಲ್ಲ!

ಶ್ರೀಕೃಷ್ಣನ ಕೈಯಲ್ಲಿದ್ದ ಜೊಂಡು ಉಳಿದವರಿಗೆ ಕಬ್ಬಿಣದ ಒನಕೆಯಂತೆ ಕಾಣಲಾರಂಭಿಸಿತ್ತು! ಹಲವರು ದುರ್ವಾಸರನ್ನು ನೆನೆದರು! ಕಾಲ ಮಿಂಚಿತ್ತು, ಕೈಮೀರಿತ್ತು!

ಶ್ರೀಕೃಷ್ಣ ಪುತ್ರರೆಲ್ಲ, ಸಾಂಬ, ಚಾರುದೇಷ್ಣ, ಪ್ರದ್ಯುಮ್ನಾದಿಗಳೆಲ್ಲ ಒಬ್ಬರೂ ಉಳಿಯದಂತೆ ಸತ್ತುಬಿದ್ದ ಘೋರದೃಶ್ಯ, ಆ ಬೆಳದಿಂಗಳ ತಂಪಿನಲ್ಲೂ, ಶ್ರೀಕೃಷ್ಣ ಪತ್ನಿಯರ ಎದೆಗೆ ದಳ್ಳುರಿ ತಂದಿತ್ತು.

ಶ್ರೀಕೃಷ್ಣನ ತಮ್ಮ ಗದನನ್ನು ಯಾರೋ ಕೊಂದಿದ್ದರು! ಅಕ್ರೂರ ಸತ್ತಿದ್ದ! "ಇನ್ನಾರಿಗಾಗಿ ಶಾಂತಿ?" ಎಂದು ಯೋಚಿಸಿ ಕ್ರುದ್ಧನಾದ ಕೃಷ್ಣ, ಉಳಿದ ಯಾದವ ವೀರರನ್ನು ತಾನೇ ಜೊಂಡು

ಹುಲ್ಲುಗಳಿಂದ ಕೊಲ್ಲುತ್ತಾ ಬಂದ! ಇದು ನಡೆಯುತ್ತಾ ನಡೆಯುತ್ತಾ ರಾತ್ರಿಯೇ ಮುಗಿಯುತ್ತಾ ಬಂದು, ಚಂದ್ರನೂ ಅಸ್ತಂಗತನಾಗುತ್ತಿದ್ದ! ಚಂದ್ರವಂಶವೇ ಹತವಾಗಿ, ಅವನೂ ಕಾಂತಿಹೀನನಾಗಿ ಕಾಣುತ್ತಿದ್ದ.

ಮರಳ ದಂಡೆಯೆಲ್ಲ ಹೆಣಗಳಿಂದ ತುಂಬಿ ದುರ್ವಾಸನೆ ನಾರಲಾರಂಭಿಸಿತ್ತು! ರಕ್ತವು ಅಲ್ಲಲ್ಲೇ ಇಂಗಿದ್ದರೂ ಭಯಂಕರವಾಗಿ ಕಾಣುತ್ತಿತ್ತು!

ಯಾದವ ಸ್ತ್ರೀಯರು ನಿಸ್ಸಹಾಯಕರಾಗಿ ಕೂಡಿಕೊಂಡು ಅಳುತ್ತಿದ್ದರು! ಅವರನ್ನು ಅಲ್ಲಿ ಯಾರು ಸಂತೈಸುವವರಿದ್ದರು!

ಶ್ರೀಕೃಷ್ಣಸಾರಥಿ, ದಾರುಕ, ತನ್ನ ಸ್ವಾಮಿಯ ಮಾತುಗಳನ್ನು ನೆನೆದ! ಶ್ರೀಕೃಷ್ಣನ ಬಳಿ ಬಂದು "ಪ್ರಭು! ಈ ಬಭ್ರು ಒಬ್ಬ ಉಳಿದಿದ್ದಾನೆ. ಬಲರಾಮ ಎಲ್ಲೋ ಕಾಣಲಿಲ್ಲ! ಬೇರಾರೂ ಉಳಿದಿಲ್ಲ. ಮುಂದಿನದನ್ನು ಚಿಂತಿಸಬೇಡವೇ" ಎಂದು ಬಿನ್ನೈಸಿದ.

ಶ್ರೀಕೃಷ್ಣ ಬೆವರೊರೆಸಿಕೊಂಡು ಅವನನ್ನು ನೋಡಿದ: "ಹೌದು! ಬಲಭದ್ರನನ್ನು ಹುಡುಕೋಣ ಬನ್ನಿ" ಎನ್ನುತ್ತಾ ಸಮುದ್ರ ತೀರದಲ್ಲೆಲ್ಲ ಹುಡುಕಾಡಿದರು.

ಎಲ್ಲೂ ಕಾಣಲಿಲ್ಲ! ಮಳಲ ರಾಶಿಯಲ್ಲಿ ಮತ್ತೆ ಹುಡುಕಾಡಿದರು! ಕಾಣಲಿಲ್ಲ. ಓಡೋಡಿ ದಡಕ್ಕೆ ಬಂದು ಸುತ್ತಣ ಗಿಡಮರಗಳ ಬಳಿ ಹುಡುಕಾಡಿದರು.

ಬಲರಾಮ ಒಂದು ನಿರ್ಜನ ಪ್ರದೇಶದಲ್ಲಿ, ಒಂದು ವೃಕ್ಷದ ಅಡಿಯಲ್ಲಿ, ಚಿಂತಾಮಗ್ನನಾಗಿ, ಪದ್ಮಾಸನದಲ್ಲಿ, ಯೋಗಿಯಂತೆ ಕುಳಿತಿದ್ದ.

ಶ್ರೀಕೃಷ್ಣ, ದಾರುಕ, ಬಭ್ರುಗಳು ಅವನ ಬಳಿ ಕುಳಿತರು!

* * * * *

# ೯. ಬಲಭದ್ರನ ನಿರ್ಯಾಣ

ಬಲಭದ್ರ, ಪ್ರಶಾಂತ ಮುಖಮುದ್ರೆಯಿಂದ ಯೋಗಾಸನದಲ್ಲಿ ಕುಳಿತಿದ್ದ! ಅವನನ್ನು ಆ ಸ್ಥಿತಿಯಿಂದ ಬಹಿರ್ಮುಖನನ್ನಾಗಿಸಲು ಆಗ ಶ್ರೀಕೃಷ್ಣ ಇಷ್ಟ ಪಡಲಿಲ್ಲ.

ಕೂಡಲೇ ಮಾಡಬೇಕಾದ ಎರಡು ಕೆಲಸಗಳನ್ನು ಕುರಿತು ಶ್ರೀಕೃಷ್ಣ ಚಿಂತಿಸಿ, ಮೊದಲು ಬಭ್ರುವಿನ ಮುಖ ನೋಡಿದ!

ಈ ಬಭ್ರುವು ಯಾದವ ವೀರನಾಗಿದ್ದ ಸತ್ವತನ ಮಗ! ಯಯಾತಿ ಪುತ್ರನಾಗಿದ್ದ ಯದುವಿನ ಮಕ್ಕಳ ಪೈಕಿ ಕ್ರೋಷ್ಟು ಎಂಬುವನ ಸಂತತಿಯಲ್ಲಿ ಹುಟ್ಟಿದವನು ಈ ಸತ್ವತ. ಇವನ ಮಕ್ಕಳೆಲ್ಲ ಸಾತ್ವತರೆಂದೇ ಖ್ಯಾತರಾಗಿದ್ದವರು. ಭಗವಂತನನ್ನು ಯಜ್ಞ-ಯಾಗಗಳಿಂದ ಆರಾಧಿಸಿ ತೃಪ್ತಿ ಪಡಿಸಲು ಸೌಕರ್ಯವಿದ್ದ ತ್ರೇತಾಯುಗ ಮುಗಿದಿದ್ದು, ಈ ದ್ವಾಪರದಲ್ಲಿ ದೇವಾಲಯ, ಅರ್ಚನ, ಪಾಂಚರಾತ್ರ ವಿಧಿಗಳಿಂದ ವೇದೋಕ್ತವಾಗಿಯೇ ಆರಾಧಿಸುವ ಪದ್ಧತಿಯು ವಿಶೇಷವಾಗಿ ರೂಢಿಗೆ ಬಂದದ್ದು ಈ ಸತ್ವತನ-ಸಾತ್ವತರ ಕಾಲದಲ್ಲಿ, ಅವರ ಮೂಲಕವಾಗಿಯೇ! ಭಾಗವತ ಧರ್ಮಕ್ಕೆ ಸಾತ್ವತ ಧರ್ಮವೆಂದೇ ಹೆಸರು ಬರಲೂ ಕಾರಣವಾದದ್ದೂ ಈ ಕಾಲದಲ್ಲೇ, ಮತ್ತು ಈ ನಿಮಿತ್ತವಾಗಿಯೇ!

ಈ ಸತ್ವತನ ಪುತ್ರರಲ್ಲಿ ಭಜನ, ಭಜಮಾನ, ದಿವ್ಯಾಂಧಕ, ದೇವಾವೃಧ, ಮಹಾಭೋಜ, ವೃಷ್ಣಿ- ಎಂಬ ಆರ್ವರು ಪ್ರಸಿದ್ಧರಾಗಿ, ಇವರ ವಂಶಸ್ಥರೇ ಭೋಜರು, ಅಂಧಕರು, ವೃಷ್ಣಿಗಳು ಎಂದು ಖ್ಯಾತರಾದರು. ಶ್ರೀಕೃಷ್ಣ ವೃಷ್ಣಿವಂಶ ಪ್ರದೀಪನೆನಿಸಿದರೆ, ಬಭ್ರುವು ದೇವಾವೃಧನ ಮಗನಾಗಿ ಶ್ರೀಕೃಷ್ಣನಿಗೆ ಜ್ಞಾತಿ ಸಂಬಂಧದಲ್ಲಿದ್ದವನು.

**ಬಭ್ರುಃಶ್ರೇಷ್ಠೋ ಮನುಷ್ಯಾಣಾಂ**

ಎಂಬ ಪ್ರಸಿದ್ಧಿಯು ("ಮನುಷ್ಯರಲ್ಲಿ ಬಭ್ರುವೇ ಶ್ರೇಷ್ಠನಾದವನು") ಅವನ ಕಾಲದಲ್ಲೇ ಉಂಟಾಗಿದ್ದು ಇವನು ಎಂಟು ಸಾವಿರದ ಅರವತ್ತಾರು ಶಿಷ್ಯರನ್ನು ಹೊಂದಿದ್ದು, ಅವರೆಲ್ಲ ಭಾರತ ದೇಶಾದ್ಯಂತ ಭಗವಂತನ ಮಂದಿರ (ದೇವಾಲಯ) ಗಳನ್ನು ನಿರ್ಮಿಸಿ, ಪೂಜಾ ಪದ್ಧತಿಗಳನ್ನು ಅಲ್ಲಲ್ಲಿ ಏರ್ಪಡಿಸಿ, ಅನೇಕ ಯಾಗಗಳನ್ನು ನಡೆಸಿ (ಪುರುಷಸೂಕ್ತಯಾಗ, ಶ್ರೀಸೂಕ್ತಯಾಗ, ಮಹಾಸುದರ್ಶನಯಾಗ ಮುಂತಾದವನ್ನು ದೊಡ್ಡ ಪ್ರಮಾಣದಲ್ಲಿ ಮಾಡಿಸಿ) ಮೋಕ್ಷ ಹೊಂದಿದ್ದರೆಂದು ಪುರಾಣ ಪ್ರಸಿದ್ಧಿಯುಂಟು.

***ಪುರುಷಾಃ ಷಟ್‌ಚ ಷಷ್ಟಿಶ್ಚ ಸಹಸ್ರಾಣಿ ತಥ್ಯಾಷ್ಟ ಯೇ***
***ತೇಽಮೃತತ್ವ ಮನುಪ್ರಾಪ್ತಾಃ ಬಭ್ರೋಃ ದೇವಾವೃಧಾದಪಿ (ವಿ.ಪು- ೪-೧೩-೬)***

ಸಾತ್ಯಕಿ ಸತ್ತ ಮೇಲೆ ಶ್ರೀಕೃಷ್ಣನಿಗೆ ಆ ಸ್ಮಶಾನ ಸದೃಶವಾಗಿದ್ದ ಪಿಂಡಾರಕ ಕ್ಷೇತ್ರದಲ್ಲಿ ಆಪ್ತ ಸಹಾಯಕರಾಗಿ ಉಳಿದಿದ್ದವರು, ವೃದ್ಧನಾದ ಈ ಬಭ್ರುವೊಬ್ಬ, ದಾರುಕನೆಂಬ ಸಾರಥಿಯೊಬ್ಬ! ಬಭ್ರುವನ್ನು ದೂರಕ್ಕೆ ಕಳುಹಲು ಇಚ್ಛಿಸದೆ ಶ್ರೀಕೃಷ್ಣ ಅವನಿಗೆಂದ:

"ದ್ವಾರಕೆಯ ಸುತ್ತ ಅನಾಗರಿಕ ದಸ್ಯು ಜನಾಂಗಗಳು ನೆಲೆಸಿ, ನಮ್ಮ ಈ ವಿನಾಶ ಕಾಲದಲ್ಲಿ ಅವರು ನಮ್ಮನ್ನು ಜಯಿಸಲು ಕಾಲ ಕಾಯುತ್ತಿದ್ದಾರೆ. ನಮ್ಮ ವೀರರು ಅವರ ಸ್ತ್ರೀಯರನ್ನು ಉಪಭೋಗಿಸುತ್ತಿದ್ದುದು ಬಹಿರಂಗ ಪ್ರಸಿದ್ಧಿ ಪಡೆದಿದೆ! ನಮ್ಮ ಯಾದವ ಸ್ತ್ರೀಯರ ಮೇಲೆ ಅತ್ಯಚಾರ

ಮಾಡಲು ಈ ಸುಸಂಧಿಯನ್ನು ಅವರು ಬಿಡಲಾರರು! ಅಯ್ಯಾ, ಹಿರಿಯನೇ! ಈ ಆಪತ್ಕಾಲದಲ್ಲಿ ನೀನು ಕೂಡಲೇ ದ್ವಾರಕೆಯೊಳಗೆ ಹೋಗಿ ಪೂಜ್ಯನಾದ ನನ್ನ ತಂದೆ ವಸುದೇವನಿಗೆ ಧೈರ್ಯ ಹೇಳಿ, ಈ ಕ್ಷೇತ್ರದಲ್ಲಿ ನಡೆದ ಘೋರಘಟನೆಗಳನ್ನು ವಿವರಿಸಿ, ಬೇರೊಂದು ಏರ್ಪಾಟಾಗುವವರೆಗೆ ನಮ್ಮ ಅಂತಃಪುರದ ಸ್ತ್ರೀಯರನ್ನು ರಕ್ಷಿಸುತ್ತಿರು... ಇದೋ ಈ ದಾರುಕನನ್ನು ಈಗಲೇ ಹಸ್ತಿನಾಪುರಕ್ಕೆ ಕಳುಹುತ್ತಿದ್ದೇನೆ. ಅಲ್ಲಿಂದ ಅರ್ಜುನನನ್ನು ಬರಹೇಳುತ್ತೇನೆ. ಅವನು ಬರಲು ನಾಲ್ಕಾರು ದಿನ ಆದೀತು! ಬಲರಾಮ ಪ್ರಾಯೋಪವೇಶಕ್ಕೆ ಕುಳಿತಿದ್ದಾನೆ. ಅವನಿಲ್ಲದೆ ನಾನು ಬದುಕಿರಲಾರೆ! ಇನ್ನಾರು ಆಗ ಬದುಕಿರುತ್ತಾರೋ ಇಲ್ಲವೋ! ಉಗ್ರಸೇನ ದೊರೆ ಈ ದುರ್ವಾರ್ತೆ ಕೇಳಿಯೇ ಸಾಯುವ ಸಂಭವವುಂಟು. ಆದ್ದರಿಂದ ಈಗ ನಿನ್ನ ಮೇಲೆ ಬಹು ಗುರುತರವಾದ ಹೊಣೆಯನ್ನು ಹೊರಿಸಿರುತ್ತೇನೆ. ಬೇಗ ಹೊರಡು. ದ್ವಾರಕೆಯಲ್ಲಿ ಯಾದವ ಸ್ತ್ರೀಯರ ಮೇಲೆ ಅತ್ಯಾಚಾರವಾಗದಂತೆ ಕಾಪಾಡುವ ಭಾರ ನಿನ್ನದು."

ಬಭ್ರುವಿಗೆ ಶ್ರೀಕೃಷ್ಣನನ್ನು ಅಲ್ಲಿ ಬಿಟ್ಟು ಆ ಸ್ಥಿತಿಯಲ್ಲಿ ಅಗಲಲು ಮನಸ್ಸಾಗದೇ ಅಲ್ಲೇ ಕೊಂಚ ಹೊತ್ತು ನಿಂತಿದ್ದ!

ಇತ್ತ ದಾರುಕನಿಗೆ ಶ್ರೀಕೃಷ್ಣ ಹೀಗೆಂದ:

"ಅಯ್ಯಾ! ಆಪ್ತ ಸಾರಥಿಯೇ! ಹಿಂದೆಯೇ ನಿನಗೆ ಹೇಳಬೇಕಾದುದನ್ನೆಲ್ಲ ಹೇಳಿದ್ದೇನೆ ಮತ್ತು ಹೇಳಲು ನಾನಿನ್ನೂ ಇರುವುದೇ ಭಾಗ್ಯ. ಯಾವುದಾದರೂ ಗಟ್ಟಿಮುಟ್ಟಾದ ರಥವನ್ನು ಹತ್ತಿ ಬೇಗನೆ ಹಸ್ತಿನಾವತಿಗೆ ಹೊರಡು. ಪಾಂಡವರಲ್ಲಿ ಶ್ರೇಷ್ಠನಾದ ಅರ್ಜುನನಿಗೂ ನನಗೂ ಇರುವ ತಾದಾತ್ಮ್ಯಭಾವ ನಿನಗೆ ಗೊತ್ತಿದ್ದದ್ದೇ! **"ಅರ್ಜುನಃ ಕೇಶವಸ್ಯಾತ್ಮಾ ಕೃಷ್ಣಸ್ಯಾತ್ಮಾ ಧನಂಜಯಃ"** ಎಂಬುದು ಮಹಾಭಾರತ ಯುದ್ಧ ಕಾಲದಲ್ಲೇ ಜಗತ್ಪ್ರಸಿದ್ಧವಾಯಿತಷ್ಟೆ! ಅರ್ಜುನನಿಗೆ ಹೇಳು: ನಿನ್ನ ಸಹಾಯವನ್ನು ನಿನ್ನ ಸಖ ಕೇಶವ ಈಗ ಬಯಸುತ್ತಾನೆ, ಬೇಗಾ ಬಾ- ಎಂದು. ಇಲ್ಲಿ ನಡೆದುದನ್ನೆಲ್ಲ ಸೂಕ್ಷ್ಮವಾಗಿ ಹೇಳಿ, ಬೇಗ ಅರ್ಜುನನನ್ನು ನೀನೇ ಕರೆದು ತಾ. ಮಡಿದ ಯಾದವ ವೀರರಿಗೆಲ್ಲ ಗತಿಗಾಣಿಸಬೇಕಾದವನು ಈಗ ಅವನೇ! ದಾರುಕ!! ಎಂಥ ವಿಷಮಕಾಲ, ನೋಡಿದೆಯಾ? ಕಾಲವು ಯಾವಾಗ ಘೋರ ರೂಪ ತಾಳುವುದೆಂಬುದನ್ನು ಯಾರು ಹೇಳಬಲ್ಲರು? ಬೇಗ, ಹೊರಡು, ನಿಲ್ಲಬೇಡ."

ದಾರುಕನಿಗೂ ಶ್ರೀಕೃಷ್ಣನನ್ನಗಲಲು ಇಷ್ಟವಿರಲಿಲ್ಲ. ಯುಗಾಂತರದಲ್ಲಿ ನಡೆದ ಘಟನೆಯೊಂದರ ನೆನಪಾಯಿತು!...

... ಗಂಗಾ ದಡ!... ಶ್ರೀರಾಮಚಂದ್ರ ಗುಹನ ದೋಣಿಯನ್ನು ಹತ್ತಿ ದಕ್ಷಿಣದ ಯಮುನೆಯತ್ತ ಪ್ರಯಾಣ ಹೊರಟಿದ್ದಾನೆ! ಅವನೊಡನೆ ಸೀತಾಲಕ್ಷ್ಮಣರೂ ಕುಳಿತಿದ್ದಾರೆ... ದೋಣಿಯನ್ನು ಗುಹನೇ ನಡೆಸಲು ಹುಟ್ಟು ಹಿಡಿದು, ಪ್ರಭುವಿನ ಅಪ್ಪಣೆ ನಿರೀಕ್ಷಿಸುತ್ತಾ ಕುಳಿತಿದ್ದಾನೆ!... ಶ್ರೀರಾಮ, ಅವರೆಗೆ ತನ್ನನ್ನು ಅಯೋಧ್ಯೆಯಿಂದ ರಾಜರಥದಲ್ಲಿ ಕರೆತಂದ ಸುಮಂತ್ರನನ್ನು ವಿಸರ್ಜಿಸುತ್ತಿದ್ದಾನೆ!... ಸುಮಂತ್ರನಿಗೆ ರಾಮನನ್ನು ಆಗ ಬಿಟ್ಟುಹೋಗಲು ಎಳ್ಳಷ್ಟೂ ಇಷ್ಟವಿರಲಿಲ್ಲ! "ಪ್ರಭೂ ನಾನೂ ನಿನ್ನೊಡನೆ ಬರುತ್ತೇನೆ... ಕೈ ಬಿಡಬೇಡ" ಎಂದು ಅಂಗಲಾಚುತ್ತಾನೆ. ರಾಮ ಹೇಳಿದ: "ವೃದ್ಧ ಮಿತ್ರನೇ! ನಿನ್ನನ್ನು ಅಗಲಲು ನನಗೂ ಇಷ್ಟವಿಲ್ಲ! ಆದರೆ ಖಾಲಿಯಾದ ಈ ರಥವನ್ನು ನೀನು ಮತ್ತೆ ಊರಿಗೆ ತೆಗೆದುಕೊಂಡು ಹೋಗದಿದ್ದರೆ, ನನ್ನ ಚಿಕ್ಕ ತಾಯಿ ಕೈಕೇಯಿಯು, ನಾನು ನಿಜವಾಗಿ ಕಾಡಿಗೇ ಹೋಗಿರುವೆನೆಂಬುದನ್ನು ನಂಬುವುದಾದರೂ ಹೇಗೆ?"

ಸುಮಂತ್ರ ನಿರುತ್ತರನಾಗಿ, ನಿರಾಶನಾದರೂ, ಗುಹನ ಶೃಂಗಿಬೇರಪುರದಲ್ಲೇ ಇನ್ನೆರಡು ಮೂರು ದಿನ ಉಳಿದ! **ಆಶಯಾ ಯದಿ ವಾ ರಾಮಃ ಪುನಃ ಶಬ್ದಾಪಯೇದಿತಿ–** ಅತ್ತ ಹೊರಟ ರಾಮ, ಸುಮಂತ್ರನ ಕೊನೆಯ ಕೋರಿಕೆಯನ್ನು ನೆರವೇರಿಸಲಾಗದ, ಆ ಕೊರತೆಯನ್ನು ತೀರಿಸಲಾಗದ

ಚಿಂತೆಯಿಂದ, ಮತ್ತೆ ಬಂದು ತನನ್ನು ಅಲ್ಲಿಂದ ತನ್ನೊಡನೆಯೇ ಕರೆದುಕೊಂಡು ಹೋಗುವನೇನೋ! ಎಂಬ ಆಶೆಯ ಕಿಡಿ, ಆ ನಿರಾಶೆಯ ಹೊಗೆಯೊಳಗೆ ಎಲ್ಲೋ ಬೆಳಗುತ್ತಿತ್ತು!

ಇಂದು ದಾರುಕನ ಸ್ಥಿತಿಯೂ ಅದೇ ಇತ್ತು!... ಈಗಿನ ದಾರುಕನೇ ಅಂದಿನ ಸುಮಂತ್ರ! "ಪ್ರಭು! ನನ್ನನ್ನೆಂದೂ ನಿನ್ನ ದಾಸನನ್ನಾಗಿಯೇ ಸ್ವೀಕರಿಸು" ಎಂಬ ಪ್ರಾರ್ಥನೆಯೇ ಈಗಿನ ಸಂಯೋಗಕ್ಕೂ ಕಾರಣವಾಗಿತ್ತು.. ಸುಮಂತ್ರನಾದರೂ ಮತ್ತೆ ರಾಮ ಅಯೋಧ್ಯೆಗೆ ಮರಳಿದ್ದನ್ನು ನೋಡಿದ! ರಾಮನನ್ನು ಕೂಡಿದ!... ಈಗ ದಾರುಕನೋ???

ದಾರುಕನ ಮನ ಓಡುತ್ತಿತ್ತು! ಶ್ರೀಕೃಷ್ಣನಿಗೆ ಅದು ಪ್ರತ್ಯಕ್ಷವಾಯಿತು! "ಹೌದು, ಅಂದಿನ ಸುಮಂತ್ರನೇ ನೀನು, ದಾರುಕ!... ನಿನ್ನನ್ನಗಲಲು ನನಗೂ ಖಂಡಿತ ಇಷ್ಟವಿಲ್ಲ! ಆದರೆ ಈ ಆಪತ್ಕಾಲದಲ್ಲಿ ಅಷ್ಟು ದೂರದ ಪ್ರಯಾಣ ಮಾಡಿ ಬರಲು, ಅರ್ಜುನನನ್ನು ಕರೆತರಲು ನನಗೆ ಇಲ್ಲಿ ಬೇರಾರು ಸಹಾಯಕರಿದ್ದಾರೆ? ಇಲ್ಲಿ ನೋಡು, ಐದು ಲಕ್ಷದಷ್ಟು ಯಾದವ ವೀರರು ಸತ್ತು ಬಿದ್ದಿದ್ದಾರೆ! ಇವರಿಗೆಲ್ಲ ಅಂತ್ಯ ಸಂಸ್ಕಾರ ಮಾಡುವರಾರು? ಇವರ ಹೆಣಗಳನ್ನು ಗುರುತು ಹಿಡಿಯಬಲ್ಲವರಾರು? ಅರ್ಜುನ ಬರುವುದು ತಡವಾದಷ್ಟೂ ಇವರ ಸಂಸ್ಕಾರ ತಡವಾಗುತ್ತದೆ! ಹದ್ದು, ನಾಯಿ, ಕಾಗೆ, ನರಿಗಳು ಆ ವರೆಗೆ ಇವನ್ನು ಹೀಗೇ ಬಿಡುವುವೆ? ಬೇಗ ಹೋಗು."

ಇಷ್ಟವಿಲ್ಲದ ಮನಸ್ಸಿನಿಂದ ಹೊರಡಲು ಉದ್ಯುಕ್ತನಾಗಿ ದಾರುಕ ಶ್ರೀಕೃಷ್ಣನಿಗೆ ನಮಸ್ಕರಿಸಿದ. ಶ್ರೀಕೃಷ್ಣ ಹೇಳಿದ: "ಈಗ ನಾನು ಹೇಳಿದ ಕೆಲಸವೂ ನಿನಗೆ ಕೈಂಕರ್ಯವೇ! ಅದು ಅಗಲಿಕೆಯ ರೂಪದಲ್ಲಿರಬಹುದು! ಆದರೆ ಅದು ನಡೆಯುವವರೆಗೂ ನಾನು ನಿನ್ನ ಚಿತ್ತದಲ್ಲಿಯೇ ಇರುತ್ತೇನೆ. ಚಿಂತಿಸಬೇಡ."

ದಾರುಕ ಅತ್ತ ಹೊರಟ. ಇತ್ತ ಬಭ್ರು ಇನ್ನೂ ನಿಂತಿದ್ದ. ಶ್ರೀಕೃಷ್ಣ ಹೇಳಿದ: "ಮಿತ್ರನೇ! ನೀನಿನ್ನು ದ್ವಾರಕೆಗೆ ಹೊರಡು. ನಾನೆಂದುದನ್ನು ನನ್ನ ತಂದೆಗೆ ಮೊದಲು ತಿಳಿಸು."

ಬಭ್ರುವು ವಿಧಿಯಿಲ್ಲದೆ ಭಾರವಾದ ಹೆಜ್ಜೆಗಳನ್ನಿಕ್ಕುತ್ತಾ ಆ ಹೆಣಗಳ ರಾಶಿಯನ್ನು ದಾಟುತ್ತಾ ರಥದ ಬಳಿ ಬಂದ!

ಅಷ್ಟರಲ್ಲಿ ಎಲ್ಲಿಂದಲೋ ಒಂದು ಬಾಣ ಬಂದು ಅವನ ಎದೆಯನ್ನು ಸೀಳಿತು!! "ಹಾಂ! ಕೃಷ್ಣ!" ಎನ್ನುತ್ತ ಬಭ್ರು ನೆಲಕ್ಕೊರಗಿದ! ಕ್ಷಣಮಾತ್ರದಲ್ಲಿ ಅವನ ಪ್ರಾಣ ಹೋಯಿತು! ಶ್ರೀಕೃಷ್ಣ ಬಂದು ಅವನನ್ನು ತೊಡೆಯ ಮೇಲೆ ಮಲಗಿಸಿಕೊಂಡು ನೋಡುವಾಗ, ಅವನ ಶರೀರ ನಿರ್ಜೀವವಾಗಿತ್ತು. ಬೆನ್ನೊಳಗಿಂದ ಹೊಕ್ಕ ಬಾಣವನ್ನು ಕೃಷ್ಣ ಹೊರತೆಗೆದು ನೋಡಿದ! ಅದರ ತುದಿಯಲ್ಲಿ ಒಂದು ಚೂಪಾದ ಕಬ್ಬಿಣದ ಅಲಗು ಸಿಕ್ಕಿಸಿತ್ತು.

ಶ್ರೀಕೃಷ್ಣ ಯೋಚಿಸಿದ! ತನ್ನವರೆಲ್ಲ ಮುನಿಶಾಪದಿಂದ ಸತ್ತು ಬಿದ್ದು, ಇವನೊಬ್ಬ ಉಳಿಯುವುದಕ್ಕೆ ಕಾರಣವೇನಿರಲಿಲ್ಲ! ತೇದು ತೀಡಿದ ಕಬ್ಬಿಣದ ಒನಕೆಯನ್ನು ಅರಮನೆಯ ಭಟರು ಸಮುದ್ರದಲ್ಲಿ ಬಿಟ್ಟರಷ್ಟೆ. ಕೊನೆಯಲ್ಲಿ ಉಳಿದ ಎರಡು ಚೂರುಗಳನ್ನು, ಕೈಗೆ ಹಿಡಿಯಲಾಗದೆ, ಸಮುದ್ರದಲ್ಲಿ ಹಾಗೇ ಬಿಟ್ಟಾಗ ಒಬ್ಬ ವ್ಯಾಧನಿಗೆ ಒಂದು ಮೀನಿನ ಹೊಟ್ಟೆಯಲ್ಲಿ ಆ ಪೈಕಿ ಒಂದು ಅಲಗು ಸಿಕ್ಕಿ, ಅವನು ಅದನ್ನು ಬಾಣದ ತುದಿಗೆ ಸಿಕ್ಕಿಸಿದ್ದ! ದೂರದಿಂದ, ಯಾದವರು ಕುಡಿದು ಕಾದಾಡಿ ಮಡಿದುದನ್ನು ನೋಡಿದ! ಅವನೂ ಆ ದಸ್ಯುಗಳ ಪೈಕಿ ಒಬ್ಬನೋ, ಅವರ ಪ್ರಾಂತದವನೋ ಇರಬೇಕು!! ಬಭ್ರುವು ರಥ ಹತ್ತಿ ಕುಳ್ಳಿರಲು ಹೊರಟಾಗ ಅವನು ಆ ಬಾಣ ಪ್ರಯೋಗ ಮಾಡಿದ್ದ. ಬಭ್ರುವಿಗೂ ಮುನಿಶಾಪ ಹಾಗೆ ತಟ್ಟಿತ್ತು! ಆ ಇನ್ನೊಂದು ಅಲಗು ಉಳಿಯಿತಷ್ಟೆ! ತನ್ನ ಕಾಲವನ್ನು ತಾನು ಎದುರು ನೋಡುತ್ತಾ ವ್ಯಾಧನ ಬತ್ತಳಿಕೆಯಲ್ಲಿ ಮಲಗಿತ್ತು!!

*****

ಒಚ್ಚರವು ಸತ್ತ ಮೇಲೆ ಶ್ರೀಕೃಷ್ಣ ಚಿಂತಿಸಿದ. ತಾನೂ ತುಂಬಾ ದಣಿದಿದ್ದ! ಮನವೂ ನೆಮ್ಮದಿ ಇರಲಿಲ್ಲ.

ದ್ವಾರಕೆಗೆ ಸಮಾಚಾರ ತುರ್ತಾಗಿ ತಲುಪುವುದಿತ್ತು. ಬೇರಾರೂ ಸಹಾಯಕರನ್ನು ಕಾಣದೆ ಸ್ವಯಂ ತಾನೇ ಒಂದು ರಥವನ್ನು ಹತ್ತಿದ. ದ್ವಾರಕೆಯನ್ನು ತಲುಪಿದ.

ವಸುದೇವ ದೇವಕಿಯರ ಅರಮನೆಯಲ್ಲಿ ಯಾವ ಸಂಭ್ರಮ ಸಡಗರಗಳೂ ಇರಲಿಲ್ಲ! ಎಲ್ಲರೂ ಪಿಂಡಾರಕಕ್ಕೆ ಹೋಗಿದ್ದು, ದಾಸ ದಾಸಿಯರೂ ಕೇವಲ ಮಿತ ಸಂಖ್ಯೆಯಲ್ಲಿರುತ್ತಾ ಅಲ್ಲಿ ಒಂದು ಬಗೆಯ ಶೂನ್ಯ ವಾತಾವರಣವೇ ಇತ್ತು! ಅಥವಾ ಶ್ರೀಕೃಷ್ಣನ ಮನಸ್ಸಿಗೇ ಹಾಗೆನ್ನಿಸಿತೋ!

ಉಯ್ಯಾಲೆಯಲ್ಲಿ ವಸುದೇವ ಕುಳಿತು ಮಕ್ಕಳ ಬಗೆಗೇ ಚಿಂತಿಸುತ್ತಿದ್ದ. ಹೊರಗಡೆ ಹುಣ್ಣಿಮೆಯ ಚಂದ್ರನು ಪ್ರಕಾಶಿಸುತ್ತಿದ್ದರೂ, ಅದನ್ನನುಭವಿಸಲು ದ್ವಾರಕೆಯಲ್ಲಿ ಯಾವ ಯುವಕನೂ ಇರಲಿಲ್ಲ. ಹಲವಾರು ದಿನಗಳಿಂದ ನಡೆದ ಉತ್ಪಾತಗಳಿಂದ, ಮುನಿಶಾಪ ಭೀತಿಯಿಂದ, ದ್ವಾರಕೆಯ ಯುವತಿಯರು ಆ ಬೆಳದಿಂಗಳನ್ನು ಅನುಭವಿಸುವ ಸ್ಥಿತಿಯಲ್ಲಿರಲಿಲ್ಲ. ಹಲವಾರು ರಾಣಿಯರು ಪಿಂಡಾರಕದಲ್ಲೇ ಇರುತ್ತಾ ನೋಡಬಾರದುದನ್ನೆಲ್ಲ ನೋಡಿ ಎದೆ ಒಡೆದು ಸಾಯುವುದರಲ್ಲಿದ್ದರು. ಗರ್ಗಾಚಾರ್ಯರೂ ಅವರ ಶಿಷ್ಯರೂ ಅಲ್ಲಿ ಅವರ ಕಾವಲಿಗಿರುತ್ತಾ ಸಾಂತ್ವನದ ಮಾತುಗಳನ್ನು ಹೇಳುತ್ತಿದ್ದರು. ಇಲ್ಲಿ ಅರಮನೆ ಶೂನ್ಯ ವಾತಾವರಣದಲ್ಲಿತ್ತು.

ಅಂತಃಪುರದ ದ್ವಾರದಲ್ಲೇ ದೇವಕೀದೇವಿಯು ನಿಂತು, ಅರಮನೆಯಾಚೆಗೆ ನೋಡುತ್ತಿದ್ದಳು. ಶ್ರೀಕೃಷ್ಣ ಒಬ್ಬನೇ ಗಡಿಬಿಡಿಯಲ್ಲಿ ಬಂದು ಪಾದಗಳಿಗೆರಗಿದ್ದನ್ನು ಕಂಡು ಅವಳಿಗೇನೋ ಅನುಮಾನವಾಯ್ತು. ಅಂದು ಶ್ರೀಕೃಷ್ಣ ತನಗೆ ಹೇಳಿದ ಮಾತುಗಳಿನ್ನೂ ಅವಳ ಕಿವಿಯಲ್ಲಿ ಮೊರೆಯುತ್ತಿದ್ದವು. ಶ್ರೀಕೃಷ್ಣ ಅಭಿವಾದನ ಮಾಡಿದ. "ಆಯುಷ್ಮಾನ್ ಭವ" ಎಂದು ದೇವಕಿ ಹರಸಿದಳು. ಶ್ರೀಕೃಷ್ಣ ಮೇಲೆದ್ದು ಹೇಳಿದ:

"ಅಮ್ಮಾ! ಆಯುಷ್ಯ ಯಾರಿಗೆ ಬೇಕು? ಆ ಹೊತ್ತು ಅತಿ ದೀರ್ಘಾಯುಷ್ಯದ ಅನರ್ಥಗಳನ್ನು ಕುರಿತು ಹೇಳಿ ಆಗಿದೆ... ಅದರ ಒಂದು ಅನರ್ಥ ಇಂದು ಸಂಭವಿಸಿತು!..."

ದೇವಕಿ: "ಎಂದರೆ?"

ಶ್ರೀಕೃಷ್ಣ: "ಯಾರಾರು ಎಲ್ಲಿಗೆ ಹೋಗಬೇಕೋ ಹೋಗಿ ಸೇರಿ ಆಯ್ತು! ರಾಣೀ ವಾಸದವರನ್ನು ತಂದೆ ರಕ್ಷಿಸುತ್ತಿರಲಿ... ಅರ್ಜುನ ಬೇಗ ಬರುತ್ತಾನೆ. ಎಲ್ಲ ಕ್ರಮವಾಗಿ ಆಗುತ್ತದೆ... ನೀವು ಎದೆಗೆಡದೆ ಆಗುವುದನ್ನು ಎದುರಿಸಬೇಕು. ಅಲ್ಲಿ ಅಣ್ಣ ರಾಮ ಒಬ್ಬನೇ ಇದ್ದಾನೆ. ನಾನು ಬೇಗ ಮತ್ತೆ ಹೋಗುವುದಿದೆ!"

ದೇವಕಿ: "ಕೃಷ್ಣ! ನಿನ್ನ ಮಾತು ಒಂದೂ ತಿಳಿಯುತ್ತಿಲ್ಲ!... ಅರ್ಜುನ ಏಕೆ ಬರುತ್ತಿದ್ದಾನೆ? ನೀನು ಮತ್ತೆ ಹೋಗುತ್ತಿರುವುವುದೆಲ್ಲಿಗೆ?... ಅಣ್ಣ ರಾಮ ಏಕೆ ಒಬ್ಬನೇ ಇದ್ದಾನೆ? ಇಲ್ಲಿಂದ ಹೊರಟ ರಾಜಕುಮಾರರೆಲ್ಲಿ?... ತೀರ್ಥಯಾತ್ರೆ ಆಯಿತಷ್ಟೆ! ಯಾವಾಗ ಹಿಂದಿರುಗುತ್ತಾರೆ?"

ಶ್ರೀಕೃಷ್ಣ: "ತೀರ್ಥಯಾತ್ರೆ ಮುಗಿಯಿತು, ತಾಯಿ!... ದೀರ್ಘಯಾತ್ರೆಯೂ ಆಗಬೇಕಾಗಿದೆ... ಅರ್ಜುನ ಬರುತ್ತಿರುವುದು ಅದಕ್ಕಾಗಿಯೇ!..."

ದೇವಕಿ: (ಅರ್ಥಮರ್ಥ ತಿಳಿಯುತ್ತಾ, ದು:ಖ ಉಮ್ಮಳಿಸಿ) "ಅಂದರೆ, ಮುನಿಶಾಪ... ಫಲ... ಕೊಟ್ಟೇ ಬಿಟ್ಟಿತೇ?... ಕೃಷ್ಣಾ!... ನೀನದನ್ನು ನಿವಾರಿಸಲಿಲ್ಲವೇ? ಅಯ್ಯೋ!... ನಮಗಿನ್ನಾರು ಗತಿ!..." ಎನ್ನುತ್ತಾ ಮೂರ್ಛೆ ಹೋಗುತ್ತಾಳೆ.

ಕೃಷ್ಣ ಬಂದದ್ದನ್ನು ಕಂಡು ವಸುದೇವನೂ ಅಲ್ಲಿಗೆ ಮೆಲ್ಲನೆ ಬಂದು, ದೇವಕಿ ಹೇಳಿದ ಕೊನೆಯ ಮಾತನ್ನಷ್ಟೇ ಕೇಳಿ ಗಾಬರಿಗೊಂಡು, ಕೇಳುತ್ತಾನೆ:

ವಸುದೇವ: "ಮಗು! ಮುನಿಶಾಪ ಫಲ ಕೊಟ್ಟಿತೇ?, ಮಕ್ಕಳೇನಾದರು?... ಅಯ್ಯೋ!... ಅವಿವೇಕವೆ?" ಎನ್ನುತ್ತಾ ಹಲುಬುತ್ತಾ ಕುಸಿಯುತ್ತಾನೆ.

ಚೇಟಿಯರು ಬಂದು ದೇವಕಿಯನ್ನೆತ್ತಿ ಪಲ್ಲಂಗದ ಮೇಲೆ ಮಲಗಿಸಿ, ಉಪಚಾರಗಳನ್ನು ಮಾಡುತ್ತಾರೆ. ಶ್ರೀಕೃಷ್ಣ ವಸುದೇವನನ್ನು ಕೈ ಹಿಡಿದು ಕರೆದೊಯ್ದು ಆಸನದಲ್ಲಿ ಕೂಡಿಸುತ್ತಾನೆ. ದೇವಕಿಗೆ ಜ್ಞಾನ ಬರುತ್ತದೆ. ಏಳಲು ಹೋದಾಗ, ಕೃಷ್ಣ ಅವಳ ಬಳಿಯೇ ಕುಳಿತು, ತಾಯಿಯ ನೆತ್ತಿಯನ್ನು ನೇವರಿಸುತ್ತಾ, ವಸುದೇವನ ಕಿವಿಗೂ ಬೀಳುವಂತೆ ಹೀಗೆನ್ನುತ್ತಾನೆ.

ಶ್ರೀಕೃಷ್ಣ: "ಅಪ್ಪಾ! ಅಮ್ಮಾ!! ನಿಮ್ಮನ್ನು ಹೀಗೆ ಸಂಬೋಧಿಸಲೂ ನನಗೆ ಈ ವರೆಗೆ ಭಾಗ್ಯ ಉಂಟಾಯಿತಲ್ಲ ಎಂದೇ ಹರ್ಷ ಪಡುತ್ತೇನೆ... ತಾಯಿ! ಯಾರೇ ಆಗಲಿ, ದುಷ್ಕರ್ಮಕ್ಕೆ ಫಲ ಅನುಭವಿಸಬೇಕಲ್ಲವೇ?... ಕೂಡುವುದು, ಅಗಲುವುದೆಂಬುದು ಈ ಸಂಸಾರದಲ್ಲಿ ಅನಿವಾರ್ಯವಾದ ಎರಡು ತುದಿಗಳು. ಒಂದರಲ್ಲಿ ಸಂತಸಪಟ್ಟು, ಇನ್ನೊಂದರಲ್ಲಿ ದುಃಖಿಸುವುದು ಅವಿವೇಕ... ನಿಜವಾದ ದುರಂತ, ಅಗಲುವುದಲ್ಲ! ಅದು ಸ್ವಾಭಾವಿಕ... ನಿಜವಾದ ದುರಂತ ಇದು... ಮೊದಲು ಹೋಗಬೇಕಾದವರು ಆಮೇಲೆ ಹೋಗುವುದು, ಆಮೇಲೆ ಹೋಗಬೇಕಾದವರು ಮೊದಲೇ ಹೋಗುವುದು! ಹಾಗಾಗಿ, ಚಿಕ್ಕವರಿಗೆ ಕೃತಕೃತ್ಯತೆ ಬಾರದೆಯೇ ಹೋಗುವುದು!... ಹಿರಿಯರಾಗಿ, ದಾರಿ ಕಾಯುತ್ತಿರುವವರಿಗೆ ಅಧಿಕ ಕೃತ್ಯವೊಂದು ಸೇರಿ ಕೊಳ್ಳುವುದು..."

ದೇವಕಿ: "... ಎಲ್ಲವನ್ನೂ ವಿವರವಾಗೇ ಹೇಳು... ಆಗುವುದು ಇನ್ನೇನೂ ಇಲ್ಲವಲ್ಲ!"

ಶ್ರೀಕೃಷ್ಣ: "ತಾಯಿ! ಆಗುವುದು ಇನ್ನೂ ಇದೆ... ನಾನು ಬರುವಂತಿರಲಿಲ್ಲ!" ಎನ್ನುತ್ತಾ ನಡೆದುದನ್ನೆಲ್ಲ ಸಂಕ್ಷೇಪದಲ್ಲಿ ಹೇಳಿ, ಬಭ್ರುವನ್ನು ಇತ್ತ ಕಳುಹಿದಾಗ, ಅವನು ವ್ಯಾಧನ ಬಾಣಕ್ಕೆ ತುತ್ತಾದದ್ದು, ಅತ್ತ ದಾರುಕ ಹಸ್ತಿನಾವತಿಗೆ ಹೋದದ್ದು ಎಲ್ಲವನ್ನೂ ಹೇಳಿದ.

ವಸುದೇವ: "ರುಕ್ಮಿಣೀ, ಸತ್ಯಭಾಮೆಯರು ಎಲ್ಲಿ?... ಉಳಿದವರು?"

ಶ್ರೀಕೃಷ್ಣ: "ಅಪ್ಪಾ! ಅಲ್ಲಿ ಗರ್ಗರು ರಕ್ಷಿಸುತ್ತಿದ್ದಾರೆ. ಇಲ್ಲಿ ಉಳಿದವರನ್ನು ಅರ್ಜುನ ಬರುವ ತನಕ ನೀವೇ ರಕ್ಷಿಸಬೇಕು."

ವಸುದೇವ: "(ಬಿಕ್ಕಿ ಅಳುತ್ತಾನೆ... ಶ್ರೀಕೃಷ್ಣನ ಸಮಾಧಾನ ಉಪಯೋಗವಾಗುವುದಿಲ್ಲ...) ಮಗು! ರಕ್ಷಕನೇ ಕೈಬಿಟ್ಟ ಮೇಲೆ, ಯಾರು ಯಾರನ್ನು ರಕ್ಷಿಸಬೇಕು? ನೀನು ಯಾರಾರಿಗೋ ಮೋಕ್ಷವನ್ನು ಕೊಟ್ಟೆಯೆಂದು ಕೇಳಿ ಬಲ್ಲೆ! ವೃದ್ಧರಾದ ಈ ದಂಪತಿಗಳಿಗೆ ಈಗ ಮೋಕ್ಷ ಕೊಟ್ಟು ಈ ದುಃಖದಿಂದ ಬಿಡುಗಡೆ ಮಾಡಲಾರೆಯಾ?"

ದೇವಕಿ ಏಳಲು ಯತ್ನಿಸಿ, ಶ್ರೀಕೃಷ್ಣನ ಪಾದಗಳನ್ನು ಹಿಡಿಯಲು ಯತ್ನಿಸುತ್ತಾಳೆ... ಕೃಷ್ಣ ತಡೆಯುತ್ತಾನೆ... ಅವಳನ್ನು ಮತ್ತೆ ಹಾಸಿಗೆಯ ಮೇಲೆ ಮಲಗಿಸುತ್ತಾನೆ. ಕಣ್ಣು ಸನ್ನೆಯಿಂದ ಚೇಟಿಯರನ್ನು ಹೊರಗೆ ಕಳುಹಿ, ಶ್ರೀಕೃಷ್ಣ ತನ್ನ ವಿಶ್ವರೂಪವನ್ನು ತಾಯಿ ತಂದೆಯರಿಗೆ ತೋರಿಸುತ್ತಾನೆ! "ನೋಡಿದಿರಾ, ಅಪ್ಪ! ಅಮ್ಮ!... ಯಾರಿಗೆ ಯಾರು ಪುತ್ರರು? ತಂದೆ ಯಾರು, ತಾಯಿ ಯಾರು? ನಾನು ಜನಿಸಿದ ಕೂಡಲೇ ನಿಮ್ಮ ಭ್ರಾಂತಿಯನ್ನು ನೀಗಲು ಇದೇ ರೂಪವನ್ನು ತೋರಿದೆ. ಒಂದು ಕ್ಷಣವೂ ನಿಮಗೆ ನೋಡಲಾಗಲಿಲ್ಲ! ಅಮ್ಮ 'ಉಪಸಂಹರ, ವಿಶ್ವಾತ್ಮನ್' ಎಂದು ನೀನೇ ಕೇಳಿದಂತೆ ಈ ರೂಪವನ್ನು ಆಗ ಉಪಸಂಹರಿಸಿದೆ. ನಿಮ್ಮ ಮಾಯೆ ನಿಮ್ಮನ್ನು ಕಟ್ಟಿತು. ತಾಯಿ! ನೀನು ಅದಿತಿ ಅಲ್ಲವೇ? ಅಪ್ಪ! ನೀನು ಕಶ್ಯಪ ಅಲ್ಲವೇ? ನಿಮ್ಮ ತಪಸ್ಸಿಗೆ ಫಲವಾಗಿ ಅಲ್ಲವೆ ನಾನು ನಿಮ್ಮ ಪುತ್ರನಾದದ್ದು? ನನ್ನ ಸಹಾಯಕ್ಕಾಗಿ ಅಲ್ಲವೆ ನೀವೂ ಈ ಸಂಸಾರ ಮಂಡಲದಲ್ಲಿರುವುದು? ಯಾರು ಎಲ್ಲಿ ಹೋಗಬೇಕೋ ಹೋಗಿ ಆಗಿದೆ. ಯಾರಿಗೆ ಯಾರು ಅಳಬೇಕು? ಇನ್ನೊಂದೆರಡು ದಿನ ಈ ಮಾಯೆ ನಿಮ್ಮನ್ನು ಬಿಡದು. ಅರ್ಜುನ ಬರುವುದರೊಳಗೆ ನಿಮಗೂ ಪಾಶ ಹರಿಯುತ್ತದೆ... ಮಾನುಷ ಭಾವದಲ್ಲಿ ನೋಡಿದಾಗ, ನಾನು ನಿರ್ಭಾಗ್ಯ!"

ದೇವಕೀ ವಸುದೇವರು ಪುಳಕಿತರಾಗಿ ಆ ದಿವ್ಯರೂಪವನ್ನು ಕಂಡು ಕ್ಷಣಕಾಲ ಮೋಹ ನೀಗುತ್ತಾರೆ! ವಿಶ್ವರೂಪ ಅದೃಶ್ಯವಾದ ಕೂಡಲೇ ಮತ್ತೆ ಮಾಯೆ ಆವರಿಸುತ್ತದೆ...

ದೇವಕಿ: "ನೀನೇಕೆ ನಿರ್ಭಾಗ್ಯ?"

ಶ್ರೀಕೃಷ್ಣ: "ಅಂದೇ ಹೇಳಿದೆನಲ್ಲ! ನನ್ನ ಭಾಗ್ಯ ಬೇರೊಬ್ಬನಿಗೆ ಮೀಸಲಾಗಿದೆ... ಅರ್ಜುನನಿಗೆ!"

ವಸುದೇವ: "ಅಂದರೆ?"

ಶ್ರೀಕೃಷ್ಣ: "ಅಂದರೆ ಈಗ ಮೃತರಾದವರಿಗೂ, ಇನ್ನು ಮೃತಿ ಐದುವವರಿಗೂ ಅವನೇ ಉತ್ತರ ಕ್ರಿಯೆಗಳನ್ನು ಮಾಡುತ್ತಾನೆ... ನಾನಲ್ಲ... ನಾನಲ್ಲ..." ಎನ್ನುತ್ತಾ, ಕಣ್ಣೀರೊರೆಸಿಕೊಳ್ಳುತ್ತಾ ಶ್ರೀಕೃಷ್ಣ ಅರಮನೆಯಿಂದ ನಿರ್ಗಮಿಸುತ್ತಾನೆ.

ವಸುದೇವ ವಿಕಟವಾಗಿ ನಗುತ್ತಾ! "ಎಂಥ ವಿಡಂಬನೆ! ನಾಳೆ ಸಾಯುವ ಅನಾಥರು, ರಕ್ಷಕರಿಲ್ಲದವರು, ಇಂದಿನ ಅನಾಥರನ್ನು ರಕ್ಷಿಸಬೇಕಂತೆ!" ಎನ್ನುತ್ತಾ ಮೂರ್ಛಿತನಾಗುತ್ತಾನೆ.

* * * * *

ಶ್ರೀಕೃಷ್ಣ ಪಿಂಡಾರಕಕ್ಕೆ ಬರುವ ವೇಳೆಗೆ ಅಲ್ಲಿ ಒಂದು ಪವಾಡ ನಡೆದಿತ್ತು! ರಾಣಿಯರು ಗರ್ಗಾಚಾರ್ಯರ ರಕ್ಷಣೆಯಲ್ಲಿರುತ್ತಾ, ದುಃಖಸಾಂತ್ವನವನ್ನೇನೋ ಪಡೆಯುತ್ತಿದ್ದರು. ಆದರೆ ಇತ್ತ ಬಲರಾಮ ಯೋಗಾಸನದಲ್ಲಿ ಕುಳಿತವನು ಮೇಲೇಳಲೇ ಇಲ್ಲ! ಅವನ ಮುಖದ ಮೇಲಿನ ಪ್ರಶಾಂತ ಮುದ್ರೆ ಅಂದು ಅತ್ಯಪೂರ್ವವಾಗಿದ್ದಿತು! "ವಾರುಣೀ ಪಾನಾಸಕ್ತನೂ, ಯಮುನೆಯನ್ನೇ ನೇಗಿಲಿನಿಂದೆಳೆದವನೂ, ನಾನಾವಿಧ ಹುಡುಗಾಟಿಕೆಗಳನ್ನು ಮಾಡಿ ಒಡನಾಡಿಗಳನ್ನು ಆಗಾಗ ರಂಜಿಸುತ್ತಿದ್ದವನೂ ಇವನೇಯೋ?" ಎಂಬ ಸಂದೇಹ, ಈ ಹಿಂದೆ ಬಲಭದ್ರನನ್ನು ಕಂಡವರಿಗೆ ಆಗಿಯೇ ತೀರುವಂತಿತ್ತು, ಆ ದೃಶ್ಯ!

ಬಲಭದ್ರನ ಬಾಯಿಂದ ಅಪೂರ್ವವಾದ ಬಿಳಿಯ ಸರ್ಪವೊಂದು ಹೊರಬರುತ್ತಿತ್ತು! ಬಹು ಗಂಭೀರವೂ, ಸಾವಿರ ಹೆಡೆಗಳನ್ನುಳ್ಳದ್ದೂ, ಪರ್ವತದಷ್ಟು ಬಲವುಳ್ಳದ್ದೂ, ಕೆಂಪಾದ ತೆರೆದ ಬಾಯನ್ನು ಉಳ್ಳದ್ದೂ, ಆದ ಆ ನಾಗವು ಬಲರಾಮ ಕುಳಿತ ಕಡೆಯಿಂದ ಸಮುದ್ರದ ಕಡೆಗೆ ನಿಧಾನವಾಗಿ ಚಲಿಸುತ್ತಿತ್ತು!

ತತ್ವವನ್ನರಿಯದವರಿಗೆ ಭಯಾನಕವೂ ಹೃದಯಾಘಾತಕವೂ ಆಗಬಹುದಿದ್ದ ಆ ದೃಶ್ಯವನ್ನು ಅಲ್ಲಿ ಕಾಣುವವರು ಆಗ ಯಾರೂ ಇರಲಿಲ್ಲ! ಬಲರಾಮ ಇಹದಲ್ಲಿರುವಾಗಲೂ ಬಹುಜನ ಆ ತತ್ವವನ್ನರಿತಿರಲಿಲ್ಲ! ಅಂದಿನ ಯಾದವರಿಗೆ ಹೇಳಿದರೂ ಅದು ಅರ್ಥವಾಗುತ್ತಿರಲಿಲ್ಲ! ಸತ್ತುಬಿದ್ದ ಯುವಕರಂತೂ ಅದನ್ನು ಅಪಹಾಸ್ಯವೇ ಮಾಡುತ್ತಾ ಸತ್ತವರು!...

ಈ ತತ್ವವನ್ನರಿತಿದ್ದ ಶ್ರೀಕೃಷ್ಣ ನಿಂತಲ್ಲಿಯೇ ನಿಂತು, ನಡೆಯುವುದನ್ನೆಲ್ಲ ನೋಡುತ್ತಿದ್ದ. ಸ್ವಯಂ ಸಮುದ್ರರಾಜನೇ ಎದ್ದು ಬಂದು ಆದಿಶೇಷನನ್ನು ಸ್ವಾಗತಿಸಿದ್ದ. ಕಾರ್ಕೋಟಕ, ವಾಸುಕಿ, ತಕ್ಷಕ, ಪೃಥುಶ್ರವಾ, ಅರುಣ, ಕುಂಜರ, ಕುಮುದ, ಪುಂಡರೀಕ... ಮುಂತಾದ ಅವನ ಪರಿವಾರದವರೆಲ್ಲ ನಿಜನಾಗ ರೂಪದಲ್ಲಿ ಸಮುದ್ರದಿಂದ ಹೊರಬಂದು ಬಲಭದ್ರನ ಆ ಸ್ವರೂಪ ಮೂರ್ತಿಯನ್ನು ವೈಭವದಿಂದ ಸ್ವಾಗತಿಸಿದರು... ಆದಿಶೇಷ ಸಮುದ್ರದಲ್ಲಿ ಅದೃಶ್ಯನಾದ!... ಇತ್ತ ಬಲಭದ್ರನ ಪಾರ್ಥಿವ ಶರೀರ ನೆಲಕ್ಕೊರಗಿತು!

ಶ್ರೀಕೃಷ್ಣ ತನ್ನ ದುಃಖವನ್ನು ಮನಸಾ ಸಹಿಸಿಕೊಳ್ಳಲು ಯತ್ನಿಸಿದ! ನಾಟಕ ಮುಗಿಯುವಾಗ, ಪಾತ್ರಧಾರಿಗಳಿಗೂ, ವಿಯೋಗದ ಸಂಕಟವುಂಟಷ್ಟೆ! ಮತ್ತೆ ಅಂಕ, ಮತ್ತೆ ದೃಶ್ಯ, ಮತ್ತೆ ನಾಟಕ... ಇದೂ ಮುಗಿಯದ ಕಥೆಯಾದರೂ, ಅಂಕ ಅಂಕದಲ್ಲೂ ವಿಯೋಗ! ದೃಶ್ಯದೃಶ್ಯದಲ್ಲೂ ವಿಯೋಗ!!

"ಅಣ್ಣ! ನೀನು ಮೊದಲು ಹೊರಡು... ಇದೋ ನಾನೂ ಬಂದೆ!... ಇಕೋ... ಬಂದೆ!..." ಎನ್ನುತ್ತಾ ಶ್ರೀಕೃಷ್ಣ ಒಂದು ಅನಿರ್ವಚನೀಯ ಅಶಾಂತಿಯಿಂದ, ಸಮುದ್ರತೀರದ ಅಡವಿಯಲ್ಲಿ, ಒಬ್ಬನೇ,

ಗರಹಿಡಿದವನಂತೆ ಸುತ್ತಾಡುತ್ತಾ, ಆಯಾಸ ಪಟ್ಟು, ಕೊನೆಗೆ, ಬಹಳ ವೇಳೆಯಾದ ಮೇಲೆ ಒಂದು ವೃಕ್ಷ ಮೂಲದಲ್ಲಿ ಕುಳ್ಳಿರುತ್ತಾನೆ... ಜೀವಿತದ ಘಟನೆಗಳೆಲ್ಲ ಸಾಂದ್ರವಾದ ನೆನಪುಗಳಾಗಿ ತನ್ನ ಮನಃಪಟಲದಲ್ಲಿ ಹಾಯುತ್ತವೆ.

* * * * *

## ೧೦. ಶ್ರೀಕೃಷ್ಣಾವಸಾನಕಾಲ-ಕೊನೆಯ ನೆನಪುಗಳು, ಗಾಂಧಾರಿ

ಸಮುದ್ರತೀರದಲ್ಲಿ ಎಲ್ಲಿ ನೋಡಿದರೂ ಹೆಣಗಳೇ! ಕೊಂದವರು, ಕೊಲ್ಲಿಸಿಕೊಂಡವರು ಎಂಬ ಭೇದವಿಲ್ಲದೆ ಸಮಾನವಾದ ಮರಣಸ್ಥಿತಿಯಲ್ಲಿ ಎಲ್ಲರೂ ಭೂಮಿಯನ್ನು ಕಚ್ಚಿದ್ದರು!

"ಸಾಯುವುದಕ್ಕೆ ಈ ಕುಡುಕರಿಗೆ ದಿವ್ಯ ಕ್ಷೇತ್ರವೇ ಬೇಕಿತ್ತೆ?" ಶ್ರೀಕೃಷ್ಣ ಯೋಚಿಸಿದ! ಅಂದು ಕೌರವ ಪಾಂಡವರ ಯುದ್ಧದಲ್ಲೂ ಕುರುಕ್ಷೇತ್ರವನ್ನು ಆರಿಸಿಕೊಳ್ಳಲಾಗಿತ್ತು! ಅದು ಹಿಂದೆ ಒಂದು ಧರ್ಮಕ್ಷೇತ್ರ; ತಪಃಕ್ಷೇತ್ರ; ದೇವತೆಗಳು ತಪಸ್ಸು ಮಾಡಿ ಬಿಲ್ಲುಬಾಣಗಳನ್ನು ಪಡೆದ ಪ್ರಸಿದ್ಧಿ ವೇದದಲ್ಲೇ ಆ ಕ್ಷೇತ್ರಕ್ಕುಂಟು! ಇಲ್ಲಿ ಪಿಂಡಾರಕವೂ ಅಷ್ಟೇ!

ಮುಂದೆ ಬರುವುದು, ಹೇಳಿ ಕೇಳಿ ಕಲಿಯುಗ ಬೇರೆ! ಒಂದೊಂದು ಧರ್ಮಕ್ಷೇತ್ರವೂ, ತೀರ್ಥ ಕ್ಷೇತ್ರವೂ, ಯಾತ್ರಾಸ್ಥಳವೂ, ಪ್ರಸಿದ್ಧ ದೇವಾಲಯಗಳ ಊರುಗಳೂ, ಭಗವಂತನ ಅವತಾರಕ್ಷೇತ್ರಗಳೂ ಹೀಗೆಯೇ ಯುದ್ಧಕ್ಷೇತ್ರವಾಗುವುದೇನೋ? ಯಾರು ತಪ್ಪಿಸಬಲ್ಲರು?

ಕಲಿಪುರುಷ ಎಲ್ಲಿ ಪ್ರವೇಶಿಸುವನೋ ಯಾರು ಹೇಳಬಲ್ಲರು? ಹೆಂಡ, ಜೂಜು, ಹಾದರ, ಇಂಥ ಚಟಗಳು ಇದ್ದವರಲ್ಲೂ, ಅವು ವ್ಯಾಪಕ ಜೀವನ ಕ್ರಮವಾದೆಡೆಗಳಲ್ಲೂ ಕಲಿಪುರುಷ ಇರಲೇಬೇಕಲ್ಲವೇ?...

ಹೆಣಗಳ ರಾಶಿಯಲ್ಲಿ ಕಾಲಿಡುತ್ತಾ ಶ್ರೀಕೃಷ್ಣ ಮುಂದೆ ಮುಂದೆ ಹೊರಟ...ಸೂರ್ಯೋದಯ ಆಗುತ್ತಿತ್ತು! ಆ ತಂಪಿನಲ್ಲಿ ಹೃದಯ ತಂಪಿಲ್ಲದ ಶ್ರೀಕೃಷ್ಣನಿಗೆ ಪುತ್ರರ ಹೆಣಗಳು ಕಣ್ಣಿಗೆ ಬಿದ್ದವು! ...ಪ್ರದ್ಯುಮ್ನ!...ಅಯ್ಯೋ!....ಮೊಮ್ಮಗ, ಅನಿರುದ್ಧ!...ಅಲ್ಲಿ, ಸಾಂಬ!...ಹೀಗೆಯೇ.. ಮುಂದೆ ಸಾತ್ಯಕಿ.... ಪ್ರಿಯರಾದ ಎಲ್ಲರನ್ನು ಆ ದುಃಸ್ಥಿತಿಯಲ್ಲಿ ನೋಡುತ್ತ ಶ್ರೀಕೃಷ್ಣನಿಗೆ ಮಹಾಭಾರತ ಯುದ್ಧದ ನೆನಪುಗಳು ಮರುಕಳಿಸಿದವು...ಆ ಹದಿನೆಂಟು ದಿನಗಳ ಘೋರ ಯುದ್ಧದಲ್ಲಿ ಒಮ್ಮೆಯಾದರೂ ತನ್ನ ಹೃದಯ ಹೀಗೆ ಅಶಾಂತಿಯಿಂದ ತಲ್ಲಣಿಸಿತ್ತೆ!....ಉಹೂಂ!... ಆಗಿನ ತನ್ನ ಸ್ಥಿತಪ್ರಜ್ಞಸ್ಥಿತಿ ಈಗೇಕಿಲ್ಲ! ಅಂದು ಯುದ್ಧ ನಡೆಸಿದವನೇ ತಾನು! ಆಗಲೂ ಮಿತ್ರಜ್ಞಾತಿ ಬಾಂಧವರೆಲ್ಲ ಸತ್ತರು! ಹಿರಿಯರು, ಲೋಕಪೂಜ್ಯರು ಸತ್ತರು! ಆಗಬೇಕಾದುದಾಯಿತು ಎಂದು ಆಗ ತಾನು ನಿರ್ಲಿಪ್ತ ನಾಗಿದ್ದದ್ದುಂಟು.... ಅದು ಆಗಿನ ವಯಸ್ಸಿನ ನಿಮಿತ್ತ ಬಂದ ಎದೆಗಾರಿಕೆಯಲ್ಲ! ತನ್ನ ವೇದಾಂತ ಈಗಲೂ ಅದೇ ಎದೆಗಾರಿಕೆಯನ್ನೇ ಕೊಟ್ಟಿದೆ. ಆದರೆ ಈಗಿನ ಅಶಾಂತಿ?...ಹೌದು, ಆಗ ಅದು ಇರಲಿಲ್ಲ!... ಅಭಿಮನ್ಯುವನ್ನು ಆ ನೀಚರು ಕಟುಕ ರಂತೆ ಕೊಂದಾಗ?.... ಆ ಒಂದೆರಡು ದಿನಗಳಲ್ಲಿ ತುಂಬಾ ಅಶಾಂತಿ ಇದ್ದದ್ದುಂಟು!.... ಅಭಿಮನ್ಯುವನ್ನು ತಾನು ತುಂಬಾ ಪ್ರೀತಿಸಿದ್ದ ಫಲವಿರಬೇಕು....ಓಹೋ, ತಿಳಿಯಿತು! ಈಗಿನ ಅಶಾಂತಿಗೂ ತನ್ನ ಕಿಂಚಿತ್ ವ್ಯಾಮೋಹ, ಪುತ್ರಪೌತ್ರಪ್ರೇಮ, ಕಾರಣವಿರಬೇಕು!.. ಮನುಷ್ಯಾವತಾರದಲ್ಲಿ ಮನುಷಭಾವ ಬಿಡುವುದು ಹೇಗೆ? ಬಿಟ್ಟರೆ ಅವತಾರ ಸಹಜವಾಗದು! ಅದು ಸಹಜವಾದರೆ, ತನ್ನನ್ನು ಬರೀ ಮನುಷ್ಯನೆಂದೇ ಜನ ಬಗೆಯುತ್ತಾರೆ! ಇದನ್ನೆಲ್ಲ ಅರ್ಜುನನಿಗೆ ಹಿಂದೆಯೇ ಹೇಳಿ ಆಗಿದೆ...

*ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ।*
*ಪರಂಭಾವಂ ಅಜಾನನ್ತಃ ಮಮ ಭೂತಮಹೇಶ್ವರಂ॥*

ಅದಕ್ಕೆ ನಾನೂ ಒಂದು ಬಗೆಯಲ್ಲಿ ಕಾರಣ!

*ನಾಹಂ ಪ್ರಕಾಶಃ ಸರ್ವಸ್ಯ*
*ಯೋಗಮಾಯಾ ಸಮಾವೃತಃ!*

ಅವತಾರಿಗೆ ಎಂಥ ಸಂಕಟ! ದೈವೀ-ಮಾನುಷೀ ಭಾವಗಳ ಸಂಗಮವೂ, ಅಭಿನಯ ಸಹಜತೆಯೂ ಏಕಕಾಲಕ್ಕೇ ಆಗಬೇಕು!....

ಶ್ರೀಕೃಷ್ಣ ಮುಂದೆ ಮುಂದೆ ನಡೆದ!.... ಈ ವೇಳೆಗೆ ದಾರುಕ ಎಷ್ಟು ದಾರಿ ಪಯಣ ಮಾಡಿರಲು ಸಾಕು? ಅರ್ಜುನ ಬರುವವರೆಗೂ ತಾನು ಇರಬೇಕೆ? ಗಾಂಧಾರಿಯ ಶಾಪ ತನ್ನನ್ನು ಆ ವರೆಗೆ ಭೂಮಿಯಲ್ಲಿರಲು ಬಿಡುವುದೇ?....

ಶ್ರೀಕೃಷ್ಣ ಹಿಂದಿರುಗಿ ನೋಡಿದ!....ಕಣ್ಣು ಹಾಯುವವರೆಗೆ ಬರೀ ಹೆಣಗಳೇ! ಒಂದಲ್ಲ ಎರಡಲ್ಲ! ಐದು ಲಕ್ಷಕ್ಕೂ ಮಿಕ್ಕ ಹೆಣಗಳು!... ಇವರಿಗೆ ಸಂಸ್ಕಾರ ಮಾಡುವವನ ಎದೆ ಎಷ್ಟು ಗಟ್ಟಿಯಾಗಿರಬೇಡ!... ಅಂದು ಧರ್ಮಪುತ್ರ ಒಂದುನೂರ ಅರುವತ್ತು ಕೋಟಿ, ಇಪ್ಪತ್ತು ಸಾವಿರ ಮೃತರಿಗೆ, ಕಾಣೆಯಾದ ಇಪ್ಪತ್ತು ನಾಲ್ಕು ಸಾವಿರದ ಒಂದುನೂರ ಅರವತ್ತೈದು ಜನರಿಗೆ ಸಂಸ್ಕಾರ, ಶ್ರಾದ್ಧ ತರ್ಪಣಾದಿಗಳನ್ನು ಮಾಡಿದನಲ್ಲ!...ಎಂಥಾ ಎದೆಗಾರಿಕೆ?!...ಭೇಷ್...

ಮಾನುಷಭಾವದ ಮಿತಿಯನ್ನು ಶ್ರೀಕೃಷ್ಣ ನೆನೆದ!.... ನೂರು ಮಕ್ಕಳನ್ನು ಹಡೆದು, ಕಷ್ಟಪಟ್ಟು ಬೆಳೆಸಿ, ಯುದ್ಧದಲ್ಲಿ ಬಲಿಕೊಟ್ಟ ಆ ತಾಯಿ ಗಾಂಧಾರಿಯ ಹೊಟ್ಟೆಯ ಸಂಕಟ ಎಂಥದು! ಅವಳ ಪುಣ್ಯಕ್ಕೆ ಕಣ್ಣು ಕಟ್ಟಿ ಕೊಂಡಿದ್ದಳು!.... ಅಷ್ಟಾಗಿಯೂ ಯುದ್ಧಭೂಮಿಯಲ್ಲಿ ಸುತ್ತುತ್ತಾ, ಅವರಿವರು ವರ್ಣಿಸಿದಂತೆ ಮಕ್ಕಳ ದುಃಸ್ಥಿತಿಯನ್ನು ನೆನೆದೇ, ತಡೆಯದೆ, ಕೊನೆಗೆ, ತನಗೂ ಆ ಘೋರಶಾಪ ನೀಡಿದಳು! ತಾನದನ್ನು ನಿವಾರಿಸಲು ಶಕ್ತನಾಗಿಯೂ ನಿವಾರಿಸದ ಕಾರಣ ಅದೇ!.... ಮಾನುಷ ಭಾವದ ಮಿತಿಯನ್ನು ಸತ್ಯವೆಂದು ಲೋಕಕ್ಕೆ ತೋರಿಸಿಕೊಡುವುದು! ಮಿತಿಯಲ್ಲಿ ಅವಿವೇಕ ಉಂಟು...ನಿಜ... ಆದರೆ ಅವಿವೇಕವೂ ಸತ್ಯ! ಅದು ಮಾಯೆಯಲ್ಲ! ಅಪೂರ್ಣ ಜ್ಞಾನದಿಂದ ಬರುವ ಅವಿವೇಕವು ಸತ್ಯವೆಂಬುದು ತಿಳಿಯದಾದರೆ ಮಾನವರಿಗೆ ಕಲಿಯುವ ಪಾಠವೇನುಂಟು? ಆಗ ಸೃಷ್ಟಿಗೇನರ್ಥ?....ಶ್ರೀಕೃಷ್ಣ ಗಾಂಧಾರಿಯನ್ನು ಗಾಢವಾಗಿ ನೆನೆದ!...ಹಳೆಯ ಚಿತ್ರವೊಂದು ಕಣ್ಣಮುಂದೆ ಹಾದುಹೋಯಿತು...

*****

ಗಾಂಧಾರಿ: "ಶ್ರೀಕೃಷ್ಣ ಪ್ರಭು!....ನನ್ನನ್ನು ನೆನೆದೆಯಾ?... ನಾನು ಸ್ವಸ್ವರೂಪ ಸೇರಿ ಹದಿನೈದು ವರ್ಷಗಳಿಗೆ ಮೇಲಾಯಿತು! ನನ್ನ ಪತಿ ಗಂಧರ್ವಸಾಯುಜ್ಯ ಸೇರಿಯಾಯ್ತು! ನಾನೂ ಈಗ ಗಂಧರ್ವ ಪತ್ನಿ!...ಸ್ವಾಮಿ! ನಿನ್ನ ಪವಿತ್ರ ನೆನಪಿನಲ್ಲಿ...ಈಗ ನಾನೇಕೆ?..."

ಶ್ರೀಕೃಷ್ಣ: "ದೇವಿ! ನೀನು ಬೇರೆ ಯಾರೆಂಬುದು ಈಗ ನಿನ್ನ ಮಟ್ಟಿಗೆ ಅನುಭವದಲ್ಲಿನ ಸತ್ಯ! ನೀನಿಲ್ಲಿದ್ದಾಗ ಯಾರಾಗಿದ್ದೆ, ಏನು ಮಾಡಿದೆ ಎಂಬುದು ಲೋಕದಲ್ಲಿ ಈಗಲೂ, ಮುಂದೆಯೂ, ಇರುವವರ, ಬರುವವರ, ಸಾರ್ವಕಾಲಿಕ ನೆನಪಿನಲ್ಲಿ ಸದಾ ಇರುವ ಸತ್ಯ!... ನಾನು ನಿನ್ನನ್ನು ನೆನೆಸಿದ್ದು ಈ ಐತಿಹಾಸಿಕ ಸತ್ಯಕ್ಕಾಗಿ! ನೀನೀಗ ನನಗೆ ಆ ಭಾವದಲ್ಲೇ ಮಾತಾಡಬೇಕು! ನಾನು ಅವತಾರ ಮುಗಿಸಿ ಹೊರಡುತ್ತಿರುವ ಈ ಸಂಧಿಯಲ್ಲಿ ಕೆಲವೊಂದು ಲೆಕ್ಕಾಚಾರಗಳನ್ನು ಮುಗಿಸಿಕೊಟ್ಟು ಹೋಗಬೇಕಿದೆ! ಇತಿಹಾಸ ನನ್ನನ್ನು ತಪ್ಪಾಗಿ ತಿಳಿಯಬಾರದೆಂದು ನನ್ನ ಆಶಯ! ಆದರೆ ಹಾಗೆ ತಪ್ಪಾಗಿಯೇ ತಿಳಿಯುವ ಮನೋಧರ್ಮದವರು ಖಂಡಿತ ಬರುತ್ತಾರೆ! ಅವರಿಗಾಗಿ ಈ ತಾಳೆ ಹಾಕಬೇಕಾಗಿದೆ!"

ಗಾಂಧಾರಿ: "ಪ್ರಭು! ನೀನಾವ ಲೆಕ್ಕಾಚಾರದ ಬಗೆಗೆ ಮಾತಾಡುತ್ತಿರುವೆಯೋ ನಾನರಿಯೆ!....ನನ್ನ ಮಕ್ಕಳು ತಮ್ಮ ಅವಿವೇಕದಿಂದ ನಡೆಸಿದ ಘೋರಯುದ್ಧದಲ್ಲಿ ತಾವು ಸತ್ತರೆ, ಇತಿಹಾಸ ನಿನ್ನನ್ನೇಕೆ ತಪ್ಪಾಗಿ ತಿಳಿಯಬೇಕು?"

ಶ್ರೀಕೃಷ್ಣ: "ನಿನ್ನ ಲೆಕ್ಕ ಬಾಕಿ ಇರುವುದು ಇಲ್ಲೇ!....ನೋಡು, ನಿನ್ನ ಮಕ್ಕಳು ತಮ್ಮ ಅವಿವೇಕದಿಂದ ತಾವೇ ಸತ್ತರೆಂಬುದು ನಿನಗೂ ನಿಜವಾಗಿ ತೋರಿದ್ದು ಸತ್ಯವಾದರೆ, ಅಂದು ನನಗೂ ನನ್ನ ಇಡೀ ಯದುವಂಶಕ್ಕೂ ಅದು ನಿರ್ನಾಮವಾಗಲೆಂದು ಶಾಪ ಹಾಕಿದೆಯೇಕೆ? ನಿನ್ನ ಸಂಕಟ ನನಗೂ ತಟ್ಟಲೆಂದು ಶಾಪ ಹಾಕಿದೆಯೇಕೆ?... ನಿನ್ನ ಲೆಕ್ಕ ಉಳಿಯಲಿಲ್ಲವೇ, ಹೇಳು?.... ಇತಿಹಾಸ ಬರೆಯಲ್ಪಡುವುದೇ ಹೀಗೆ! ರಾವಣ, ಹಿಂದೆ ತನ್ನ ಅವಿವೇಕದಿಂದ ತಾನೂ ಕೆಟ್ಟು, ಮಕ್ಕಳು, ತಮ್ಮಂದಿರು, ಪ್ರಜೆಗಳು ಎಲ್ಲರನ್ನೂ ಕೊಲ್ಲಿಸಿದ!... ವಾಲ್ಮೀಕಿ ಅದನ್ನು ಯಥಾವತ್ತಾಗಿಯೇ ಬರೆದರೂ, ರಾವಣನನ್ನು ಕೊಂಡಾಡುವ ಭಕ್ತರೂ ಇಲ್ಲವೆ? ರಾಕ್ಷಸಪಕ್ಷ ಎತ್ತಿ ಹಿಡಿಯುವ 'ಇತಿಹಾಸಕಾರ'ರಿಲ್ಲವೇ?... ನಿನ್ನ ಪುತ್ರರನ್ನೂ, ಅವರ ಆಪ್ತರೆನಿಸಿದ ಕರ್ಣ ಶಕುನಿಗಳನ್ನೂ ಇತಿಮಿತಿ ಮೀರಿ ಕೊಂಡಾಡಿ ಬರೆಯುವವರು ಬರಲಾರರೇ?"

ಗಾಂಧಾರಿ:"ನಿನ್ನ ಎರಡನೇ ಪ್ರಶ್ನೆ ನನ್ನ ಲೆಕ್ಕಕ್ಕೆ ಬರುವುದಿಲ್ಲ ಕೃಷ್ಣ! ಅದು ನನ್ನ ಮಗನ ಲೆಕ್ಕ, ಕರ್ಣನ ಲೆಕ್ಕ, ಶಕುನಿಯ ಲೆಕ್ಕ!... ನನ್ನ ಲೆಕ್ಕದ ಬಗೆಗೆ ನಾನು ಹೇಳಿಯೇನು ಮಾತ್ರ...ನಿನ್ನನ್ನು ಅಂದು ನಾನು ಶಪಿಸಿದ್ದು ತಪ್ಪು!...ಶುದ್ಧ ಅವಿವೇಕ!...ಆದರೆ ಹೆತ್ತ ಹೊಟ್ಟೆಯ ಸಂಕಟ ಅಂದು ಹಾಗಿತ್ತು!....ಅದು ಮಾನುಷಭಾವದ ಮಿತಿ!...."

ಶ್ರೀಕೃಷ್ಣ:"ನಿನ್ನ ಹೆತ್ತ ಹೊಟ್ಟೆಯ ಸಂಕಟಕ್ಕಾಗಿ ಇತರರ ಹೊಟ್ಟೆಗೆ ಸಂಕಟ ಮಾಡಿದರೆ, ಎಲೆ ಹುಚ್ಚಿ, ನಿನಗೇನು ಲಾಭ! ನೂರಾರು ಕೋಟಿ ಯೋಧರು ನಿರಪರಾಧಿಗಳಾಗಿ ಎರಡೂ ಕಡೆಯಲ್ಲಿ ಸತ್ತರಲ್ಲ! ಎಷ್ಟೊಂದು ಕೋಟಿ ಯುವತಿಯರು ವಿಧವೆಯರಾದರು! ಅವರ ಸಂಕಟ ನಿನಗೇಕೆ ತಿಳಿಯಲಿಲ್ಲ!... ಎಷ್ಟು ವೀರಮಾತೆಯರು ಪುತ್ರರನ್ನು ಕಳೆದುಕೊಂಡರು! ಅವರ ಸಂಕಟ ನಿನಗೇಕೆ ತಿಳಿಯಲಿಲ್ಲ!... ನಾಲ್ಕಾರು ಪುತ್ರರಿದ್ದವರನ್ನು ಬಿಡು!... ಒಬ್ಬನೇ ವೀರಪುತ್ರ ಅಭಿಮನ್ಯುವನ್ನು ಕಳೆದುಕೊಂಡು ನನ್ನ ತಂಗಿ ಸುಭದ್ರೆ ಎಷ್ಟು ಸಂಕಟಪಟ್ಟಳು! ಯಾರ ಸಲುವಾಗಿ ಈ ಎಲ್ಲ ಸಂಕಟ ಏರ್ಪಟ್ಟಿತೆಂದು ಆಗ ನೀನೇಕೆ ಚಿಂತಿಸಲಿಲ್ಲ?... ನಿನ್ನಂತೆ ಸುಭದ್ರೆ ಯಾರಿಗಾಗಿಯಾದರೂ ಶಾಪಹಾಕಿದಳೇ!... ತನ್ನ ಸಂಕಟವನ್ನು ಇನ್ನೊಬ್ಬರಿಗೆ ಹರಸಿ ಆಶೀರ್ವದಿಸುವುದು ದೈವೀಭಾವವೊ, ಆಸುರೀಭಾವವೋ? ಯೋಚಿಸಿದೆಯಾ?... ನಿನ್ನ ಸ್ವಾರ್ಥದಿಂದ ಲೋಕವೇ ಉರಿದು ಹೋಯಿತಲ್ಲ! ಈಗ ನಿನಗಾವ ತೃಪ್ತಿಯಾಯಿತು?..."

ಗಾಂಧಾರಿಯ ಮನದ ಮುಂದೆ ಅಂದಿನ ಯುದ್ಧಭೂಮಿಯ ದೃಶ್ಯ, ತಾನು ಶ್ರೀಕೃಷ್ಣನನ್ನು ಶಪಿಸಿದ ಸನ್ನಿವೇಶ, ತಾನು ಹಸ್ತಿನಾವತಿಗೆ ಸೊಸೆಯಾಗಿ ಬಂದದ್ದು...ಮಕ್ಕಳನ್ನು ವಿಚಿತ್ರವಾಗಿ ಹಡೆದದ್ದು...ವ್ಯಾಸರು ಆ ಪಿಂಡಗಳನ್ನು ಕಾಪಾಡಿದ್ದು, ಕುರುಡನ ಪತ್ನಿಯಾಗಿ ತಾನು ಪಾಡುಪಟ್ಟದ್ದು....ಕುಂತಿಯೊಡನೆ ತನಗೆ ಮಾತ್ಸರ್ಯ ಉಂಟಾದದ್ದು...ಸಂಧಿಯ ಓಲಗದ ದೃಶ್ಯ....ಮಗನಿಗೆ ಹಿತೋಕ್ತಿ ಹೇಳಿದ್ದು... ಅವನ ಉದ್ಧಟತನ....ಭೀಷ್ಮದ್ರೋಣಾದಿಗಳ ತಾಟಸ್ಥ...ಕರ್ಣಶಕುನಿಗಳ ದುರ್ಬೋಧೆ...ವಿದುರನ ವಿವೇಕ...ಎಲ್ಲವೂ ನೆನಪಿನ ಸುರುಳಿಯಾಗಿ ಬಂದು ಹೋಗುತ್ತವೆ...ತನ್ನ ಗತಮಾನುಷಭಾವ ಮರುಕಳಿಸಿ, ಮತ್ತೆ ತಾನು ಜೀವಂತಗಾಂಧಾರಿಯೇ ಆಗಿ ಅದನ್ನೆಲ್ಲ ನೆನೆಸುತ್ತಾಳೆ... ಈಗಿನ ಮಾನುಷೋತ್ತರಭಾವದ ದೃಷ್ಟಿಯೂ ಇರುತ್ತಾ, ತನ್ನನ್ನೇ ತಾನು ಈ ಹೊಸಕೋನದಿಂದ ವಿವೇಚಿಸಿಕೊಳ್ಳುತ್ತಾಳೆ!... ತಲೆತಗ್ಗಿಸಿ ನಾಚಿ ನಿಲ್ಲುತ್ತಾಳೆ... ಶ್ರೀಕೃಷ್ಣ ಮುಂದುವರೆಯುತ್ತಾನೆ...

ಶ್ರೀಕೃಷ್ಣ: "ಸತ್ತಮೇಲೆ ತಪ್ಪು ಅರಿವಾದರೆ ಯಾರಿಗೆ ಉಪಯೋಗ, ದೇವಿ? ಆಯುಷ್ಯ ಮುಗಿಯುವುದರೊಳಗೆ ಜ್ಞಾನೋದಯವಾದರೂ ಉಪಯೋಗವಿಲ್ಲ! ಅಕಾರ್ಯ ನಡೆದುಹೋಗುವಷ್ಟರಲ್ಲಿ, ಇಚ್ಛೆಯು ಕಾರ್ಯವಾಗಿ ಬಿಡುವಷ್ಟರಲ್ಲಿ ಅರಿವುಂಟಾದರಷ್ಟೇ ಇತಿಹಾಸಕ್ಕೆ ಉಪಯೋಗ! ಆಗ ಮಾತ್ರ ಆ 'ಇತಿಹಾಸ ಸಮ್ಮಸ್ನು ಕ್ಷಮಿಸುತ್ತದೆ!....ಹೌದೆ?...ನಿನ್ನನ್ನು ನಿನ್ನ ಜೀವಿತ ಕಾಲದಲ್ಲಿ ಯಾರೂ ಕೇಳಿರದ ಪ್ರಶ್ನೆಯೊಂದನ್ನು ಕೇಳಲೇ?"

ಗಾಂಧಾರಿ: (ನಗುತ್ತಾ) "ಈ ಪೀಠಿಕೆ ಅವತಾರಿಗೆ ಅವಶ್ಯವೇ? ಪ್ರಶ್ನೆಯನ್ನು ನೇರವಾಗಿಯೇ ಕೇಳು!....ಮುಗಿದು ಹೋದ ನನ್ನ ಮಾನುಷ ಪಾತ್ರದ ಬಗೆಗೆ ಕೇಳುವ ಈ ಪ್ರಶ್ನೆಯಿಂದ ಯಾರಿಗೆ ಲಾಭ, ಕೃಷ್ಣ?"

ಶ್ರೀಕೃಷ್ಣ: "ಯಾರಿಗೆ ಲಾಭವೆಂಬುದು ನಿನಗೇ ತಿಳಿಯುತ್ತದೆ... ಇತಿಹಾಸದಲ್ಲಿ ಗತಾಂಶವು ಭವಿಷ್ಯಕ್ಕೆ, ವರ್ತಮಾನಕ್ಕೆ ಅಂಟಿಕೊಂಡಿರುವ ತನಕ ಅದು ಪ್ರಶ್ನಗರ್ಭವಾಗಿಯೇ ಇರುತ್ತದೆ! ಗೊತ್ತೆ? ಗತ ವಿಷಯಗಳಾದರೂ ಅವುಗಳ ವಿಶ್ಲೇಷಣೆಯಿಂದ ವರ್ತಮಾನದವರಿಗೂ ಭವಿಷ್ಯದವರಿಗೂ ಖಂಡಿತ ಉಪಯೋಗವುಂಟು. ಈಗ ನಾನು ಕೇಳಲಿರುವ ಪ್ರಶ್ನೆಯೇ ಸಾಕ್ಷಿ".

ಗಾಂಧಾರಿ: "ಹಾಗಾದರೆ ನನ್ನದೂ ಅಂಥದೊಂದು ಪ್ರಶ್ನೆ ಕೇಳಲೇ? ಮೊದಲು ನಿನ್ನದೇ ಆಗಲಿ, ಆಮೇಲೆ ನಾನೂ ಕೇಳುತ್ತೇನೆ".

ಶ್ರೀಕೃಷ್ಣ: "ಆಗಲಿ. ನನ್ನ ಪ್ರಶ್ನೆ ನಿನ್ನ ಪಾತಿವ್ರತ್ಯದ ರೀತಿಗೇ ಸಂಬಂಧಪಟ್ಟುದು! ಕೋಪಿಸಬೇಡ!... ನಿನಗೆ ವಿವಾಹಕ್ಕೆ ಮೊದಲು ಎರಡೂ ಕಂಗಳು ಸರಿಯಾಗಿಯೇ ಕಾಣುತ್ತಿದ್ದವಷ್ಟೆ?... ಗಂಡನ ಮನೆಗೆ ಬಂದ ಮೇಲೆ ಕಣ್ಣಿಗೇಕೆ ಬಟ್ಟೆ ಕಟ್ಟಿಕೊಂಡೆ? ಕುರುಡನ ಕೈ ಹಿಡಿದು ಈ ಕಣ್ಣುಗಳು ಇನ್ನಾರನ್ನೂ ಲೋಭದಿಂದ ನೋಡದಿರಲೆಂದೇ? ಅವನ ಒಳ-ಹೊರ ಕುರುಡುತನ ನಿನಗೂ ಸಿದ್ಧಿಸಲೆಂದೇ? ಅವನ ಪಾಪದಲ್ಲಿ ನಿನಗೂ ಭಾಗ ಸಿಗಲೆಂದೇ? ಅಥವಾ ನಿನಗಿಷ್ಟವಿಲ್ಲದ ವಿವಾಹಕ್ಕೆ ನಿರಂತರ ಪ್ರತಿಭಟನೆಯೆಂದೇ?.. ಬೇರಾವ ಸಾಧನೆ ಅದರಿಂದ ನಿನಗಾಯಿತು? ಅದರಿಂದಾದ ಅನರ್ಥದ ಬಗೆಗೆ ಚಿಂತಿಸಿದೆಯಾ?...ಒಮ್ಮೆಯಾದರೂ ನಿನ್ನ ತಪ್ಪು ನಿನಗರಿವಾಯಿತೇ?"

ಗಾಂಧಾರಿಗೆ ದಿಗ್ಭ್ರಮೆ ಆಗುತ್ತದೆ!..."ನಾನಿನ್ನೂ ಮಾನುಷ ಭಾವದ ಗಾಂಧಾರಿ!" ಎಂಬ ಭ್ರಮೆ ಕ್ಷಣಕಾಲ ಅವಳನ್ನಾವರಿಸುತ್ತದೆ! ಸಿಟ್ಟು ಹೆಚ್ಚಾಗಿ ಏನೋ ಹೇಳಹೊರಟು, ತುಟಿಗಳು ಅದುರುತ್ತವೆ. ಸ್ತಬ್ಧಳಾಗಿ ಕೊಂಚ ಹೊತ್ತು ನಿಲ್ಲುತ್ತಾಳೆ. ಸಾವರಿಸಿಕೊಂಡು ಆಮೇಲೆ ಸಮಚಿತ್ತದಲ್ಲಿಯೇ ಉತ್ತರಿಸುತ್ತಾಳೆ.

ಗಾಂಧಾರಿ: "ಶ್ರೀಕೃಷ್ಣ! ನಾನು ಈಗ ಬೇರೆ ಲೋಕದಲ್ಲಿರದೇ ಇದ್ದರೆ, ಇನ್ನೆಂಥ ಅವಿವೇಕದ ಮಾತನ್ನಾಡುತ್ತಿದ್ದೆನೋ!... ಬೇರಾವ ಶಾಪ, ಇನ್ನಾರಿಗೆ ನನ್ನ ಬಾಯಿಂದ ಬರುತ್ತಿತ್ತೋ!...ಕೇಳು.. ನಾನು ಧೃತರಾಷ್ಟ್ರನ ಕೈ ಹಿಡಿಯುವಾಗ ಯಾರ ಮೇಲೂ ಸಿಟ್ಟಾಗಿರಲಿಲ್ಲ! ಹಾಗೆ ಅರ್ಥೈಸುವವರು ತಿಳಿಗೇಡಿಗಳು! ಅದು ಪಾಮರರಿಗೆ ರಂಜಕವಾಗಿ ಕಾಣಲೂ ಸಾಕು! ನನಗೀ ಕಲ್ಪನೆಯೂ ಬಂದಿರಲಿಲ್ಲ!! ನನ್ನ ತಂದೆಗೇನೋ ಕುರುಡ ಅಳಿಯನಾಗುವುದು ಇಷ್ಟವಿರಲಿಲ್ಲ. ಆದರೆ ಕುಲ, ಖ್ಯಾತಿ, ಪದವಿಗಳ ಬಗೆಗೆ ಕೇಳಿ, ಸಮ್ಮತಿಸಿದ. 'ಗಂಡನ ಬಗೆಗೆ ನನಗೆ ತಿರಸ್ಕಾರ ಬಾರದಿರಲಿ' 'ನಾಭ್ಯಸೂಯಾಂ ಅಹಂ ಪತಿಂ' ಎಂದು ನಾನು ಅಂದೇ ಕಣ್ಣಿಗೆ ಬಟ್ಟೆ ಕಟ್ಟಿಕೊಂಡೆ! ಈ ಮದುವೆಗೆ ವಿರೋಧ ವ್ಯಕ್ತಮಾಡಿದವನು ನನ್ನ ಸೋದರ, ಶಕುನಿ-ನಾನಲ್ಲ! ನಿನ್ನ ಉಳಿದೆರಡು ಪ್ರಶ್ನೆಗಳು ಕುಹಕ ಮಾಡುವಂತಿಲ್ಲವೆ, ಕೃಷ್ಣ!... ಗಂಡನಾರಾದರೇನು? ಪತ್ನಿಯೂ ಸಹಧರ್ಮದಲ್ಲಿರುವುದೇ ಪಾತಿವ್ರತ್ಯವಲ್ಲವೇ? ಆಗ ನನ್ನ ತಿಳಿವಳಿಕೆ ಅಷ್ಟು ಮಾತ್ರವೇ ಇತ್ತು! ಗಂಡನಿಗಿಲ್ಲದ ನೇತ್ರಭಾಗ್ಯ ನನಗೂ ಬೇಡ ಎಂದು ನಾನು ಹಾಗೆ ಮಾಡಿದ್ದರಲ್ಲಿ ಏನು ತಪ್ಪು ಕಂಡೆ? ಅವನ ಪಾಪದ ಬಗ್ಗೆ ಮಾತಾಡುತ್ತೀಯೆ! ಅದು ನಿನ್ನ ಇಷ್ಟ. ಪತ್ನಿಗೆ ಆ ಹಕ್ಕಿದೆಯೇ? 'ಒಳ-ಹೊರ ಕುರುಡು' ಎಂಬ

ಕಠೋರ ತೀರ್ಪಿಯುತ್ತಿದ್ದೀಯೇ! ಇದು ಆಗ ನನಗೇನು ಗೊತ್ತು? ಆಮೇಲೆ ಕೆಲವು ವಿಷಯಗಳಲ್ಲಿ ಅಭಿಪ್ರಾಯ ಭೇದವಾದರೂ, ನೀನಾಡುವ ಈಗಿನ ಮಾತು-ಕುರುಡತನ ನನಗೂ ಸಿದ್ಧಿಸಲೆಂಬ ನನ್ನ ಆಸೆ ಎಂಬುದು!-ಎಷ್ಟೊಂದು ಕಠೋರ!! ಸತ್ತಮೇಲೂ, ಕೃಷ್ಣ, ಹೀಗೆ ನನ್ನನ್ನು ಪರೀಕ್ಷಿಸುವುದು ನ್ಯಾಯವೇ?"

ಶ್ರೀಕೃಷ್ಣ:"ನಿನ್ನ ಆಗಿನ ತಿಳುವಳಿಕೆ ಬಹಳವಾಗಿರಲಿಲ್ಲವೆಂಬ ಒಪ್ಪಿಗೆಯಿಂದ ಈಗ ನನಗೂ ಅಷ್ಟಿಷ್ಟು ತೃಪ್ತಿ ಆಗಿದೆ ಎನ್ನು!... ನಿನ್ನ ಪತಿಯೊಡನೆ ಕೆಲವು ವಿಷಯಗಳಲ್ಲಿ ಅಭಿಪ್ರಾಯ ಭೇದವಿದ್ದ ಬಗೆಗೂ, ಅದನ್ನು ಮರೆಮಾಚದೆ ನೀನೇ ಈಗ ಒಪ್ಪಿಕೊಂಡ ಬಗೆಗೂ ನನಗೆ ನಿನ್ನಲ್ಲಿ ಗೌರವ ಹೆಚ್ಚಿದೆ! ನಿನ್ನನ್ನು ಈ ಕಾರಣದಿಂದ ವೇದವ್ಯಾಸರೂ, ಸತ್ಯವಾದಿನೀ ಎಂದೂ, ಪತಿವ್ರತೆಯೆಂದೂ, ತಪಸ್ವಿನೀ ಮಾ 'ಮಾನವ್ರತಚಾರಿಣೀ' ಎಂದೂ ಕೊಂಡಾಡುತ್ತಿರುವುದು ಯುಕ್ತವೆಂದೇ ಭಾವಿಸುತ್ತೇನೆ...."

ಗಾಂಧಾರಿ: "ನಿನ್ನಲ್ಲಿ ಮುಚ್ಚುಮರೆಯೇನು? ದೊರೆಯೊಬ್ಬನ ರಾಣಿ-ಅದೂ ಪಟ್ಟದ ರಾಣಿ-ಆಗಿಯೇನು ಎಂಬ ಹಿಗ್ಗಿನಲ್ಲಿ ಈ ವಿವಾಹದ ಇತರ ಅಂಶಗಳನ್ನು ನಾನಂದು ಉಪೇಕ್ಷಿಸಿದೆ! ನನಗೆ, ಮುಂದೆ ಮಕ್ಕಳಾಗುವುದು ತಡವಾಗಿ, ನನ್ನ ಓರಗಿತ್ತಿ ಕುಂತಿಗೇ ಪ್ರಥಮ ಪುತ್ರ ಜನಿಸಿದ ವಾರ್ತೆ ಕೇಳಿದ ಮೇಲೆ, ನನ್ನ ಸಂತಾನಕ್ಕೆ- ಅದೂ ನನ್ನ ಸ್ವಾರ್ಥತ್ಯಾಗದಿಂದಾದ ವಿವಾಹದ ಫಲಕ್ಕೆ-ರಾಜ್ಯ ಹೋಯಿತಲ್ಲ! ಎಂದು ನಾನು ಮಾತ್ಸರ್ಯ ಪಟ್ಟಿದ್ದೂ ಸತ್ಯ. ಅದರ ಆಳವನ್ನು ನೀನು ಊಹಿಸಬಲ್ಲೆಯಾ?.... ಕೃಷ್ಣ! ನೀವು ಯಾದವರಂತೂ ರಾಜ್ಯಬಾಹಿರರಾಗಿ ಶಪಿಸಲ್ಪಟ್ಟಿರಿ! ನಿನಗಂತೂ ಯಾವ ರಾಜ್ಯದ ಆಸೆಯೂ ಇಲ್ಲ! ನಿನಗೆ ಈ ಆಸೆ ಅರ್ಥವಾಗುವುದು ಹೇಗೆ?... ನಾನು ಹೊಟ್ಟೆ ಬಡಿದುಕೊಂಡು, ನನಗೆ ಗರ್ಭಪಾತ ಆದ ಇತಿಹಾಸ ನನ್ನ ಉಳಿದ ಚಾರಿತ್ರ್ಯಕ್ಕೆ ಕಳಂಕ! ಅದು ಆಮೇಲೆ ಉದಿಸಿದ ಜ್ಞಾನ! ಆ ಯುವತಿಯ ಅವಸ್ಥೆಯಲ್ಲಿ ಅದು ಬರಲಿಲ್ಲ, ನಿಜ, ಶೋಚನೀಯ! ಆದರೆ ನೀನೇ ಹೇಳು!.... ನನಗೆ ದುರ್ಯೋಧನ ಮಗನಾಗಿ ಉದಿಸಿದಾಗ ಉತ್ಪಾತಗಳಾದುವಷ್ಟೆ! ನನ್ನ ಗಂಡ, ಭೀಷ್ಮ ವಿದುರರನ್ನೂ, ಜೋಯಿಸರನ್ನೂ, ಶಕುನಶಾಸ್ತ್ರಜ್ಞರನ್ನೂ ಕರೆಸಿ ಇದರ ಫಲವೇನೆಂದು ಕೇಳಿದ್ದ. ಇವನಿಂದ ಕುಲನಾಶವೆಂದು ಅವರು ಹೇಳಿದ್ದಕ್ಕೆ. 'ಹಾಗಾದರೆ ಜ್ಯೇಷ್ಠನಾದ ಯುಧಿಷ್ಠಿರನೇ ಮುಂದಿನ ದೊರೆಯಾಗಲಿ' ಎಂದು ನನ್ನ ಪತಿ ಹೇಳಲಿಲ್ಲವೇ? 'ಇವನಾದ ಮೇಲೆ ನನ್ನ ಮಗನೂ ದೊರೆಯಾಗಲಿ' ಎಂದೂ ಹೇಳಲಿಲ್ಲವೆ? ಆಗಲೂ ಉತ್ಪಾತಗಳಾಗಿ, 'ಈ ನಿನ್ನ ಮಗನನ್ನು ಈಗಲೇ ತೊರೆಯಿರಿ! ಎಲ್ಲಾದರೂ ಕಾಡಲ್ಲಿಟ್ಟು ಬನ್ನಿ! ಪ್ರಾಣಿಗಳು ತಿನ್ನಲಿ' ಎಂದು ಬ್ರಾಹ್ಮಣರು ಹೇಳಿದ್ದು ಹೆಚ್ಚೆನಿಸಿ, ಆಗ ನಾನು ನಿರುಪಾಯಳಾದೆ!ನಿಜ! ಅಷ್ಟು ಮಾತ್ರ ಪುತ್ರ ವ್ಯಾಮೋಹ ನನಗಿತ್ತು, ಆಗ! ಆದರೆ ಮುಂದೆ, ನನ್ನ ಮಗ ದುಷ್ಟರ ಜೊತೆ ಕೂಡಿಕೊಂಡು, ದ್ರೌಪದಿಯನ್ನಪಮಾನಿಸಿದಾಗ, ಆ ಮನೆಹಾಳು ಜೂಜು ನಡೆಯುತ್ತಿದ್ದಾಗ, ಅದೇ ದುಷ್ಟ ಮಗನನ್ನು ತೊರೆಯಲು ನಾನು ಸಿದ್ಧಳಿರಲಿಲ್ಲವೆ? ನನ್ನ ಗಂಡನಿಗೇ ನಾನು ಬುದ್ಧಿಹೇಳಲಿಲ್ಲವೆ?

***ತ್ವನ್ನೇತ್ರಾಃ ಸನ್ತು ತೇ ಪುತ್ರಾಃ ಮಾ ತ್ವಾಂ ದೀರ್ಣಾಃ ಪ್ರಹಾಸಿಷುः।***
***ತಸ್ಮಾದಯಂ ಮದ್ವಚನಾತ್ ತ್ಯಜ್ಯತಾಂ ಕುಲಪಾಂಸನಃ॥***

ಎಂಬ ನನ್ನ ಮಾತು ಪ್ರಸಿದ್ಧವಾದದ್ದಲ್ಲವೆ? ಇನ್ನೂ ಮುಂದೆ, ನೀನು ಪಾಂಡವರ ಸಂದೇಶ ಹೊತ್ತು ಕೊನೆಯ ರಾಯಭಾರಕ್ಕೆಂದು ಬಂದಾಗ, ನಿನ್ನದುರಿಗೇ ನನ್ನ ಮಗನನ್ನು ಕರೆಸಿ ಬುದ್ಧಿ ಹೇಳಲಿಲ್ಲವೇ? ಪುನಃ ನನ್ನ ಪತಿಯನ್ನು ನಿಂದಿಸಲಿಲ್ಲವೇ?

***ತ್ವಂ ಹ್ಯೇವಾತ್ರ ಭೃಶಂ ಗರ್ಹ್ಯಃ ಧೃತರಾಷ್ಟ್ರ ಸುತಪ್ರಿಯः।***
***ಯೋ ಜಾನನ್ ಪಾಪತಾಂ ಅಸ್ಯ ತತ್ಪ್ರಜ್ಞಾಂ ಅನುವರ್ತಸೇ॥***

ಎಂಬ ನನ್ನ ಮಾತಿಗೆ ನೀನೇ ಅಂದೂ ಸಾಕ್ಷಿಯಿದ್ದೆ! ಇಂದ್ರಿಯನಿಗ್ರಹದ ಅವಶ್ಯಕತೆ, ಪಾಪ ಪುಣ್ಯ ಭೀತಿ, ಪುತ್ರರಲ್ಲಿ ಸಮತ್ವಭಾವ-ಇವು ದೊರೆಗೆ ಇರಬೇಕಾದ ಗುಣಗಳೆಂದೂ ಹೇಳಿದೆ!

ಇದೆಲ್ಲದರಲ್ಲಿ ನನ್ನ ಗುಣಪಕ್ಷಪಾತವನ್ನು, ನಿರ್ದೋಷಿತ್ವವನ್ನು, ಪಾಪಭೀರುತ್ವವನ್ನು, ಅನ್ಯಾಯದ ಅಸಹನೆಯನ್ನು ನೀನು ಕಾಣಬೇಡವೇ?"

ಶ್ರೀಕೃಷ್ಣ: "(ಗಹಗಹಿಸಿ ನಗುತ್ತಾನೆ!... ಮತ್ತೆ ಮತ್ತೆ ಆ ನಗೆಯ ಅಲೆ ಏಳುತ್ತೇಳುತ್ತಾ ಗಾಂಧಾರಿಗೆ ಒಂದು ಬಗೆಯ ಭಯ ಆವರಿಸುತ್ತದೆ...ತನ್ನನ್ನೇ ಪುನಃ ಶೋಧಿಸಿಕೊಳ್ಳಲು ಯತ್ನಿಸುತ್ತಾಳೆ..ಕೃಷ್ಣನ ನಗೆ ಅಡಗುತ್ತದೆ!... ಅವನೇನೆನ್ನುತ್ತಾನೆಂಬ ಬಗೆಗೆ ಗಾಂಧಾರಿ ಉತ್ಸುಕಳಾಗಿ ಕೇಳಲು ಕೈಜೋಡಿಸಿ ನಿಂತಿದ್ದಾಳೆ. ಶ್ರೀಕೃಷ್ಣ ಆರಂಭಿಸುತ್ತಾನೆ)... ದೇವಿ! ಇದೆಲ್ಲ ತಿಳಿದೇ ವೇದವ್ಯಾಸರು ನಿನ್ನನ್ನು ಸತ್ಯಶೀಲೆ ಎಂದು ಕೊಂಡಾಡಿದರು! ಆ ವ್ಯಾಸರೂ ನಾನೂ ಬೇರೆಯಲ್ಲ!...ನನಗೂ ನಿನ್ನ ಬಗೆಗೆ ಮೆಚ್ಚುಗೆ ಇರುವುದು ಈ ನಿನ್ನ ಸತ್ಯನಿಷ್ಠೆಯ ದೆಸೆಯಿಂದಲೇ!... ಬೇರಾರಾದರೂ ಈ ನಿನ್ನ ವಾದಸರಣಿಯನ್ನು ಕೇಳಿದ್ದರೆ, ಅವರೂ ವಂಚಿತರಾಗಿಯೇ ಬಿಡುತ್ತಿದ್ದರು!... ನನ್ನ ಪ್ರಶ್ನೆಗೆ ನೀನು ವಿರೋಧಾಭಾಸಯುಕ್ತವಾಗಿ ಉತ್ತರಿಸಿದೆ!... ಅದರಲ್ಲಿನ ದೋಷ ಎತ್ತಿಹೇಳಲೇ? ಕೇಳು. ನೀನು ಪೂರ್ಣಪತಿವ್ರತೆಯ ಹೆಸರು ಪಡೆಯಲು ಗಂಡನಿಗಿಲ್ಲದ ದೃಷ್ಟಿ ಭಾಗ್ಯ ನಿನಗೂ ಇರದೇ ಹೋಗಲೆಂಬ ಆಶಯದಿಂದ ಕಣ್ಣಿಗೆ ಬಟ್ಟೆ ಕಟ್ಟಿಕೊಂಡೆಯಾದರೆ, (ಅದೇ ನಿನ್ನ ವಾದ, ಗ್ರಹಿಕೆ ಅಲ್ಲವೆ?) ಮುಂದೆ ರಣರಂಗದಲ್ಲಿ ಸತ್ತವರನ್ನೆಲ್ಲ ಹೇಗೆ ನೋಡಿದೆ? ವ್ಯಾಸದತ್ತ ದೃಷ್ಟಿಯೆ? ಬಟ್ಟೆ ತೆಗೆದೇ? ಹಾಗೆ ನೋಡಿಯೇ ಅಲ್ಲವೇ ನಿನ್ನೆದೆ ಒಡೆದು ನನಗೆ ಶಾಪಹಾಕಿದೆ? ಬಟ್ಟೆಯ ಒಳಗೆ ಓರೆನೋಟದಿಂದ ನೋಡಿ, ಯುಧಿಷ್ಠಿರನ ಕಾಲು ಬೆರಳುಗಳ ಉಗುರುಗಳನ್ನು ಸುಟ್ಟೆಯಲ್ಲ! ಆಗ ನಿನಗೆ ಪಾತಿವ್ರತ್ಯ ನಾಶ ಎನಿಸಲಿಲ್ಲವೇ? ನೋಡಬೇಕೆಂಬಾಸೆ, ನೀನೇ ಕಟ್ಟುಬಿದ್ದ ವ್ರತ!-ಇವುಗಳ ಇಕ್ಕಟ್ಟಿನಲ್ಲಿ ನಿನ್ನನ್ನು ಸಿಲುಕಿಸಿದ್ದಾವುದು? ಯೋಚಿಸು. 'ನಿನಗೆ ಕಣ್ಣು ಕೊಡುತ್ತೇನೆ, ಮುಂದಾಗುವುದನ್ನು ಕಾಣು' ಎಂದು ವ್ಯಾಸರೆಂದಾಗ, ಯುದ್ಧಪೂರ್ವದಲ್ಲಿ, ನಿನ್ನ ಗಂಡ "ಬೇಡ! ಜ್ಞಾತಿಗಳು ಸಾಯುವುದನ್ನು ನೋಡಲಾರೆ!' ಎಂದನಲ್ಲ! ಅವನು ನಿನಗಿಂತ ಪಾಪಿಯಾಗಲಿಲ್ಲವೆ? ಅವನಿಗೆ ಬೇಡದ ಆ ಘೋರ ದರ್ಶನವನ್ನು ಆಮೇಲೆ ನೀನು ಮಾಡಿದೆಯೇಕೆ? ಅದು ಪಾತಿವ್ರತ್ಯ ಭಂಗ ಎನಿಸಲಿಲ್ಲವೇ? ಹೋಗಲಿ! ನಿನ್ನ ಗಂಡನನ್ನೇ-ಅವನು ತಪ್ಪಿದಾಗ-ಎಚ್ಚರಿಸಿದೆಯಲ್ಲ! ನನ್ನ ದೃಷ್ಟಿಯಿಂದ ಅದು ಸರಿಯೇ! ಭೇಷ್ ಎನ್ನುತ್ತೇನೆ! ಅವನ ಪಾಪದಲ್ಲಿ ನಿನಗೆ ಸಮ್ಮತಿ, ಭಾಗ, ಪ್ರೇರಣೆ ಇಲ್ಲವೆಂದು ಇದರಿಂದ ನಿರ್ಧಾರಿತವಾದರೆ, ಅವನ ಬಾಹ್ಯಕುರುಡತನಕ್ಕೆ ನೀನೇಕೆ ಭಾಗಿಯಾಗಿರಬೇಕಿತ್ತು? ಎಚ್ಚರಿಸಿದ್ದರಿಂದ ಹೋಗದ ಪಾತಿವ್ರತ್ಯ, ಈ ತುಂಡು ಬಟ್ಟೆಯಿಂದ ನಿನಗೆ ಪ್ರಾಪ್ತವಾಗಿಹೋಯಿತೇ? ಯಾರಿಗೆ ಇದರಿಂದ ವಂಚನೆಯಾದೀತು? (ಕೋಪಾವಿಷ್ಟನಾಗಿ ಶ್ರೀಕೃಷ್ಣ ಆಕ್ರೋಶಿಸುತ್ತಾನೆ!...) ಅಂದು ಧರ್ಮಜ, ಉಳಿದೆಲ್ಲ ಪಣಗಳನ್ನೂ ಸೋತು, ಶಕುನಿಯ ಪ್ರೇರಣೆಯಿಂದ ದ್ರೌಪದಿಯನ್ನು ಇನ್ನೂ ಒಡ್ಡುವ ಮೊದಲೇ, ದಾಳಗಳು ಉರುಳುವ ಮೊದಲೇ, ಗರ ಬೀಳುವ ಮೊದಲೆ, ನಿನ್ನ ಗಂಡ 'ದ್ರೌಪದಿಯನ್ನು ನನ್ನ ಮಗ ಗೆದ್ದಾಯಿತೇ?' ಎಂದು ಕೇಳಿದನಲ್ಲ!! ನೀನಿದನ್ನು ಕಣ್ಣಿಂದ ಕಂಡಿದ್ದರೆ, ಏನಾಗುತ್ತಿತ್ತೋ!! ಹಾಗೆ ಕಾಣುವುದು ನಿನ್ನ ಧರ್ಮವಾಗಿರಲಿಲ್ಲವೇ? ಕಣ್ಣಿಲ್ಲದವನಿಗೆ ಕಣ್ಣಾಗಿದ್ದು, ಅವನು ಕಾಣದ, ಕಾಣಲಿಚ್ಛಿಸದ, ಲೋಕ ವೃತ್ತಾಂತಗಳನ್ನು ಸರಿಯಾದ ಸಮಯದಲ್ಲಿ ಅವನಿಗೆ ಕಾಣ ತಿಳಿಸಿ, ಕಣ್ಣಿಲ್ಲದವನಿಗೆ ಕಣ್ಣಾಗಿರಬೇಕಿದ್ದ ನೀನು, ಹಾಗೆ ಮಾಡದೆ, ಅವನು ಕಾಣದುದು ನಿನಗೂ ಬೇಡವೆಂದು ಪ್ರತಿಜ್ಞೆ ಮಾಡಿ, ಬಟ್ಟೆ ಕಟ್ಟಿಕೊಂಡು ಸಾಧಿಸಿದ್ದೇನು?"

ಧೃತರಾಷ್ಟ್ರನ ಬಗ್ಗೆ ಈ ಹೊಸ ಸಂಗತಿ ತಿಳಿದು ಗಾಂಧಾರಿ ವಿಚಲಿತಳಾಗುತ್ತಾಳೆ!.."ಕೃಷ್ಣ, ಇದು ನಿಜವೇ? ನನ್ನ ಗಂಡ ಹಾಗೆ ಕೇಳಿದನೇ?" ಎಂದು ಪ್ರಶ್ನಿಸುತ್ತಾಳೆ!.... ಗಾಂಧಾರಿಯ ಎದುರು ವಿದುರ, ಶಕುನಿ, ಭೀಷ್ಮಾದಿಗಳು ಪ್ರತ್ಯಕ್ಷರಾಗುತ್ತಾರೆ! ಆ ದಿನ ಜೂಜಿನಕಟ್ಟೆಯಲ್ಲಿನ ಆ ದೃಶ್ಯ ಹಾಗೆಯೇ ಈಗ ಗಾಂಧಾರಿಯ ಎದುರು ಪ್ರತ್ಯಕ್ಷವಾಗುತ್ತದೆ! ವಿದುರಾದಿಗಳು "ಹೌದು" ಎಂದು ಒಪ್ಪಿ, ಕೃಷ್ಣನ ಮಾತನ್ನು ಪುಷ್ಟೀಕರಿಸುತ್ತಾರೆ!

ಗಾಂಧಾರಿ ಆ ದೃಶ್ಯವನ್ನು ನೋಡಲಾರದೆ, ಚೀರುತ್ತಾಳೆ... "ನಿಲ್ಲಿಸಿ, ನಿಲ್ಲಿಸಿ, ಈ ಘೋರ ಮನೆ ಹಾಳು ಆಟವನ್ನು!! ಇಲ್ಲವಾದರೆ ನಾನು ಬೆಂಕಿಯಲ್ಲಿ ಬಿದ್ದು ಸಾಯುತ್ತೇನೆ, ದುರ್ಯೋಧನ! ನಿನಗೆ ತಾಯಿಬೇಕಿದ್ದರೆ, ಈ ತಂಗಿಯನ್ನು ಗೌರವಿಸು! ಅವಳ ಮಾನಕ್ಕೆ ಕೈ ಹಾಕಬೇಡ" ಎಂದು ಚೀರುತ್ತಾಳೆ.

ಶ್ರೀಕೃಷ್ಣ: "ನೋಡಿದೆಯ ದೇವಿ, ಆ ಭಯಂಕರ ದೃಶ್ಯ ಹೇಗಿದೆ? ಇದನ್ನು ನೀನು ಆಗ ಕಣ್ಣುಬಿಟ್ಟು ನೋಡಬೇಕಿತ್ತು! ಈಗ ಹೇಳಿದ ಮಾತುಗಳನ್ನು ಆಗ ಹೇಳಬೇಕಿತ್ತು. ಆಗ ನಿನ್ನ ಮಗ ಆ ಮಾತು ಕೇಳಿದ್ದರೆ ಸರಿ, ಇಲ್ಲವಾದರೆ ಇತಿಹಾಸ ನಿನ್ನನ್ನು ದೂರುತ್ತಿರಲಿಲ್ಲ! ನಾನೂ ನಿನ್ನನ್ನು ಆಕ್ಷೇಪಿಸುತ್ತಿರಲಿಲ್ಲ!...ಯಾವ ಧರ್ಮವಾದರೂ ಸರಿ, ಅವ್ಯಭಿಚರಿತವಾಗಿ ಆಚರಿಸಲ್ಪಡಬೇಕು! ನೀನು ಕಣ್ಣು ತೆರೆದಿದ್ದರೆ ಯಾವ ಪಾತಿವ್ರತ್ಯ ಹಾನಿಯೂ ಅದರಿಂದ ಆಗುತ್ತಿರಲಿಲ್ಲ ಮಾತ್ರವಲ್ಲ, ಲೋಕೋಪಕಾರವೂ ಆಗಬಹುದಿತ್ತು! ಹೊರ ಇಂದ್ರಿಯಗಳನ್ನು ಮುಚ್ಚಿ, ಹತ್ತಿಕ್ಕಿ, ಒಳಇಂದ್ರಿಯಗಳಿಂದ ಮಾಡುವ ಪಾಪ ಅಕ್ಷಮ್ಯವಾಗುತ್ತದೆ! ಅದರಿಂದ ಬ್ರಹ್ಮಚರ್ಯ ಸಿದ್ಧಿಯಾಗುವುದಿಲ್ಲ, ಪಾತಿವ್ರತ್ಯವೂ ಇಲ್ಲ!... ಮೋಕ್ಷದಲ್ಲಿ ಅವರವರ ದಾರಿ ಅವರವರಿಗೇ!-ಗಂಡನಾದರೂ, ಹೆಂಡತಿಯಾದರೂ ಧರ್ಮ, ಅರ್ಥ, ಕಾಮಗಳಲ್ಲಿ ಮಾತ್ರ ಸಹಧರ್ಮಚರಣವೇ ಹೊರತು, ಪಾಪಪುಣ್ಯಗಳಲ್ಲಿ ಪರಸ್ಪರ ಭಾಗಿತ್ವ ಉಂಟೇ? ಗಂಡನ ಪಾಪವನ್ನು ಪ್ರಶ್ನಿಸುವ ಹಕ್ಕು ಹೆಂಡತಿಗಿಲ್ಲವಾದರೆ ದಾಂಪತ್ಯಕ್ಕೆ ಪಾರಮಾರ್ಥಿಕವಾದ ಪುರುಷಾರ್ಥವೇನು? ಪ್ರಯೋಜನವಾದರೇನು? ಇಬ್ಬರೂ ಕೂಡಿ ಆಗ ಪಾಪವನ್ನೇ ಸಾಧಿಸುತ್ತಾರಷ್ಟೆ? ನೀನೇ ಹೇಳಿದಂತೆ ಅಭಿಪ್ರಾಯ ಭೇದವಿದ್ದಲ್ಲಿ, ಸಾಧು ಅಸಾಧು ವಿಷಯಗಳ ಚರ್ಚೆಯೂ ಆಗಬೇಕಿತ್ತು! ದಾಂಪತ್ಯ ವಿರಸಕ್ಕೆ ಅದು ಕಾರಣವಾಗದು! ಹೇಳುವ ರೀತಿ ಯುಕ್ತವಿರಬೇಕು!...ನೀನು ಕರ್ತವ್ಯ ಲೋಪ ಮಾಡಿದೆ!..."

ಗಾಂಧಾರಿ: (ಕೆಲಹೊತ್ತು ಮೌನದಿಂದಿದ್ದು, ಹೇಳುವುದಕ್ಕೇನೂ ಉಳಿಯದೆ, ತನ್ನ ತಪ್ಪಿಗೆ ನಾಚಿ, ನಿಂತು, ಶ್ರೀಕೃಷ್ಣ ಮತ್ತೇನೆನ್ನುವನೋ! ಎಂದು ಕುತೂಹಲದಿಂದ ಕಾಯುತ್ತಾಳೆ).

ಶ್ರೀಕೃಷ್ಣ: "ಇದೆಲ್ಲ ಮರಣೋತ್ತರ ಪರೀಕ್ಷೆ ಎಂದು ಭಾವಿಸಬೇಡ! ಈ ಚರ್ಚೆಯಿಂದ ಮುಂದೆ ಮತ್ತಾರಿಗಾದರೂ ಉಪಯೋಗವಾದರೂ ಸಾಕು... ಅದಿರಲಿ! ನೀನು ನನ್ನನ್ನೇನೋ ಒಂದು ಅಪೂರ್ವ ಪ್ರಶ್ನೆ ಕೇಳುತ್ತೇನೆ ಎಂದೆಯಲ್ಲ, ಕೇಳು".

ಗಾಂಧಾರಿ: "ಕೃಷ್ಣ, ನೀನು ಸರ್ವಜ್ಞ! ಮಾತಿನ ಮೋಡಿಯಲ್ಲಿ ಏನಾದರೂ ಹೇಳಿ ಬಾಯನ್ನು ಹೇಗೋ ಮುಚ್ಚಿಬಿಡುತ್ತೀಯೇ! ಕೇಳಿ ಏನು ಪ್ರಯೋಜನ!"

ಶ್ರೀಕೃಷ್ಣ: "ಅಳುಕುಮನದವರ ಹೇಡಿ ಭಾವ ಇದು! ಪ್ರಶ್ನೆ ಬಲವಾಗಿದ್ದರೆ ಕೇಳು! ದುರ್ಬಲವೆಂದು ನಿನಗೇ ಎನ್ನಿಸಿದರೆ, ನಿನಗೇ ಉತ್ತರ ಹೊಳೆಯುವವರೆಗೆ ಕಾದು, ಉತ್ತರಿಸಿಕೋ"

ಗಾಂಧಾರಿ: "ಈಗ ಅದು ಎರಡು ಪ್ರಶ್ನೆಯಾಗಿದೆ (೧) ನೀವು ಯದುಗಳು ರಾಜ್ಯ ಬಾಹಿರರಾಗಲಿ ಎಂಬುದು ನಿಮ್ಮ ಪೂರ್ವಜ ಯಯಾತಿಯ ಶಾಪ! ಅದರಲ್ಲಿ ನೀನಂತೂ ನಿರ್ಲಿಪ್ತ. ಅತ್ತ ಯಾದವ ರಾಜ್ಯವನ್ನೂ ಬಯಸಲಿಲ್ಲ! ಇತ್ತ ಹಸ್ತಿನಾವತಿಯನ್ನೂ ಬಯಸಲಿಲ್ಲ! ರಾಜನಾಗುವ ಎಲ್ಲ ಗುಣಗಳೂ, ವಿದ್ಯೆಗಳೂ, ಯೋಗ್ಯತೆಯೂ, ಅಧಿಕಾರವೂ, ಸಾಮರ್ಥ್ಯವೂ ಇದ್ದೂ ನೀನು ಯಯಾತಿಯ ಶಾಪವನ್ನು ಏಕೆ ಹುಸಿಯಾಗಿಸಲಿಲ್ಲ! ನೀನೇ ದೊರೆಯಾಗಿದ್ದರೆ ಈ ಎಲ್ಲ ಅನರ್ಥವೂ ತಪ್ಪುತ್ತಿತ್ತು, ಅಲ್ಲವೇ?"

ಶ್ರೀಕೃಷ್ಣ: "ಇಷ್ಟೇಯೋ! ನನಗೆ ರಾಜನಾಗುವ ಎಲ್ಲ ಅರ್ಹತೆಯೂ ಇತ್ತೆಂಬ ನಿನ್ನ ಮಾತು ಔದಾರ್ಯ ಪೂರ್ಣವಾದುದು! ನಾನೆಂದೂ ನಿನಗೆ ಈ ಮಾತಿಗೆ ಕೃತಜ್ಞ! ಆದರೆ ಅತ್ತ ಒಮ್ಮೆಯೂ ನನಗೆ ಗಮನ ಹರಿಯಲಿಲ್ಲ! ನಾನೇ ದೊರೆಯಾದರೆ ನಾನಿರುವ ತನಕ ರಾಜ್ಯವನ್ನು ಸರಿನಡೆಸಬಹುದಿತ್ತು, ಎನ್ನು! ಆದರೆ ನನಗೆ, ನಾನಾದ ಮೇಲೂ ರಾಜ್ಯ ಚೆನ್ನಾಗಿ ನಡೆಯುವ ಒಂದು

ಶಾಶ್ವತ ವ್ಯವಸ್ಥೆ ಅವಶ್ಯವೆನಿಸಿ, ಅದು ಅಸ್ತಿತ್ವಕ್ಕೆ ಬರಲು ಶ್ರಮಿಸಿದೆ! ಆ ಶ್ರಮ ವ್ಯರ್ಥವಾಯಿತೋ, ಸಾರ್ಥಕವಾಯಿತೋ, ಮುಂದಿನವರು ಹೇಳಬೇಕು. ನನ್ನ ಶ್ರದ್ಧೆ ಅದರ ಅಸ್ತಿತ್ವದ ಸಾಧುತ್ವ ಬಗೆಗೆ, ಅವಶ್ಯಕತೆಯ ಬಗೆಗೆ ಅಷ್ಟೇ ಇತ್ತು. ಆದ್ದರಿಂದಲೇ ಕಂಸನನ್ನು ಕೊಂದ ಮೇಲೆ ಮಧುರೆಗೆ ನಾನೇ ದೊರೆಯಾಗಲಿಲ್ಲ! ಇತ್ತ ಹಸ್ತಿನಾವತಿಯಲ್ಲೂ ಸಿಂಹಾಸನಯೋಗ್ಯರನ್ನು, ರಕ್ತಸಂಬಂಧದಿಂದಲೂ ಯೋಗ್ಯತೆಯಿಂದಲೂ ಹುಡುಕಲಾರಂಭಿಸಿದೆ! ಜರಾಸಂಧ, ಶಿಶುಪಾಲಾದಿಗಳನ್ನೂ, ನರಕ, ಮುರ, ಬಾಣ, ಕಾಲಯವನ, ಪೌಂಡ್ರಕ, ದಂತವಕ್ರ ಶಾಲ್ವ ಮೊದಲಾದವರನ್ನು ಸಂಹರಿಸಿದಾಗಲೂ ಅವರ ರಾಜ್ಯವಾವುದರ ಮೇಲೂ ನನಗೆ ಆಸೆ ಆಗಲಿಲ್ಲ. ನಾನು ಹುಡುಕುತ್ತಿದ್ದುದು, ಅವ್ಯವಸ್ಥೆಯ ನಡುವಿನ ಒಂದು ವ್ಯವಸ್ಥೆಯನ್ನು. ಅದಕ್ಕೆ ನಿನ್ನ ಮಗ ಅಡ್ಡಬಂದ! ಭೀಷ್ಮದ್ರೋಣಾದಿಗಳೂ, ಕರ್ಣಶಕುನಿಗಳೂ, ಶಲ್ಯ ಭೂರಿಶ್ರವಸರೂ ಸಹ! ಅವರೆಲ್ಲ ಆ ತಾವಾಶ್ರಯಿಸಿದ್ದ ಅವ್ಯವಸ್ಥೆಯಿಂದಲೇ ಹತರಾದರು! ದ್ರೋಣನನ್ನು ಅವನ ಸ್ವಾರ್ಥವೇ ಕೊಂದಿತು! ಅವ್ಯವಸ್ಥೆಯ ಪ್ರೇಮಿಗಳಾರನ್ನೂ ನಾನು ಉಳಿಸಲಿಲ್ಲ! ನನ್ನವರೆನಿಸಿದ ಯಾದವರನ್ನೂ ಸಹ! ವಿವೇಕಿಯಾದವನು ಯಾವಾಗಲೂ ಭವಿಷ್ಯವನ್ನು ಚಿಂತಿಸಬೇಕು! ನಾನಾದ ಮೇಲೆ ಲೋಕ ಇದ್ದರೇನು, ಸತ್ತರೇನು ಎಂಬ ಧೋರಣೆಯಿಂದ ರಾಜ್ಯ ಕಾರ್ಯ ನಡೆಸುವವನು ವಿವೇಕಿ ಅಲ್ಲ! ಅಧಿಕಾರವೇ ಸರ್ವಸ್ವವೂ ಅಲ್ಲ! ನನ್ನ ಉದ್ದೇಶ್ಯದಲ್ಲಿ ನಾನು ಸಫಲನಾದೆನೇ? ಎಂಬುದು ಬೇರೆ ಪ್ರಶ್ನೆ. ನನ್ನ ರೀತಿ ಸರಿಯೇ? ಎಂಬುದಷ್ಟೇ ನಿನ್ನ ಪ್ರಶ್ನೆ ಆಗಿರಬೇಕು!... ಇರಲಿ, ನಿನ್ನ ಎರಡನೇ ಪ್ರಶ್ನೆಯೇನು?"

ಗಾಂಧಾರಿ: "...ಯುದ್ಧವನ್ನೇ ತಡೆಯಬಲ್ಲ ಸಾಮರ್ಥ್ಯ ನಿನಗೊಬ್ಬನಿಗೇ ಇದ್ದಿತು, ಕೃಷ್ಣ! ಅದು ನನ್ನ ದೃಢ ನಂಬಿಕೆ! ಹಾಗಿದ್ದೂ ನೀನೇಕೆ ಅದನ್ನು ತಡೆಯಲಿಲ್ಲ?"

ಶ್ರೀಕೃಷ್ಣ: "ಇದೆಂಥ ಅವಿವೇಕದ ಪ್ರಶ್ನೆ, ತಾಯಿ? ಅಂದು ಶಾಪಹಾಕುವಾಗಲೂ ನೀನಿದನ್ನೇ ಹೇಳಿದ್ದೆ! ಹಿಂದೆ ಭೃಗುವಂಶದ ಉತ್ತಂಕನೆಂಬ ಮಹರ್ಷಿಯೂ ನಿನ್ನಂತೆಯೇ ಭಾವಿಸಿ ನನಗೆ ಶಾಪಹಾಕಲು ಬಂದ!

***ಯಸ್ಮಾತ್ ಶಕ್ತೇನ ತೇಕೃಷ್ಣ! ನತ್ರಾತಾಃ ಕುರುಪುಂಗವಾಃ।***
***ಸಂಬಂಧಿನಃ ಪ್ರಿಯಾಃ ತಸ್ಮಾತ್ ಶಪ್ಸ್ಯೇಹಂ ತ್ವಾಂ ಅಸಂಶಯಂ॥***

ಎಂದ! ನಾನವನಿಗೆ ಎಂದೆ:"ನಿನ್ನ ಶಾಪ ನನ್ನನ್ನೇನೂ ಮಾಡದು! ವಿಷಯ ತಿಳಿಯದೆ ತಪಸ್ಸನ್ನು ಅಪವ್ಯಯ ಮಾಡಿಕೊಳ್ಳಬೇಡ" ಎಂದು ಹೇಳಿ, ನನ್ನ ವಿಶ್ವರೂಪ ತೋರಿದೆ. ಸೃಷ್ಟವಾದ ಎಲ್ಲ ಭೂತಗಳೂ, ದೇವಾಸುರರೂ, ವಿಧಿಗಳೂ, ವರ್ಣ, ಆಚಾರ, ನಿಯಮಗಳೂ, ತ್ರಿಗುಣಗಳೂ ಎಲ್ಲ ನನ್ನ ವಶದಲ್ಲಿವೆಯೆಂದರೆ, ನಾನೇ ಪುಣ್ಯಪಾಪಗಳನ್ನು ಮಾಡುತ್ತೇನೆಂದು ಅರ್ಥವಲ್ಲವೆಂದೂ, ಜೀವಿಗಳು ಅವರವರ ಕರ್ಮಸ್ವಾತಂತ್ರ್ಯಾನುಸಾರ ಮಾಡುವ ಕರ್ಮಗಳಿಗೆ ಫಲವನ್ನು ಕೊಟ್ಟು, ನಾನೂ ಧರ್ಮಾನುವರ್ತಿಯಾಗೇ ಇರುವೆನೆಂದೂ, ನಾನೇ ಆ ಧರ್ಮ ಸತ್ಯ-ಋತಸ್ವರೂಪನೆಂದೂ ಬೋಧಿಸಿದೆ. ಅಧರ್ಮಯುಕ್ತರನ್ನು ನಿಗ್ರಹಿಸಬೇಕಾದ ಕಾಲದಲ್ಲಿ ನಾನು ನಿಗ್ರಹಿಸಿಯೇ, ಕೌರವಾದಿಗಳು ಅವರ ಕರ್ಮದ್ವಾರಾ ಹತರಾದರೇ ಹೊರತು ನಾನು ನಿಷ್ಕಾರಣವಾಗಿ ಏನೂ ಮಾಡಲಿಲ್ಲವೆಂದ ಮೇಲೆ ಅವನು ತೃಪ್ತನಾದ. ನಿನಗೆ ಇದರಲ್ಲಿ ಉತ್ತರ ವಿಲ್ಲವೇ?"

ಗಾಂಧಾರಿ: "ಕೃಷ್ಣ! ನಾನು ಉತ್ತಂಕನಂತೆ ಜ್ಞಾನಿಯಲ್ಲ! ನಾನು ವಿಶ್ವರೂಪ ನೋಡಲು ಅರ್ಹಳೂ ಅಲ್ಲ! ನಿನ್ನ ಅವತಾರ ಕಾಲದಲ್ಲೇ ನಿನ್ನನ್ನು ಕಾಣದೆ, ಬದುಕಿಯೂ ಕಣ್ಣಿಗೆ ಬಟ್ಟೆಕಟ್ಟಿಕೊಂಡು, ಆ ಭಾಗ್ಯವನ್ನು ಕಳೆದುಕೊಂಡವಳು!... ಇದೊಂದೇ ನನ್ನನ್ನು ಕಾಡುತ್ತಿದೆ!... ನನ್ನ ಮಕ್ಕಳಿಗೆ ನೀನೇಕೆ ಸದ್ಬುದ್ಧಿಯನ್ನು ಕೊಡಲಿಲ್ಲ? ಸತ್ ಕರ್ಮಪ್ರೇರಕ ನೀನೇ ತಾನೇ? ಗಾಯತ್ರೀ ಮಂತ್ರವು ಹಾಗೆಂದೇ ನಿನ್ನನ್ನು ವರ್ಣಿಸುವುದಲ್ಲವೇ?"

ಶ್ರೀಕೃಷ್ಣ: "ದೇವಿ! ನಿನಗೆ ಗಾಯತ್ರೀ ಅರ್ಥ ಹೇಳಬೇಕೋ? ನನ್ನ ಲೀಲೆಯ ಅರ್ಥಹೇಳಬೇಕೋ? ನನ್ನ ಸಂಕಲ್ಪದ ವಿವರಣೆ ಕೊಡಬೇಕೋ? ನಿನ್ನನ್ನು ಪ್ರಶ್ನೆಯೇ ಕೇಳದಂತೆ ಮಾಡಬೇಕೋ? ...ನಾನು ಹೇಳುವುದು ನಿನಗೆ ತಿಳಿಯಲಾರದು! ಆದರೂ ಹೇಳುತ್ತೇನೆ... ಯಾರಿಗಾದರೂ ಉಪಯೋಗ ಬಂದೀತು..ಕೇಳು... ನಾನೇ ಜಗದೀಶ್ವರ! ಹಾಗೆಂದರೂ ನಿನಗೆ ತಿಳಿಯಲಾರದು! ಏಕೆಂದರೆ ಜಗದೀಶ್ವರನ ಜಗತ್ತಿನಲ್ಲಿ ಈಶ್ವರನಲ್ಲದ ಇತರ ಜಡವಸ್ತುಗಳೂ, ಜಡಪ್ರಾಯರಾದ ನಿನ್ನಂಥ, ಉತ್ತಂಕನಂಥ, ಜೀವರೂ ಇರುತ್ತಾರೆ! ಇಲ್ಲವಾದರೆ ಜಗತ್ತಿಗೆ ಅರ್ಥವೇ ಇಲ್ಲ! ಜಗತ್ತೂ, ಈಶ್ವರನೂ, ಈ ಯಾವುದೂ ಇಲ್ಲವೆಂಬ ಶೂನ್ಯವಾದಿಗಳು ಕಲಿಯುಗದಲ್ಲಿ ಬರುತ್ತಾರೆಯಷ್ಟೇ! ಇವರಿಗೂ ಇತರರಿಗೂ ನಾನು ಅವರವರ ಅನಾದಿ ಕರ್ಮವಾಸನೆಯಿಂದ ಪ್ರೇರಿತ ಕರ್ಮಗಳಿಗೆ ಫಲ ಕೊಡುತ್ತೇನೆ! ಕೈಹಿಡಿದು ಯಾರಿಗೂ ಒಳ್ಳೆಯ ಕೆಟ್ಟ ಕೆಲಸಗಳನ್ನು ಮಾಡಿಸುವುದು ನನ್ನ ರೀತಿಯಲ್ಲ! ಹಾಗೆ ಮಾಡಿದ್ದರೆ ಒಬ್ಬರಿಗೊಂದು ಇನ್ನೊಬ್ಬರಿಗೊಂದು ಮಾಡಿಸಿದ ಪಕ್ಷಪಾತ ನನ್ನನ್ನು ತಟ್ಟುತ್ತಿತ್ತು. ಕರುಣಾಶೂನ್ಯನೆಂದೂ ನನ್ನನ್ನು ಆಗ ಜನ ಹೇಳುತ್ತಿದ್ದರು!'ಒಳ್ಳೆಯದನ್ನೇ ಮಾಡಿರಿ' ಎಂದು ಸದಾ ನಾನು ಅಂತರ್ಯಾಮಿಯಾಗಿರುತ್ತಲೇ ಎಲ್ಲರ ಹೃದಯದಲ್ಲೂ ಪ್ರೇರಿಸುತ್ತಿರುತ್ತೇನೆ. ಅದೇ ಗಾಯತ್ರಿ ಹೇಳುವ ಅರ್ಥ! ಅದರಂತೆ ನಡೆಯುವುದೂ ಬಿಡುವುದೂ ಜೀವರ ಹೊಣೆ! ಅದು ನನ್ನ ಭಾರವಲ್ಲ! ಎಲ್ಲರನ್ನು ಹೊಣೆಗೇಡಿಗಳನ್ನಾಗಿಸಿ, ನಾನೇ ನಡೆಸುವ ಲೋಕವ್ಯಾಪಾರವೆಂಬುದುಂಟೇ? ಅದಕ್ಕೆ ಅರ್ಥವುಂಟೇ? ಕರ್ಮ ಯಾರಿಗೆ? ಫಲ ಯಾರಿಗೆ? ನಿನ್ನ ಮಕ್ಕಳಿಗೆ ನನ್ನಂತೆ ಸದ್ಬುದ್ಧಿ ಹೇಳಿದವರುಂಟೇ?... ನನ್ನಾಣೆಗೆ ಹೇಳು!... ಅದರಂತೆ ನಡೆಯದೇ ಸತ್ತರೆ ಯಾರು ಹೊಣೆ! ಅಥವಾ ಅವರವರ ಹೊಣೆಗೂ ನಾನೇ ಹೊಣೆ ಎನ್ನುವೆಯೋ?"

ಗಾಂಧಾರಿ: "ಪ್ರಭು! ಜೀವಿಗಳಿಗೆ ಉಪದ್ರವಕಾರಕವಾದ ಸ್ವಾತಂತ್ರವನ್ನೂ, ಅದರ ಮೂಲಕ ಹೊಣೆಯನ್ನೂ ಇತ್ತು ಏಕೆ ಅವರನ್ನು ಕೊಲ್ಲುವೆ? ಹೊಣೆಗೆ ಅಯೋಗ್ಯರಿಗೇಕೆ ಆ ಭಾರ ಇತ್ತೆ?"

ಶ್ರೀಕೃಷ್ಣ: "ನೀನೇ ಈಶ್ವರನಾದಾಗ ಬೇರೊಂದು ಕ್ರಮದಲ್ಲಿ ಲೋಕವನ್ನು ಸೃಷ್ಟಿಸುವೆಯಂತೆ! ನಾನೇಕೆ ಲೋಕವನ್ನು ಸೃಷ್ಟಿಸಿದೆನೆಂಬಂತಿದೆ ಈ ಪ್ರಶ್ನೆ! ಸ್ವಾತಂತ್ರ್ಯ ನಿನ್ನ ಅನುಭವದಲ್ಲಿದೆ! ಅದು ಸತ್ಯವೋ ಅಲ್ಲವೋ ಎಂದು ನೋಡಿಕೋ! ಕೊಟ್ಟದ್ದನ್ನು ಸರಿಯಾಗಿ ಉಪಯೋಗಿಸು. ಅಶಕ್ತಳಾದರೆ ಅದನ್ನು ನನಗೇ ಹಿಂದಿರುಗಿಸು! ಅದೇ ಶರಣಾಗತಿ. ಆಗ ನಾನು ಹೇಳಿದಂತೆ ಅಷ್ಟೇ ಕೇಳು; ಅಷ್ಟೇ ನಡೆ; ಯಾವುದನ್ನೂ ಪ್ರಶ್ನಿಸಬೇಡ. ಈ ಶರಣಾಗತಿಯನ್ನೂ ಮಾಡದೆ, ಸ್ವಾತಂತ್ರ್ಯವನ್ನೂ ಇಟ್ಟುಕೊಂಡು, ಈಶ್ವರನನ್ನೇ ಮನಸ್ವೀ ಪ್ರಶ್ನಿಸುವುದು, ಅಜ್ಞಾನಮೂಲ, ಕರ್ಮಬಂಧಕ!... ನಾನು ನಿನ್ನ ಮಕ್ಕಳನ್ನು ಖಂಡಿತ ಉಳಿಸುತ್ತಿದ್ದೆ... ಅವರು ಧರ್ಮದ ರಕ್ಷಕರಾಗಿದ್ದರೆ ಮಾತ್ರ! ಅಧರ್ಮ ಹಿಡಿದವರು ಏನಾಗಬೇಕೋ ಹಾಗಾದರು!... ಇನ್ನೂ ಒಂದು ನೆನಪಿಸುತ್ತೇನೆ!.... ನೀನು ನನಗೆ ಶಾಪಹಾಕಿದಾಗಲೂ ಏನು ಹೇಳಿದ್ದೆ, ನೆನಪುಂಟೆ? 'ನಿನ್ನ ಶಾಪದಿಂದೇನು? ದೈವವೇ ಯಾದವರನ್ನು ಕೊಲ್ಲುತ್ತದೆ! ಈಗ ಆ ದೈವ, ನನ್ನ ರೂಪದಲ್ಲಿಳಿದು ಬಂದಿದೆ!... ಅವರವರ ಅಕೃತ್ಯಗಳಿಗೆ ಶಾಸಕನಾಗಿ, ಶಿಕ್ಷಕನಾದ ನಾನೇ ಅದನ್ನು ಸಂಕಲ್ಪಿಸಿರುವಾಗ, ನೀನು ಶಾಪ ಹಾಕುವುದರಿಂದ ನಿನಗೆ ತಪಸ್ಸು ನಷ್ಟ ಮಾತ್ರ' ಎಂದು!"

ಗಾಂಧಾರಿ ತಲೆತಗ್ಗಿಸುತ್ತಾಳೆ:"ನಾನು ಹಾಕಿದ ಶಾಪದ ಗತಿ?" ಎಂದು ಕೇಳುತ್ತಾಳೆ.

ಶ್ರೀಕೃಷ್ಣ: "ಅದು ನನಗೆ ಬರೀ ನೆಪ! ನನಗೆ ಯಾವುದೂ ನೆಪ ಆದೀತು! ಎಲ್ಲರೂ ನನ್ನ ಉಪಕರಣಗಳೇ! ನಾನು ನಿನಗೆ ಹೇಳಿದ್ದೆಲ್ಲ ಮಾನವ ಕರ್ತವ್ಯದ ಪವಿತ್ರತೆಯ ಬೋಧೆಗಾಗಿ ಮಾತ್ರ. ಮಾನವ ಕರ್ತವ್ಯವನ್ನು ಮಾನವ ಅನುಷ್ಠಿಸಬೇಕು! ಈಶ್ವರನ ಕರ್ತವ್ಯದ ಗೊಡವೆ ಅವನಿಗೆ ಬೇಡ."

*****

ಗಾಂಧಾರಿ ಅದೃಶ್ಯಳಾಗುತ್ತಾಳೆ... ಪ್ರಾತಃಸೂರ್ಯ ಮೇಲೇರುತ್ತಾ ಶ್ರೀಕೃಷ್ಣ ಮತ್ತೆ ದಾರುಕನನ್ನು ನೆನೆಸಿದ! "ಅರ್ಜುನ ಬರಲಿಲ್ಲ!... ಈ ಸಮಾಚಾರ ಅವನಿಗೆ ತಿಳಿಯಬೇಕು! ಎಷ್ಟು ಬೇಗ ಬರುತ್ತಾನೋ!"

ಸಮುದ್ರತೀರದಲ್ಲಿ ಉರುಳಿದ್ದ ಹೆಣಗಳ ಬಗೆಗೆ ಶ್ರೀಕೃಷ್ಣ ದೃಷ್ಟಿ ಹೊರಳಿಸಿದ:" ಎಷ್ಟೊಂದು ತಿಳಿಗೇಡಿಗಳು . ತಮ್ಮ ದುರ್ಬುದ್ಧಿಯಿಂದ ಹತರಾದರು!" ಎನ್ನುತ್ತಾ ಬಿಸಿಯಾಗಿ ನಿಟ್ಟುಸಿರಿಟ್ಟ!

"ಗಾಂಧಾರಿಯಂತೆ ನನ್ನನ್ನು ತಪ್ಪು ತಿಳಿದವರು ಇನ್ನೆಷ್ಟು ಜನರೋ!!" ಎನ್ನುತ್ತ ಭಗ್ನಹೃದಯನಾಗಿ ಶ್ರೀಕೃಷ್ಣ ಕರ್ಣನನ್ನು ನೆನೆಸಿದ! ಕರ್ಣ ಪ್ರತ್ಯಕ್ಷನಾದ!

* * * * *

# ೧೧. ಶ್ರೀ ಕೃಷ್ಣನ ವೈಫಲ್ಯ ಸ್ಮರಣೆಗಳು-ಕರ್ಣ!

ಬಿಸಿಲೇರುತ್ತಿತ್ತು!... ಸುತ್ತ ಜ್ಞಾತಿಗಳ ಹೆಣ! ಆಗಸದಲ್ಲಿ ರಣಹದ್ದುಗಳು ವರ್ತುಲಾಕಾರದಲ್ಲಿ ಸುತ್ತುತ್ತಾ, ಆಗಾಗ ಕೆಳಗಿಳಿಯುತ್ತಾ, ಹೆಣಗಳನ್ನು ಕುಕ್ಕಿ ಕುಕ್ಕಿ ತಿನ್ನುತ್ತಿದ್ದವು! ಆಗ ಈಗ ನಡುವೆ, ಕಾಗೆಗಳೂ ಅರಚುತ್ತಾ ತಾವೂ ಅಷ್ಟಿಷ್ಟು ಆ ಹೆಣಗಳ ಮಾಂಸಗಳನ್ನು ತಿಂದು ಹಾರುತ್ತಿದ್ದವು!... ನರಿಗಳು, ನಾಯಿಗಳು ಬೇರೆ! ಎಲ್ಲಿಂದ ಇಷ್ಟೊಂದು ಸಂಖ್ಯೆಯಲ್ಲಿ ಇವೆಲ್ಲ ಬಂದವು?... ಇಲ್ಲಿ ಹೆಣಗಳಿವೆ ಎಂದು ಸುದ್ದಿ ಕೊಟ್ಟವರಾರು?... "ದಿನಾ ಈ ವೇಳೆಗೆ ಸ್ನಾನ ಸಂಧ್ಯೆ ಅಗ್ನಿಹೋತ್ರ ಮುಗಿಸಿ ಕಾರ್ಯತತ್ಪರನಾಗಿರುತ್ತಿದ್ದೆ!... ಇಂದು!...." ಶ್ರೀಕೃಷ್ಣ ನಿಟ್ಟುಸಿರಿಟ್ಟ... ಸೂತಕ ಬೇರೆ... ಯಾವ ಆಹ್ನಿಕಕ್ಕೂ ತಾನು ಅರ್ಹನಲ್ಲ!... ಗರ್ಗರು ರಾಣಿಯರನ್ನು ಹೇಗೆ ತಾನೇ ಸಂತೈಸುತ್ತಿರುವರೋ?... ರಾಣಿಯರನ್ನು ಈಗ ತಾನು ಕಾಣಬಾರದು!... ಕಂಡು ಏನೂ ಪ್ರಯೋಜನವೂ ಇಲ್ಲ... ಅವರೂ ಇತ್ತ ಬರಲು ಸರಿಯಾದ ಸಂದರ್ಭವಲ್ಲ... ಮೊದಲು ಅರ್ಜುನ ಬರಲಿ!... "ಓ... ಅರ್ಜುನ! ಇಲ್ಲೇನಾಗಿದೆಯೆಂದು ನೀನೇನು ಬಲ್ಲೆ!... ಅಂದಿನ ಯುದ್ಧಕ್ಕೆ ವಿಮುಖನಾಗಿ, ಒಲ್ಲೆ, ಓಡಿಹೋಗುತ್ತೇನೆ' ಎಂದೆಯಲ್ಲ!... ನಾನು ಆಗ ಹೇಳಿದ ಒಂದು ಮಾತು ನೆನಪಿದೆಯೆ?... 'ನೀನಿಲ್ಲದೆಯೂ ಇವರನ್ನು ಇಲ್ಲವಾಗಿಸಬಲ್ಲೆ'- ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ- ಎಂದು!... ಈಗ ಅದು ಒದಗಿ ಬಂದಿದೆ ನೋಡು!... ಬರುವೆಯಾ?... ನೋಡುವೆಯಾ?... ನೀನು ಬಂದು ನೋಡಿ, ಏನೆನಿಸುತ್ತದೆಯೆಂಬುದನ್ನು ಹೇಳುವ ವರೆಗೆ ನಾನಿರಬೇಕಲ್ಲ!... ಬೇಡ!! ನಿನಗೆ ಆ ನಾನಿಲ್ಲದಾಗ, ಮುಂದೆ, ಏನಾಗುತ್ತದೆಯೆಂಬುದನ್ನು ನಾನು ನೋಡಲು ಇಚ್ಛಿಸುವುದಿಲ್ಲ! ಪ್ರಿಯ ಶಿಷ್ಯನ, ಸ್ನೇಹಿತನ ನಿಃಸಹಾಯಕತೆಯನ್ನು ನಾನು ನೋಡಲಾರೆ!..."

ಕರ್ಣ ಬಂದು ವಂದಿಸಿ, ಶ್ರೀಕೃಷ್ಣನ ಮಾನಸ ಭೂಮಿಕೆಯಲ್ಲಿ ನಿಂತ!... ಅವನನ್ನು ಕಂಡು ಶ್ರೀಕೃಷ್ಣನ ಮನಸ್ಸಿನಲ್ಲಿ ಮಿಶ್ರಭಾವನೆಗಳು ಮೂಡಲಾರಂಭಿಸಿದುವು!!... ಭಕ್ತರು ತನ್ನನ್ನು 'ಭಗವಂತ' ಎಂದರು!... 'ಸರ್ವಶಕ್ತ' ಎಂದರು... ನಡೆದುದರಲ್ಲೆಲ್ಲ... ತನ್ನಿಚ್ಛೆಗೆ ವಿರುದ್ಧವಾಗಿ ನಡೆದುದರಲ್ಲೂ-ತನ್ನ ಕೈವಾಡವನ್ನೇ ಕಂಡರು!!... ಎಂಥ ವೈಪರೀತ್ಯ ಇದು!! ಈ ಭಕ್ತರ ಹೊಗಳಾಟದ ಅತಿರೇಕವೂ ತನ್ನನ್ನು ತಪ್ಪಾಗಿ ತಿಳಿದುದರ ಪರಿಣಾಮವೇ ಅಲ್ಲವೆ? ತೆಗಳಿಕೆ-ಹೊಗಳಿಕೆ ತಿಳಿಯದೆ 'ಸ್ತುತಿಸುವ' ಈ ಭಕ್ತರನ್ನು ಏನು ಮಾಡಬೇಕು?... ತನ್ನನ್ನು ನಿಜವಾಗಿ ಪ್ರೇಮಿಸಿದವರು, ಭಕ್ತರಿಗಿಂತ ತನಗೆ ಅತಿ ಸಮೀಪದ ಹೃದಯದವರು, ಒಂದು ವಿಧದಲ್ಲಿ ತನ್ನನ್ನು ವೈಫಲ್ಯಗಳ ಸರಮಾಲೆ ಎಂದು ತಿಳಿದವರು... ಇವರೇ ವಾಸಿ!... ಹೌದು!... ಪೂತನೆ..., ಶಕಟ... ಬಕ... ವ್ಯೋಮ... ಚಾಣೂರ... ಕಂಸ... ಶಿಶುಪಾಲ... ಜರಾಸಂಧ... ಕಾಲಯವನ... ದಂತವಕ್ರ... ಮುರ... ನರಕ... ಬಾಣ... ಶಾಲ್ವ... ರುಕ್ಮಿ.. ಅಯ್ಯೋ!... ಇನ್ನೂ ಎಷ್ಟೊಂದು ಜನರನ್ನು... ಅಸುರರನ್ನು... ಇನ್ನು ತಿದ್ದಲಾಗದವರನ್ನು ತಾನು ಕೊಲ್ಲಬೇಕಾಗಿ ಬಂತು!!... ಕೊಂದದ್ದು ವಿಜಯವೋ?... ವೈಫಲ್ಯವೊ?... ಹೊಗಳುವ ಭಕ್ತರು ವಿಜಯವೆಂದಾರು! ಆದರೆ ಇವರನ್ನು ತಿದ್ದಲಾಗದೆ, ದಾರಿಗೆ ತರಲಾಗದೇ, ಹಾಗೇ ಮುಗಿಸಬೇಕಾದದು ವೈಫಲ್ಯವೇ ಸರಿ!... ಮಿತ್ರರೇ ತನ್ನನ್ನು ಅರ್ಥಮಾಡಿಕೊಂಡವರು!... ಸರ್ವಶಕ್ತನಿಗೂ ವೈಫಲ್ಯವುಂಟೆಂಬ ವೇದಾಂತ, ಭಕ್ತರಿಗೆ ಹಿಡಿಸುವುದಿಲ್ಲ!... ಸ್ವಾತಂತ್ರ್ಯದ ದುರುಪಯೋಗದಿಂದ ಆತ್ಮನಾಶಕ್ಕೇ ಎಳೆಸುವ ಈ ಬಗೆಯ ಆಸುರೀಭಾವದವರೆಲ್ಲ ಸರ್ವಶಕ್ತನ ಒಂದೊಂದು ಮುಖದ ಮಿತಿಗಳೇ! ವೈಫಲ್ಯಗಳೇ!!... ಸೃಷ್ಟಿ ಎಂಬುದೇ ಸರ್ವಶಕ್ತನ ಇತಿ-ಮಿತಿಗಳ ಮೊಳಕೆಗಳ ಭೂಮಿಕೆ!! ಒಂದೊಂದು ದಿಕ್ಕಿನತ್ತ ಒಲವುಗಳ, ಸೂಕ್ಷ್ಮಶಕ್ತಿಗಳ, ಬೀಜಗಳ ಸೂಕ್ಷ್ಮತೆಗೆ ತಾನು ಪ್ರಾಕೃತಿಕ ಶರೀರ ಜೋಡಿಸಿ, ಅವನ್ನು

ಕಾರ್ಯೋನ್ಮುಖಿ ಮಾಡುವುದೇ ತನ್ನ ಸೃಷ್ಟಿಯ ಗುಟ್ಟು!... 'ಅದರಿಂದ ಈಶ್ವರನಾದ ತನಗೇನು ಲಾಭ?' ಎಂದು ತಾರ್ಕಿಕರೂ, ವೇದಾನ್ತಿಗಳೂ ಚರ್ಚಿಸಿದ್ದೂ ಚರ್ಚಿಸಿದ್ದೇ!!... ತಾನಲ್ಲದ ಈ ಇನ್ನೊಂದು ತತ್ವವನ್ನು, ಈ ಅನ್ಯ 'ಅಹಂ' ಪದಾರ್ಥವನ್ನು, ತಾನು ತನ್ನಿಷ್ಟದಂತೆ ಬೆಳೆಯ ಬಿಟ್ಟುದರಲ್ಲಿ ತನ್ನ ಸೋಲಿಲ್ಲವೆ?... ಮೂರ್ಖರು!... ಶತಮೂರ್ಖರು!! ಇವರೆಲ್ಲ ತನ್ನನ್ನು ಕಾಣುವುದೆಂತು? ಹೇಗೆ?... ಪರಿಪೂರ್ಣತೆಯ ಕಲ್ಪನೆಯ ನೆರಳೂ ಕಾಣದವರಿಗೆ, ಆ ದಿಕ್ಕಿನತ್ತ ತಾನು ಅವರನ್ನು ಕೊಂಡೊಯ್ಯಲು ಮಾಡುತ್ತಿರುವ ಈ ಅಗಾಧ ಪ್ರಯತ್ನ ಹೇಗೆ ತಿಳಿಯಬೇಕು?... ಸೃಷ್ಟಿಯಲ್ಲಿ ಈಶ್ವರನಾದ ತನಗೆ ಲಾಭವಿಲ್ಲವೇ?... ತನ್ನವರೆಲ್ಲ ಪೂರ್ಣರಾದರೆ, ತನ್ನನ್ನರಿತರೆ, ತನಗೆ ಲಾಭವಿಲ್ಲವೆ?... ತನ್ನನ್ನು ಸರಿಯಾಗಿ ಅರಿಯುವುದಕ್ಕಿಂತ ಹೆಚ್ಚಿನ ಪೂಜೆಯುಂಟೇ?... ಎಷ್ಟೊಂದು ತಪ್ಪು ಅರ್ಥೈಕೆಗಳು!... ಸತ್ರಾಜಿತನ ಸ್ಯಮಂತಕಮಣಿಯನ್ನು ತಾನು ಕದ್ದೆನೆಂದರು!... ಇನ್ನೂ ಮೊದಲು!!... ಹೌದು, ಹೌದು!!... 'ಕಂಸ ಭೀತಿಯಿಂದ ಮಥುರಾ ನಗರಿಯನ್ನು ಬಿಟ್ಟೋಡಿ ಗೋಕುಲದಲ್ಲಿ ಅಡಗಿದ ಸರ್ವಶಕ್ತ!' ಎಂದು ಅಣಕವಾಡಿದರು!... ಆಮೇಲೆ ಆ ಮಾವನನ್ನೇ ಕೊಂದ ಕುಲದ್ರೋಹಿ ಎಂದರು!... ಜರಾಸಂಧನಿಗೆ ಹೆದರಿ ಓಡಿದವನೆಂದರು!... ಪಾಂಡವ ಪಕ್ಷಪಾತಿ ಎಂದರೇ ವಿನಾ ಸತ್ಯಪಕ್ಷಪಾತಿ ಎಂದು ಯಾರೂ ಹೇಳಲಿಲ್ಲ! ಕುಹಕಿ, ಕಪಟಿ, ಕುತಂತ್ರಿ, ಅಧರ್ಮಿ ಎಂದರು!... ಚಾಡಿಕೋರ, ಕಲಹಪ್ರಿಯ, ವಿಷಯಲಂಪಟ, ಧೂರ್ತ, ಅವ್ಯವಸ್ಥಾ ಪ್ರಿಯ, ಎಂದೆಲ್ಲ ಅಪಪ್ರಚಾರ ನಡೆಸಿದರು!!... ಇದು ಮರೆಯಲಾರದ ಒಂದು ಬಗೆಯ ತೀವ್ರ ನೋವು!... ಇನ್ನೊಂದತ್ತ ಆ ಕಣ್ಣು ಕುಕ್ಕುವ, ಕರುಳು ಕೊರೆಯುವ, ಉರುಳು ಹಾಕಿದಂತೆ ತನಗೆ ಕಾಣುವ ವೈಫಲ್ಯಗಳ ವಿಪುಲತೆ!... ತನಗೆ ಪ್ರಿಯರಾದ ಯಾರನ್ನು ತಾನೇ ತಾನು ಸಕಾಲದಲ್ಲಿ ರಕ್ಷಿಸಲಾಯಿತು?... ಯಾರಿಗೆ ತಾನು ತೃಪ್ತಿ ನೀಡಿ ಆಗಿದೆ?... ಹೆತ್ತವರನ್ನೇ ಹದಿಮೂರು ವರ್ಷ ಮತ್ತೆ ನೋಡಲಾಗದಂತೆ ಏರ್ಪಟ್ಟ ಪರಿಸ್ಥಿತಿಯನ್ನು ಇವರು ತಿಳಿಯಬಲ್ಲರೇ?... ಅವರನ್ನು ಕಾಣಲೆಂದೇ ಅಲ್ಲವೆ ಆ ಎಲ್ಲ ವರ್ಷಗಳೂ ತಾನೂ ಆ ಕಂಟಕ ನಿವಾರಣೆಯಲ್ಲಿ ತೊಡಗಿದ್ದು!!... ಪಾಂಡವರನ್ನು ಆಪತ್ತುಗಳಲ್ಲಿ ಎಷ್ಟುಸಲ ನಿಸ್ಸಹಾಯಕನಾಗಿ ನೋಡಬೇಕಾಯ್ತು!... ಅರಗಿನ ಮನೆ, ಜೂಜು, ಪತ್ನೀ ಮಾನಭಂಗ ಯತ್ನ... ವನವಾಸ... ರಾಜ್ಯಭಿಕ್ಷಾಯಾಚನೆ...! ಅದು ತನ್ನ ಉಪೇಕ್ಷೆ ಆಗಿರಲಿಲ್ಲವೆಂಬುದು ತನ್ನ ಹೃದಯವೊಂದಕ್ಕೇ ಗೊತ್ತಾದ ಸತ್ಯ!... ಲೀಲಾ ವಿಭೂತಿಯಲ್ಲಿ ತನ್ನ ಇಚ್ಛೆ ಕಾರ್ಯಗತವಾಗಲು, ಕಾಲವೊಂದು ಅನಿವಾರ್ಯ ಉಪಕರಣ! ಅದು ಅಷ್ಟೇ ವಿಳಂಬಕಾರಕ, ವಿಘ್ನಕಾರಕ ಸಾಧನವೂ ಹೌದು!!... ಎಷ್ಟು ಜನ ಭಕ್ತರು ಇದನ್ನರಿಯಬಲ್ಲರು?... ರಾಜತಂತ್ರದಲ್ಲಿ ತಾನು ನುರಿತವನಾಗಿಯೇ ಕಾಲಕ್ಕನುಗುಣವಾದ ನೀತಿಗಳನ್ನು ರೂಪಿಸಬೇಕಾಯಿತು!... ಮುದುಕ, ಕುರುಡ ದೊರೆಯ ಮಕ್ಕಳನ್ನು ಉಳಿಸಲು ತಾನು ಪಟ್ಟ ಪ್ರಯತ್ನವೆಲ್ಲ ವ್ಯರ್ಥವಾದುದು ಒಂದು ವೈಫಲ್ಯವಾದರೆ, ಅವರನ್ನು ಮುಗಿಸಲೆಂದೇ ತಾನು ವಿಶ್ವಪ್ರಯತ್ನಪಟ್ಟುದಾಗಿ ಇವರು ನಡೆಸಿದ ಅಪಪ್ರಚಾರ, ತನ್ನನ್ನು ಅವರಿಗೆ ಸರಿಯಾಗಿ ಪರಿಚಯಿಸಲಾಗದ ಇನ್ನೊಂದು ವೈಫಲ್ಯ!!... ತಾನು ನಿಜವಾಗಿ ಶಾಂತಿಗಾಗಿ ಪ್ರಯತ್ನಿಸಲೇ ಇಲ್ಲವೇ?... "ಕರ್ಣ! ನೀನೇ ಸಾಕ್ಷಿ!!... ಹೇಳು!... ನಾನು ನಿನ್ನನ್ನು ಉಳಿಸಲು, ಗೌರವಿಸಲು, ಉಭಯ ಪಕ್ಷಗಳ ಬಿಕ್ಕಟ್ಟನ್ನು ಪರಿಹರಿಸಲು ಪ್ರಾಮಾಣಿಕ ಪ್ರಯತ್ನ ನಡೆಸಲಿಲ್ಲವೇ?" - ಶ್ರೀಕೃಷ್ಣ ದಿಟ್ಟನಾಗಿ ಕೇಳಿದ!

ಕರ್ಣ: "ಸ್ವಾಮೀ! ನಾನೀಗ ಸ್ವಸ್ಥಾನಕ್ಕೆ ಮರಳಿದ್ದೇನೆ!... ಜ್ಞಾನೋದಯವಾಗಿದೆ!... ಈ ನನ್ನ ಸ್ವಂತ ಸ್ಥಾನದಿಂದ ನಾನಾಡುವ ಮಾತುಗಳನ್ನು ಯಾರು ನಂಬುತ್ತಾರೆ?... ಹಳೆಯ ಮಾನುಷಭಾವದಲ್ಲೇ, ಅಂದಿನ ರೀತಿಯಲ್ಲೇ ಮಾತಾಡಿದರೆ, ನಿನಗೆ ಮನನೋಯುತ್ತದೆ!... ಈ ಸ್ವ-ಸ್ಥಾನ ಭಾವದಿಂದ, ಹಳೆಯ ಕರ್ಣನ ಶರೀರದಲ್ಲಿ, ಆ ಪಾಶಗಳ ಬಿಗಿಯಲ್ಲಿ, ನಿಂತು ಹೇಗೆ ಮಾತಾಡಿಯೇನು? ಪಾಶಗಳಲ್ಲಿದ್ದು ಪಾಶಬಿಟ್ಟು ಮಾತಾಡಿಸುವ ಶಕ್ತಿ, ಯೋಗೇಶ್ವರನಾದ ನಿನಗೇ ಮಾತ್ರ ಶಕ್ಯ! ಹಾಗೆ ಅನುಗ್ರಹಿಸಿದರೆ, ತಿಳಿದುದನ್ನು ವಿಜ್ಞಾಪಿಸುತ್ತೇನೆ."

ಶ್ರೀಕೃಷ್ಣ: "ನಾನು ಯಾರಾರಿಗೆ ಏನೆಲ್ಲ ಅನುಗ್ರಹಿಸಬೇಕೋ ಅದು ಈ ನನ್ನ ಅವತಾರದಲ್ಲಿ ಮುಗಿದಾಗಿದೆ! ಈಗ ನನ್ನಿಂದ ಬೇರೇನನ್ನೂ ನಿರೀಕ್ಷಿಸಬೇಡ!... ಪಾಶಗಳಲ್ಲಿದ್ದೂ ಪಾಶ ಬಿಟ್ಟು ಆಡುವ ಮಾಡುವ ದಿವ್ಯಯೋಗವನ್ನು ನಿನಗೆ ಕಲ್ಪಾದಿಯಲ್ಲಿ ನಾನು ಉಪದೇಶಿಸಿರುವೆನಲ್ಲ? 'ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಂ ಅವ್ಯಯಂ' ಎಂದು ಅಭಿಮಾನದಿಂದ ಅರ್ಜುನನಿಗೆ ಗೀತೆಯಲ್ಲಿ ಹೇಳಿಕೊಂಡೆನಲ್ಲ! ಹೆಚ್ಚಿಗೆ ಹೇಳುವುದೇನಿದೆ? ಕರ್ಣ! ಸೂರ್ಯನಾಗಿ ಉಪದೇಶ ಪಡೆದ ನೀನು ಅದನ್ನು ಕರ್ಣನಾಗಿ ಏಕೆ ಆಚರಿಸಲಿಲ್ಲ! ದೇವತೆಯಾದ ನೀನು ಭೂಮಿಗೆ ಬಂದದ್ದು ನನ್ನ ಸಹಾಯಕ್ಕಾಗಿಯೋ? ನನಗೆ ಉಪದ್ರವಕ್ಕಾಗಿಯೋ? ಪಾಂಡವರು ನಿನಗೇನು ದ್ರೋಹ ಮಾಡಿದ್ದರು? ಅವರ ವಿರುದ್ಧ ಕತ್ತಿ ಮಸೆಯುತ್ತಾ, ಹಾಳು ದುರ್ಯೋಧನ ಪಕ್ಷದಲ್ಲಿ ಏಕೆ ಸೇರಿಕೊಂಡೆ? ಏನು ಸಾಧನೆ ಮಾಡಿದಂತಾಯ್ತು ಅದರಿಂದ? ನಿನ್ನ ಲೆಕ್ಕ ನೀನು ಯಾರಿಗೂ ಒಪ್ಪಿಸುವುದಿಲ್ಲವೆ?"

ಕರ್ಣ: "ಪ್ರಭು! ಸರ್ವಜ್ಞನಾದ ನೀನು ಹೀಗೆ ಮತ್ತೆ ನನ್ನನ್ನು ಪರೀಕ್ಷಿಸುವುದು ನ್ಯಾಯವೆ? ನಾನು ಸೂರ್ಯ ಹೌದು! ನಿನ್ನ ಸೇವೆಗೇ ಭೂಮಿಗೆ ಬಂದವನು! ಆದರೆ ನನ್ನ ತಾಯಿ ಕುಂತಿ ನನ್ನನ್ನು ಭೂಮಿಯಲ್ಲಿ ನೀನು ಕಲ್ಪಿಸಿದ ಮರ್ಯಾದೆಯಲ್ಲಿ ಹಡೆಯಲಿಲ್ಲ! ಕ್ಷತ್ರಿಯನಾಗಿ ಜನಿಸಿಯೂ ಕ್ಷತ್ರಿಯನ ಅಂತಸ್ತಿನಿಂದ ನಾನು ವಂಚಿತನಾದೆ! ಕಾನೀನಿಕ ಎನಿಸಿಕೊಂಡೆ-ಆದೂ ಎಲ್ಲ ಅನರ್ಥಗಳೂ ಆದ ಮೇಲೆ!! ಅಲ್ಲಿಂದಲೇ ನಾನು ದಾರಿತಪ್ಪಿದೆನೆಂದು ಕಾಣುತ್ತದೆ!... ಇದರಲ್ಲಿ ನನ್ನ ತಾಯಿಯದೂ ಏನೂ ತಪ್ಪಿಲ್ಲವೆ?... ಇನ್ನೂ ಒಂದು ಪ್ರಶ್ನೆಯನ್ನು ನಿನಗೇ ಕೇಳಿದರೆ ಉದ್ಧಟತನವೆಂದೂ ಭಾವಿಸಲಾರೆಯಾದರೆ, ಕ್ಷಮಿಸುವುದಾದರೆ, ಕೇಳುತ್ತೇನೆ."

ಶ್ರೀಕೃಷ್ಣ: "ಕರ್ಣ! ನಿನ್ನಲ್ಲಿ ಅಂದು ಪ್ರವೇಶಿಸಿದ್ದ ದಂಭೋದ್ಭವನ ಅಂಶ ಇನ್ನೂ ನಿನ್ನಲ್ಲಿರುವಂತೆಯೇ ನೀನು ಈ ಸ್ವಸ್ಥಾನದಿಂದಲೂ ಮಾತಾಡುತ್ತಿರುವುದು ಆಶ್ಚರ್ಯವಾಗಿದೆ!! ನಿನ್ನ ತಾಯಿ ನಿನ್ನನ್ನು ಧರ್ಮಶಾಸ್ತ್ರದ ಮರ್ಯಾದೆಯಲ್ಲಿ ಹಡೆಯಲಿಲ್ಲವೆಂದೇ ಇಟ್ಟುಕೋ! ಅವಳ ಲೆಕ್ಕ ಅದು ಬೇರೆ!! ಹೌದೆ? ನಿನ್ನ ತಲೆ ಅದರಿಂದೇಕೆ ಕೆಡಬೇಕು?... ನಾನೇ ನಿನ್ನಂತೆ ಕಾನೀನಿಕನಾಗಿಯೇ ಪರಾಶರರಲ್ಲಿ ವೇದವ್ಯಾಸ ಕೃಷ್ಣನಾಗಿ ಹುಟ್ಟಿದೆನಲ್ಲ! ವ್ಯಾಸನಾಗಿ ನನಗೆ ತಲೆ ಕೆಟ್ಟಿತೇ?... ಅಂತೂ ದಾರಿತಪ್ಪಿದ್ದನ್ನು ಈಗಲಾದರೂ ನೀನು ಒಪ್ಪಿಕೊಂಡದ್ದೇ ಸಂತೋಷ!... ಅದೇನು ನಿನ್ನ ಹೊಸ ಪ್ರಶ್ನೆ? ಈಗ ಯಾರೂ ಉದ್ಧಟರಲ್ಲ! ಯಾವ ಅನರ್ಥಗಳೆಲ್ಲ ಆಗಬಾರದೋ ಅವೆಲ್ಲ ಆದಮೇಲೆ ಯಾರನ್ನು ಹಾಗೆ ಕರೆದರೆ, ಬಿಟ್ಟರೆ, ಏನು ಲಾಭ? ಏನು ನಷ್ಟ? ಕೇಳಿಬಿಡು."

ಕರ್ಣ: "ನನ್ನಂತೆಯೇ ಹಿಂದೆ, ನಿನ್ನ ರಾಮಾವತಾರದಲ್ಲಿ, ನಿನ್ನ ಸಹಾಯಕ್ಕೆಂದೇ ಇಳಿದು ಬಂದ ಇಂದ್ರ ಅಂದು ವಾಲಿಯಾಗಿ ದಾರಿತಪ್ಪಿದನಲ್ಲ! ಇಂದೂ, ವಸುವಾದ ಭೀಷ್ಮನೂ, ಬೃಹಸ್ಪತಿಯಾದ ದ್ರೋಣನೂ ರುದ್ರನಾದ ಅಶ್ವತ್ಥಾಮನೂ- ನಿನ್ನ ಸಹಾಯಕ್ಕಿಳಿಯದೆ, ದುರ್ಯೋಧನ ಪಕ್ಷವನ್ನೇ ಹಿಡಿದರಲ್ಲ! ಅವರನ್ನು ನೀನು ಇದೇ ಬಗೆಯಾಗಿ ಪ್ರಶ್ನಿಸಬೇಡವೆ? ದಂಡಿಸಬೇಡವೆ?"

ಶ್ರೀಕೃಷ್ಣ: "(ಕ್ರುದ್ಧನಾಗಿ), ಇಂದ್ರನಿಗೆ ನಾನಾವ ಕರ್ಮಯೋಗವನ್ನೂ ಯಾವಾಗಲೂ ಉಪದೇಶಿಸಿರಲಿಲ್ಲ!... ಇಂದ್ರ ದಾರಿತಪ್ಪಿದ್ದು ಇದೇ ಮೊದಲೂ ಅಲ್ಲ! ಅವನಿಗೂ ವಿರೋಚನನಿಗೂ ಸಮವಾಗಿಯೇ ಗೂಢಭಾಷೆಯಲ್ಲಿ ನಾನು ಆತ್ಮಜ್ಞಾನವನ್ನುಪದೇಶಿಸಿ, ಅದನ್ನವನು ಸರಿಯಾಗಿ ತಿಳಿದು ಜೀರ್ಣಿಸಿಕೊಳ್ಳಲು* ಎಷ್ಟೋ ವರ್ಷ ಆಯಿತು! ವ್ಯಾಸರು ಅವನ ಜನ್ಮವನ್ನು ಜಾಲಾಡಿ ಸೂತ್ರ ಬರೆದಿದ್ದಾರೆ.

---

* ಇಂದ್ರ ಪ್ರಾಣಾಧಿಕರಣ: ವೇದಾಂತಸೂತ್ರ ೧-೧-೨೯ ರಿಂದ ೩೨. ಇದಕ್ಕೆ ಪ್ರತರ್ದನ ವಿದ್ಯೆ ಎಂದೂ ಹೆಸರುಂಟು. ಇಂದ್ರನು ತನ್ನನ್ನು ಪರಮಾತ್ಮ ಶರೀರಸಂಬಂಧದಲ್ಲಿ 'ನಾನೇ ಆತ್ಮ' 'ನನ್ನನ್ನೇ ಉಪಾಸಿಸು' ಎಂದು ಪ್ರತರ್ದನನಿಗೆ ಉಪದೇಶಿಸಿದ! ಇದನ್ನು ಅವನು ಉಪದೇಶ ಪಡೆದ ಕಥೆ ಛಾಂದೋಗ್ಯದಲ್ಲಿ ೮-೭ ರಲ್ಲಿದೆ. ೧೦೧ ದೇವಮಾನ ವರ್ಷ ಉಪಾಸಿಸಿ, ಆತ್ಮವು ಶರೀರವಲ್ಲ, ಸ್ವಪ್ನ ಕಾಣುವವನೂ ಅಲ್ಲ, ಸುಷುಪ್ತಿ ಸ್ಥಾನದವನೂ ಅಲ್ಲ, ಸರ್ವಾಂತರಾತ್ಮನಾದ ಭಗವಂತನೇ ಅವನೆಂದು ಕಾಣಲು ಶ್ರಮಪಟ್ಟ ಕಥೆ ಇದು!

ಅಲ್ಲಿ ಮೋಹಗೊಳ್ಳುವವರೂ ಇನ್ನೂ ಉಂಟು! ಇರಲಿ! ಈ ಸಲವೂ ಇಂದ್ರ, ಅರ್ಜುನನಾಗಿ, ದಾರಿತಪ್ಪುವುದರಲ್ಲಿದ್ದ ಎಂತಲೇ ಅವನಿಗೆ ಕರ್ಮಯೋಗ ರಹಸ್ಯವನ್ನುಪದೇಶಿಸಬೇಕಾಯಿತು! ನೀನಾವಾಗಲೂ ದಾರಿ ತಪ್ಪಿದವನಲ್ಲ ಎಂದು ನಿನ್ನ ಬಗ್ಗೆ ನನಗೆ ತುಂಬ ಭರವಸೆ, ನಿರೀಕ್ಷೆಗಳಿದ್ದವು! ಭೀಷ್ಮ ನಿನ್ನಷ್ಟು ಜವಾಬ್ದಾರನಾದ ದೇವತಾಸ್ಥಾನೀಯನೆ? ಬೃಹಸ್ಪತಿಗೂ ಒಮ್ಮೆ ತಲೆಗೆಟ್ಟು ಚಾರ್ವಾಕ ಮತವನ್ನು ಹುಟ್ಟು ಹಾಕಿದ ಕಥೆಯನ್ನರಿಯೆಯಾ? ಅದರಿಂದ ಲೋಕವು ಇಂದೂ ಒದ್ದಾಡುತ್ತಿರುವುದೂ ನಿನ್ನ ಗಮನಕ್ಕೆ ಬಂದಿಲ್ಲವೇ? ರುದ್ರನಂತೂ ಸರಿಯೇ! 'ತ್ವಂ ಹಿ ರುದ್ರ ಮಹಾ ಬಾಹೋ! ಮೋಹಶಾಸ್ತ್ರಾಣಿ ಕಾರಯ!' - (ಎಲೈ ರುದ್ರನೇ, ಲೋಕಗಳು ಕೆಟ್ಟು ಹಾಳಾಗುವಂಥ ಅಜ್ಞಾನ ಗ್ರಂಥಗಳನ್ನೂ ಸಿದ್ಧಾಂತಗಳನ್ನೂ ಹುಟ್ಟುಹಾಕು) ಎಂದು ನಾನೇ ಆ ಲಯ ಕರ್ತೃವಿನ ಸ್ಥಾನದ ದೇವತೆಗೆ ಅಪ್ಪಣೆ ಮಾಡಿದ್ದುಂಟು!! ದಾರಿಗೆ ಬರದವರ ಉಪಯೋಗಕ್ಕಾಗಿ ಮಾತ್ರ ಆ ಮೋಹನ ಶಾಸ್ತ್ರಗಳು, ತಾಮಸ ವಿದ್ಯೆಗಳು, ತಂತ್ರಾಗಮಗಳು. ಆದರೂ ಈ ಸಲ ರುದ್ರನೂ ಮಿತಿ ಮೀರಿ ವರ್ತಿಸಿದನಷ್ಟೆ! ನಾನು ಇವರಾರನ್ನೂ ದಂಡಿಸದೇ ಬಿಟ್ಟಿಲ್ಲ!... ಇನ್ನೂ ಒಂದು ಹೆಚ್ಚಿನ ಮಾತನ್ನಾಡಲೇ! ನೀನು ದೇವತೆಯಾದರೂ ಆಗಿರು, ದಾನವನಾದರೂ ಆಗಿರು! ಕರ್ಮಭೂಮಿ ಎನಿಸಿದ ಈ ಭೂಲೋಕದಲ್ಲಿ, ಅದೂ ಭರತ ವರ್ಷದಲ್ಲಿ ಹುಟ್ಟಿ ಬಂದವನು ಮಾನುಷ ಜನ್ಮದ ಜವಾಬ್ದಾರಿಯನ್ನರಿತು ವರ್ತಿಸಬೇಕೇ ಹೊರತು, ದೇವತೆಯೆಂಬ ಸೊಕ್ಕಿನಿಂದಲೋ, ದಾನವನೆಂಬ ಬಲಾಹಂಕಾರಗಳಿಂದಲೋ ವರ್ತಿಸಿದರೆ, ಇಹ-ಪರ ಎರಡೂ ನಷ್ಟವಾಗುತ್ತವೆ! ಇಂದ್ರರೂ, ರುದ್ರರೂ, ಆದಿತ್ಯರೂ, ವಸುಗಳೂ ಎಷ್ಟು ಜನ ಆಗಿಹೋದರು, ಗೊತ್ತೆ? ಅವರವರ ಪತನ, ಮರಣ, ಸ್ಥಾನಭ್ರಂಶ ಏಕಾಗುತ್ತವೆಯೆಂದು ಯೋಚಿಸಿರುವೆಯಾ? ಇವೇನು ದೊಡ್ಡ ಪದವಿಗಳೆಂಬ ಭ್ರಮೆಯೆ? ಅಲ್ಲೂ ಜವಾಬ್ದಾರಿ ಉಂಟು, ಇಲ್ಲೂ ಉಂಟು! ದೇವತೆಯೇ ಇಳಿದು ಬಂದು ಭ್ರಷ್ಟನಾದದ್ದು ನಿನ್ನಂತಹವರ ಕಥೆಯಾದರೆ, ದೈತ್ಯನಾಗಿ ಇಳಿದೂ ಉದ್ಧಾರವಾದವರ ಕಥೆ ಪ್ರಹ್ಲಾದ, ವಿಭೀಷಣ, ಮೊದಲಾದವರದ್ದು!... ತಿಳಿದೂ ನೀನು ಆತ್ಮವಂಚನೆ ಮಾಡಿಕೊಳ್ಳಬೇಡ! 'ದೇವಾನಾಂ ದಾನವಾನಾಂ ಚ ಸಾಮಾನ್ಯಂ ಅಧಿ ದೈವತಂ' (ನಾನು ದೇವ ದಾನವರಿಗಿಬ್ಬರಿಗೂ ಸಮಭಾವದಲ್ಲಿ ಉಪಾಸ್ಯನಾದ ದೇವರು) ಎಂಬ ನನ್ನ ವರ್ಣನೆ, ಇಂದು ನೆನ್ನೆಯದೇ? ಆದುದರಿಂದ ಇಲ್ಲಿ ಕರ್ಣನಾಗಿ ಬಂದ ನೀನು ಹೇಗೆ ನಡೆಯಬೇಕಿತ್ತೆಂಬುದನ್ನು ನಾನೇ ನಿನಗೆ ನೆನಪಿಸಬೇಕಿತ್ತೆ? ನಿನಗೆಷ್ಟು ಅವಕಾಶ ಕೊಟ್ಟೆ! ತಿದ್ದಿಕೊಂಡೆಯಾ?...."

ಕರ್ಣ: "(ನಾಚಿ) ನಾನು ಜವಾಬ್ದಾರಿಯಿಂದ ವರ್ತಿಸಲಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ, ಪ್ರಭು! ನನ್ನದು ಅಪರಾಧ! ಆದರೆ... ಮಾನುಷಭಾವದಲ್ಲೇ ಮತ್ತೆ ನೋಡುವುದಾದರೆ, ನನ್ನಿಂದಾದ ಅನರ್ಥಗಳಿಗಿಂತ, ನನಗಾದ ಅನರ್ಥಗಳು ಹೆಚ್ಚು ಅಕ್ಷಮ್ಯವಲ್ಲವೇ? ಹೆಚ್ಚು ಪ್ರಾಮಾದಿಕವಲ್ಲವೇ?... ತಾಯಿಯ ಪ್ರೀತಿಯಿಂದ ವಂಚಿತನಾದೆ!... ಗುರುಸೇವೆ ಮಾಡಿಯೂ ಗುರುಶಾಪಗ್ರಸ್ತನಾದೆ!!... ತುಂಬಿದ ಸ್ವಯಂವರ ಸಭೆಯಲ್ಲಿ ಸೂತಪುತ್ರನೆಂದು ಬೈಸಿಕೊಂಡು, ಸದವಕಾಶ ವಂಚಿತನಾದೆ!!! ಉಪಕರಿಸಿದ ಮಿತ್ರನಿಗೆ ನಾನು ಋಣ ತೀರಿಸದಂತೆ, ಋಣಭ್ರಷ್ಟನಾಗುವಂತೆ ಸಂದರ್ಭಗಳು ಏರ್ಪಡಿಸಲ್ಪಟ್ಟವು! ಕವಚ ಕುಂಡಲಗಳು ದಾನದ ಹೆಸರಲ್ಲಿ ಕಸಿದುಕೊಳ್ಳಲ್ಪಟ್ಟವು!!!! ಅಕಾಲದಲ್ಲಿ ನನ್ನ ನೈಜ ಜನ್ಮ ಪ್ರಕಟಿತವಾಗಿ, ನನ್ನ ಶ್ರದ್ಧೆ ಒಡೆಯಲ್ಪಟ್ಟಿತು! ನನ್ನ ಅಸ್ತ್ರಶಸ್ತ್ರಗಳನ್ನು ಕುತಂತ್ರಗಳಿಂದ ವ್ಯರ್ಥಗೊಳಿಸಲಾಯಿತು!... ನಿಸ್ಸಹಾಯನಾಗಿ, ಸಾರಥಿ ಇಲ್ಲದೆ, ನಾನೇ ರಥವನ್ನು ನಡೆಸಬೇಕಾಗಿ, ಯುದ್ಧ ಕೈಗೊಂಡಾಗ, ನೀನೇ ಅರ್ಜುನನಿಂದ ನಿರ್ದಾಕ್ಷಿಣ್ಯವಾಗಿ ಕೊಲ್ಲಿಸಿ ಜನ್ಮ ಕಳೆದೆ! ಆ ಮುಂಚೆಯೂ ಇದ್ದ ಸಾರಥಿಯಿಂದ ಸತತವಾಗಿ ನನಗೆ ತೇಜೋವಧೆ ಮಾಡಿಸಲಾಯಿತು!... ಒಂದೇ ಎರಡೇ, ಕೃಷ್ಣ!! ವಿಧಿಯೆನ್ನು, ನಿನ್ನ ತಂತ್ರ ಎನ್ನು, ನನ್ನ ಗುಣಗಳೇ ನನ್ನ ದೌರ್ಬಲ್ಯಗಳಾದ ದೌರ್ಭಾಗ್ಯವೆನ್ನು! ಏನಾದರೂ ಹೇಳು! ನಿಜವಾಗಿ, ಹೇಳು! ನನಗನ್ಯಾಯ ಆಗಲಿಲ್ಲವೆ? ನನ್ನ

ದಾನಶೂರತ್ವವನ್ನೇ ನನಗೆ ಉರುಳಾಗಿ ಹಾಕಿದವರಾರು? ತಾಯಿಯ ಮಮತೆಯ ಪಾಶವನ್ನು ಅಕಾಲದಲ್ಲಿ ನನ್ನ ಮೇಲೆ ಬೀಸಿದವರಾರು?... ಕೃತಜ್ಞನೆನಿಸಿಕೊಳ್ಳಬೇಕೆಂಬ ನನ್ನ ಒಂದೇ ಧ್ಯೇಯಕ್ಕೆ ಮಸಿ ಬಳಿಸಿ, ಮಣ್ಣುಗೂಡಿಸಿದವರಾರು? -ಪೂರ್ಣವಾಗಿ ಜನ್ಮವೇ ನಿಷ್ಫಲವಾಗುವಂತೆ ಸಂಚು ಮಾಡಿದವರಾರು?... ನೆನೆಸಿಕೊಂಡರೆ, ನನಗೆ ದ್ವೇಷಭಾವ ಈಗಲೂ ಮರೆಯುವಂತಾಗುತ್ತದೆ!... ಕೃಷ್ಣ, ದಯಮಾಡಿ ಉತ್ತರ ಹೇಳು! ನನಗೆ ಶಾಂತಿ ನೀಡು.”

ಶ್ರೀಕೃಷ್ಣ: “ಕರ್ಣ! ಕರ್ಣನಾಗಿ ನೀನಿನ್ನೂ ಸತ್ತಿಲ್ಲವೆಂಬುದು ನಿನ್ನ ಈ ಆವೇಶಪೂರಿತ ಮಾತುಗಳಿಂದ ವ್ಯಕ್ತವಾಗುತ್ತದೆ! ದೈವೀಸ್ಥಾನದಲ್ಲಿ ಮಾನುಷಭಾವ ಅಂಟಬಾರದು. ಮಾನುಷ ಸ್ಥಾನದಲ್ಲಿ ಮೊದಲೇ ಹೊತ್ತು ಬಂದ ಜವಾಬ್ದಾರಿಯನ್ನು ಮರೆಯಬಾರದು, ತೀರಿಸದೇ ಹೋಗಲೂ ಬಾರದು!... ನೀನಿನ್ನೂ ಸತ್ತಿಲ್ಲ!... ನೀನಿನ್ನೂ ಸತ್ತಿಲ್ಲ!.... ನಿನ್ನ ಭಕ್ತರ ತಲೆಗಳಲ್ಲಿ ರಾಹುಗ್ರಸ್ತ ಸೂರ್ಯನಾಗಿ ಬದುಕಿಯೇ ಇರುವೆ!! ನಿನ್ನಷ್ಟು ಪ್ರಕಾಶವಿಲ್ಲದೆಯೇ, ನಿನ್ನಂತೆ ಗ್ರಹಣಗಳಿಗೆ ವಶನಾಗಿಯೇ, ನನ್ನ ಆಜ್ಞಾಧಾರಕನಾದ ಚಂದ್ರ, ಅಭಿಮನ್ಯುವಾಗಿ ಇಳಿದು ಬಂದು, ನಿನ್ನಷ್ಟು ಕಾಲ ಭೂಮಿಯಲ್ಲಿ ಬಾಳದ ಮಿತಿಯನ್ನು ಪಡೆದೇ ಬಂದರೂ, ಎಷ್ಟೊಂದು ಜವಾಬ್ದಾರನಾಗಿ ನಡೆದುಕೊಂಡನೆಂಬುದನ್ನು ನೆನೆದರೆ, ನಿನ್ನ ವೈಫಲ್ಯ ಎದ್ದು ಕಾಣಲಾರದೆ? ಚಂದ್ರನಿಗಿಂತ ನೀನು ಕಡೆಯಾದೆಯಾ? ಸ್ವಯಂ ತೇಜೋಮೂರ್ತಿಯಲ್ಲದ ಅವನಿಗಿದ್ದ ಸ್ಥಿತಪ್ರಜ್ಞೆ ನಿನಗೆಲ್ಲಿ ಹೋಯಿತು?... ನಿನ್ನ ಪ್ರಶ್ನೆಗಳಿಗೆ ಉತ್ತರಿಸುವೆ!... ಒಂದೊಂದಾಗಿ ಕೇಳು... ಸಂದೇಹ ಬಂದರೆ ಮತ್ತೆ ಕೇಳು!... ನಿನ್ನ ಮೂಗಿನ ನೇರಕ್ಕೆ ನೋಡಿದರೆ ಪಾಮರರು ನಿನಗಾದ ‘ಅನ್ಯಾಯ’ಕ್ಕೆ ಭ್ರಮಿಸಿ ಮರುಗುವುದುಂಟು!... ಆದರೆ, ಇತರರಿಗೂ ಮೂಗುಗಳು ಉಂಟು! ಬೇರೆ ನೇರಗಳೂ, ನೋಟಗಳ ಕೋನಗಳೂ ಉಂಟು! ಮತ್ತೆ ಈ ಭ್ರಮೆಗಳಿಗೆ ತಲೆಯಲ್ಲಿ ಅವಕಾಶ ನೀಡಬೇಡ. ಮೊದಲನೆಯದಾಗಿ ನಿನ್ನ ತಾಯಿಯ ಪ್ರೀತಿಯಿಂದ ನೀನು ವಂಚಿತನಾಗಿದ್ದುದು ಉಂಟು. ನನ್ನ ಪೂರ್ಣ ಅನುತಾಪ ಈ ಬಗೆಗುಂಟು... ನನ್ನನ್ನು ನಂಬು! ನಿನ್ನ ತಾಯಿಯೂ ದುಡುಕಿ ಆಗ ನಿನ್ನನ್ನು ಪಡೆದುಬಿಟ್ಟಳು! ಕೌಮಾರದ ಚಾಪಲ್ಯ ಅದು! ಆಗಲೇ ಹೇಳಿದೆ, ಅದು ಅವಳ ಶಿಕ್ಷೆ ಎಂದು. ಅವಳು ನಿನ್ನನ್ನು ಮಗನೆಂದು ಆಗಲೇ ಒಪ್ಪಿ ಘೋಷಿಸಿದ್ದರೆ, ಇಡೀ ಚಂದ್ರವಂಶದ ಕೀರ್ತಿಯೇ ಹಾಳಾಗುತ್ತಿತ್ತು! ಮೊದಲೇ ಕಷ್ಟಸ್ಥಿತಿಯಲ್ಲಿ ಆ ವಂಶದ ಸಂತಾನ ಸಿಲುಕಿತ್ತು! ಧೃತರಾಷ್ಟ್ರ ಪಾಂಡುಗಳ ಜನನವೇ ಇದಕ್ಕೆ ಪ್ರಮಾಣ. ಭೀಷ್ಮನೂ ಕಷ್ಟದಲ್ಲಿ, ಇಕ್ಕಟ್ಟಿನಲ್ಲಿ ಸಿಕ್ಕಿದ್ದ! ಹೀಗಾಗಿ ನಿನ್ನನ್ನು ಅವಳು ಪರಿತ್ಯಾಗ ಮಾಡದೇ ಬೇರೆ ದಾರಿ ಇರಲಿಲ್ಲ. ಆದರೂ ನಿನ್ನದೂ ತಪ್ಪಿದೆ!... ಚಿಂತಿಸಿದೆಯಾ?... ಯೋಚಿಸು!”

ಕರ್ಣ: “ನಾನೆಲ್ಲಿ ತಪ್ಪಿದೆ? ಕುಂತೀದೇವಿಯ ಮಗನಾಗಿ ಹುಟ್ಟಿದ್ದೇ ನನ್ನ ತಪ್ಪೆನ್ನುವೆಯಾ? ಅದನ್ನು ತಪ್ಪಿಸುವ ಸ್ವಾತಂತ್ರ್ಯ ನನಗಿತ್ತೆ?”

ಶ್ರೀಕೃಷ್ಣ: “ಹೌದು! ಕರ್ಣನಾಗಿ ನಿನಗೆ ಆ ಸ್ವಾತಂತ್ರ್ಯವಿರಲಿಲ್ಲವೆನ್ನು! ನಿನ್ನ ಸೂರ್ಯರೂಪದ ನಿಜಸ್ಥಾನ ದೇವತೆಯ ವಿಷಯವಾದ ಮಂತ್ರವನ್ನು ಕುಂತಿ ಜಪಿಸಿ ನಿನ್ನನ್ನು ಕರೆದಳಲ್ಲ!”

ಕರ್ಣ: “ಹೌದು!”

ಶ್ರೀಕೃಷ್ಣ: “ಆಗ, ಭೀತಳಾಗಿ ‘ಈಗ ನನಗೆ ಮಗ ಬೇಡ’ ಎಂದಳಲ್ಲ! ‘ಮತ್ತೆ ಕರೆಯುತ್ತೇನೆ, ಆಗ ಬಾ ಎಂದಳಲ್ಲ! ಅದು ಜವಾಬ್ದಾರಿಯ ವರ್ತನೆ ಅಲ್ಲವೆ?”

ಕರ್ಣ: “ಪ್ರಭು! ಏನಿದು, ನೀನೆನ್ನುತ್ತಿರುವುದು? ಮಂತ್ರವನ್ನು ಒಂದೇ ಬಾರಿ ಉಚ್ಚರಿಸಬೇಕೆಂದೂ, ಎರಡನೇ ಬಾರಿ ಕೂಡದೆಂದೂ ದೂರ್ವಾಸರು ವರವಿತ್ತಿದ್ದರಲ್ಲ! ನಾನು ಎರಡನೇ ಸಲ ಬರಬೇಕಿತ್ತೆ? ಬರುತ್ತೇನೆ ಎನ್ನಬೇಕಿತ್ತೆ?”

ಶ್ರೀಕೃಷ್ಣ: “ಎರಡನೇ ಸಲ ಬರಬೇಕಿತ್ತೆಂದು ನಾನು ಹೇಳಲಿಲ್ಲ! ದುಡುಕಬೇಡ! ಕೇಳು. ಬಲಾತ್ಕಾರವಾಗಿ ಅವಳ ತಲೆಗೆ ನಿನ್ನ ಮಾನವಾಂಶದ ಕರ್ಣನೆಂಬ ಶಿಶುವನ್ನು ಕಟ್ಟಿ ಹೋಗುವುದಕ್ಕಿಂತ,

'ವರ ವ್ಯರ್ಥ ಮಾಡಿದೆ! ಮತ್ತೆ ಬರಲಾಗದು' ಎಂದು ಏಕೆ ಅಂತರ್ಧಾನನಾಗಲಿಲ್ಲ? ಒಂದು ವರ ಹೀಗೆ ಅನರ್ಥಕರವಾಗುವುದಕ್ಕಿಂತ ವ್ಯರ್ಥವಾಗಿ ಬಿಟ್ಟಿದ್ದರೆ ವಾಸಿ ಆಗುತ್ತಿರಲಿಲ್ಲವೆ?"

ಕರ್ಣ: "ಸೂರ್ಯ ಪ್ರತ್ಯಕ್ಷ, ಸೂರ್ಯವರ, ವ್ಯರ್ಥವಾಗುವುದೇ?"

ಶ್ರೀಕೃಷ್ಣ: "ಇದೇ ನಿನ್ನ ಅಹಂಕಾರಕ್ಕೆ ಸಾಕ್ಷಿ, ನೋಡು! ನಿನ್ನ ಬುದ್ಧಿಗೆ ಗ್ರಹಣ ಹಿಡಿದದ್ದು ಈ ಕ್ಷಣದಲ್ಲಿಯೇ ಅಲ್ಲವೆ? ನಿನ್ನ ಒಂದು ಇಡೀ ಅವತಾರ- ಬರೀ ಪ್ರತ್ಯಕ್ಷ- ವ್ಯರ್ಥವಾಗಬಹುದಾದರೆ, ನಿನ್ನ ಒಂದು ಪ್ರತ್ಯಕ್ಷ ಹಾಗಾಗಿದ್ದರೆ ಏನು ಮುಳುಗಿ ಹೋಗುತ್ತಿತ್ತು? ನಿನ್ನ ಗಾಂಭೀರ್ಯಕ್ಕೇನೂ ಕುಂದು ಬರುತ್ತಿರಲಿಲ್ಲ, ಅಲ್ಲವೆ? ದೇವತೆಗಳನ್ನು ಅಯಥಾಶಾಸ್ತ್ರವಾಗಿ, ಸರಿಯಾದ ಸ್ಥಿತಿಯಲ್ಲಿ ಕರೆಯದೆ, ಅಮಂತ್ರಕವಾಗಿಯೋ, ಸಮಂತ್ರಕವಾಗಿಯೇ ಆದರೂ, ಅವಿಧಿಪೂರ್ವಕವಾಗಿಯೋ ಕರೆದರೆ **ಯಾಗಗಳಿಗೆ ಬರಬಾರದೆಂಬ ನಿಯಮವಿಲ್ಲವೆ? ಕುಂತಿ ಕೇವಲ ಕನ್ಯೆಯಾಗಿ, ಅದೂ ಕುತೂಹಲಕ್ಕೆ** ವರ ನಿಜವೋ ಅಲ್ಲವೋ ಎಂದು ನೋಡಲು ಕರೆದದ್ದು ನಿನಗೆ ಗೊತ್ತಿರಲಿಲ್ಲವೇ? ಗೊತ್ತಿರದಿದ್ದರೆ ಲೋಕಸಾಕ್ಷಿ ಎಂತಾಗುವೆ? ಸಕಲ ಕರ್ಮಸಾಕ್ಷಿಯಾಗಿ ಅಲ್ಲವೆ ನಾನು ನಿನ್ನನ್ನು ಸೂರ್ಯಸ್ಥಾನದಲ್ಲಿರಿಸಿದ್ದು? "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ.. ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ" ಎಂಬ ಶ್ರುತಿ ನಿಜವಾದರೆ, ಅಕ್ಷರಸ್ವರೂಪಿಯಾದ ನಾನಲ್ಲವೆ ನಿನ್ನ ಸೂರ್ಯತ್ವಕ್ಕೆ ಆಧಾರ? ನೀನು ನನ್ನನ್ನು ಕೇಳಿದೆಯಾ, ಆಗ? ಸ್ವತಂತ್ರನೆಂಬಂತೆ ವರ್ತಿಸಿದೆ ಅಲ್ಲವೆ? ಕುಂತಿಯ ಸ್ಥಿತಿಯಲ್ಲಿ ಅವಳು ನಿನ್ನಿಂದ ಪುತ್ರನನ್ನು ಪಡೆಯಬಾರದು, ಅದು ಅವಳಿಗೂ ಲೋಕಕ್ಕೂ ಒಳ್ಳೆಯದಲ್ಲ ಎಂದು, ನಿನಗೇಕೆ ಎನ್ನಿಸಲಿಲ್ಲ? ಸೂರ್ಯನಂಥ ದಾತೃ ಬೇರೆ ಯಾರೂ ಇಲ್ಲ ಎಂಬ ಹೆಮ್ಮೆ ನಿನಗೆ ಬೇಕಿತ್ತು! ಈ ದಾನಶೂರತ್ವದ ಹೊಗಳಿಕೆಯ ಭ್ರಮೆ, ಅಪೇಕ್ಷೆ, ನಿನಗೆ, ಆಮೇಲೆ ನಿನ್ನ ಮಾನುಷಭಾವದ ಕರ್ಣನಾದ ಮೇಲೂ ಬಿಡಲಿಲ್ಲ! ಅದರಿಂದಲೇ ಕವಚಕುಂಡಲಗಳನ್ನೂ ಕಳೆದುಕೊಂಡೆ! ಯಾರ ತಪ್ಪು?

ಕರ್ಣ: "ಪ್ರಭು! ನನ್ನ ಕಣ್ಣು ತೆರೆದೆ" (ಎನ್ನುತ್ತಾ ತಪ್ಪೊಪ್ಪಿ ಸಾಷ್ಟಾಂಗವಾಗಿ ನಮಸ್ಕರಿಸುತ್ತಾನೆ.)

ಶ್ರೀಕೃಷ್ಣ: "ಕುಂತಿಯ ತಪ್ಪೂ ಇತ್ತು! ಅದು ಸ್ವಲ್ಪವೇ ಎನ್ನು. ನಿನಗೆ ನ್ಯಾಯ ದೊರಕಿಸಲು ಅವಕಾಶ ಕೊಡುವಂತೆ ದೇವರನ್ನು ಮನಸ್ಸಿನಲ್ಲೇ ಪ್ರಾರ್ಥಿಸಿ, ಕಾಲ ಕಾಯ್ದು ನೋಡಿದಳು!"

ಕರ್ಣ: "ಪ್ರಭು! ಅದು ಹೇಗೆ ನಿನಗೆ ಗೊತ್ತು?"

ಶ್ರೀಕೃಷ್ಣ: "ನಿನ್ನ ಬುದ್ಧಿಯ ಮಂಕಿಗೆ ಇದೂ ಸಾಕ್ಷಿ! ನಾನು ಸಕಲರ ಅಂತರಾತ್ಮನಲ್ಲವೇ?... ಕುಂತಿ ನಿರೀಕ್ಷಿಸಿದ ಕಾಲ ಬಾರದುದಕ್ಕೆ ನೀನೂ ಮತ್ತೆ ಕಾರಣನಾದೆ!"

ಕರ್ಣ: "ಅದು ಹೇಗೆ ಸ್ವಾಮಿ?"

ಶ್ರೀಕೃಷ್ಣ: "ಅಷ್ಟರೊಳಗೆ ನೀನು ದುರ್ಯೋಧನನ ಪಕ್ಷ ಸೇರಿ ಆಗಿತ್ತು! ನೀನು ಬೆಳೆದುದು ಅದಿರಥನ ಮನೆಯಲ್ಲಿ! ಮಾತೃಪ್ರೀತಿಯಿಂದ ವಂಚಿತನಾದರೂ, ಆ ಇನ್ನೊಬ್ಬ ತಾಯಿ ನಿನ್ನನ್ನು ಎಷ್ಟು ಪ್ರೀತಿಸಿದಳು ಗೊತ್ತೆ? ಈಶ್ವರ ನಿನಗೆ ವಂಚನೆ ಮಾಡಲಿಲ್ಲವಷ್ಟೆ?.... ಇನ್ನೂ ಕೇಳುತ್ತೇನೆ, ಹೇಳುವೆಯಾ? ತಾಯಿಯ ಪ್ರೀತಿಯಿಂದ ವಂಚಿತನಾಗಿಯೂ ಮನೋವಿಕಾರ ಪಡೆಯದ ಇನ್ನೊಬ್ಬ ಕರ್ಮಯೋಗಿ ಇದೇ ಕಾಲದಲ್ಲಿದ್ದಾನೆ, ಬಲ್ಲೆಯಾ? ನೀನು ಅವನಂತೆ ಏಕೆ ಆಗಲಿಲ್ಲ?"

ಕರ್ಣ: "ಯಾರವನು, ಮಹಾಪ್ರಭು?"

ಶ್ರೀಕೃಷ್ಣ: "ನಾನೇ ಅಲ್ಲವೆ?.... ಈ ಸಣ್ಣ ವಿಷಯಗಳೂ ನಿನ್ನ ತಲೆಗೆ ಬರದುದಕ್ಕೆ ನಿನ್ನ ಅಹಂಕಾರ ಎಷ್ಟೊಂದು ಕಾರಣ, ನೋಡು? ದೇವಕೀ ದೇವಿಯ ಪ್ರೀತಿಯಿಂದ ನಾನೂ ವಂಚಿತನಾದೆ? ಬಾಲ ಲೀಲೆಗಳನ್ನು ತೋರಿಸದೆ ನಾನೂ ವಂಚಿಸುವಂತಾಯ್ತು! ಚೊಚ್ಚಲ ಮಗನಾದ ನೀನು ನಿನ್ನ ತಾಯಿಯನ್ನು ತೃಪ್ತಿಪಡಿಸಲಾಗಲಿಲ್ಲ ಎಂಬ ಕೊರತೆ ಒಮ್ಮೆಯಾದರೂ ನಿನ್ನನ್ನು ಕಾಡಿತೆ? ನಿನ್ನ ಕೊರತೆಯೇ ನಿನಗೆ ಹೆಚ್ಚಾಯಿತೇ ವಿನಾ, ಆ ತಾಯಿಯದಲ್ಲ!"

ಕರ್ಣ: "ಅವಳು ನನ್ನನ್ನು ತೊರೆದುದರಿಂದಲ್ಲವೇ ಹಾಗಾದ್ದು!"

ಶ್ರೀಕೃಷ್ಣ: "ನಾನೂ ಹಾಗೇ ಹೇಳಬಹುದಲ್ಲ!.... ಇದಕ್ಕೆಲ್ಲ ಸಂದರ್ಭಗಳು ಕಾರಣ... ವ್ಯಕ್ತಿಗಳು ಸ್ವಲ್ಪ. ಅದನ್ನು ಅತೀ ಮಾಡಬಾರದು... ಇರಲಿ.... ಇನ್ನು ಗುರುಸೇವೆಯ ವಿಷಯ. ಪರಶುರಾಮರನ್ನು ನೀನು ಆಶ್ರಯಿಸುವಾಗಲೇ ನಿನಗೆ ದುಷ್ಟ ಉದ್ದೇಶ್ಯವಿತ್ತು! ದ್ರೋಣ ನಿನ್ನನ್ನು ನಿರಾಕರಿಸಿದ್ದರಿಂದ ನೀನು ಉದ್ವಿಗ್ನನಾದೆ! ನೀನು ನನಗೆ ಕ್ಷತ್ರಿಯನಾಗಿಯೇ ಸಹಕರಿಸಬೇಕಾದ ನಿಯಮವನ್ನು ನಾನು ನಿನಗೆ ಹಾಕಿರಲಿಲ್ಲ!! ಶೂದ್ರನಾಗಿಯೂ ವಿದುರ ಸಹಕರಿಸಿದ, ಹೌದೆ? ನಿನ್ನ ಮಹತ್ವಾಕಾಂಕ್ಷೆ ನಿನ್ನನ್ನು ಭೂತವಾಗಿ ಬೆನ್ನಟ್ಟಿತ್ತು! ವಂಚಿಸಿಯಾದರೂ ಪರಶುರಾಮರಿಂದ ಅಸ್ತ್ರವಿದ್ಯೆ ಕಲಿಯಲು ಯತ್ನಿಸಿದೆ! ಆಚಾರ್ಯನಲ್ಲಿ ನಿನ್ನ ಅಂತರಂಗವನ್ನು ನೀನು ಸಮರ್ಪಿಸಲಿಲ್ಲ! ನೀನು ಅದನ್ನು ಆಗಲೇ ದುರ್ಯೋಧನನಿಗೆ ಸಮರ್ಪಿಸಿದ್ದೆ! ಅರ್ಜುನನ ಮೇಲೆ ಸ್ಪರ್ಧೆಯ ಮನೋಭಾವ ಅವನನ್ನು ನಿನಗೆ ವೈರಿ ಎಂಬ ಭ್ರಮೆಯಲ್ಲಿ ಮುಳುಗಿಸಿತು! ಅಲ್ಲೇ ನಿನ್ನ ದೈವೀಭಾವಕ್ಕೆ ತಿಲಾಂಜಲಿಯನ್ನಿತ್ತೆ!.... ಪರಶುರಾಮರು ಎಲ್ಲಿ ವಚನಭ್ರಷ್ಟರಾದರು? ಅವರ ಚಾರಿತ್ರ್ಯ ಎಲ್ಲಿ ತಪ್ಪಿತು?"

**ಕರ್ಣ: (ತಲೆ ತಗ್ಗಿಸುತ್ತಾನೆ)**

ಶ್ರೀಕೃಷ್ಣ: "ಮೊದಲಿನಿಂದಲೇ ನೀನು ಇಳಿದು ಬಂದ ಪ್ರಯೋಜನವನ್ನೇ ಮರೆತೆ. ನನ್ನ ಪ್ರಯೋಜನಕ್ಕೆ ವಿರುದ್ಧವಾಗಿಯೇ ವರ್ತಿಸತೊಡಗಿದೆ!.... ಇನ್ನು ದ್ರೌಪದೀ ಸ್ವಯಂವರಕ್ಕೆ ನೀನು ಹೋದುದೇ ತಪ್ಪು! ಪಂಚ ಇಂದ್ರರ ಇಂದ್ರಾಣಿಯರ ಏಕ ರೂಪದಲ್ಲಿದ್ದ ಅವಳು ಇಂದ್ರನ ವಸ್ತುವೇ ಹೊರತು ಸೂರ್ಯನ ವಸ್ತುವಲ್ಲ ಎಂದು ನಿನಗೆ ಅನ್ನಿಸಲಿಲ್ಲವೆ? ಸೂರ್ಯ ಭಾವವನ್ನು ಮರೆತೆಯಲ್ಲ! ದುರ್ಯೋಧನ ಉಬ್ಬಿಸಿದ. ಎಂಜಲು ತಿನ್ನಿಸಿದ! ನಿನ್ನ ಬುದ್ಧಿ ಕೆಟ್ಟಿತು! ನಿನ್ನನ್ನವಳು ಸೂತಪುತ್ರನೆಂದು ಹೇಳಿ ನಿರಾಕರಿಸಿದಾಗಲೂ ನಿನಗೆ ಜ್ಞಾನೋದಯ ಆಗಲಿಲ್ಲ! ಪ್ರತ್ಯುತ ಸೇಡಿನ ಭಾವವೇ ಉಂಟಾಯಿತು! ಅರ್ಜುನ ದ್ವೇಷ!! ದ್ರೌಪದೀ ದ್ವೇಷ!! ಇದರಿಂದ ನೀನು ನಿನಗೆ ಮರಣ ಪಾಶವಾದ ದುರ್ಯೋಧನ ಸ್ನೇಹದಲ್ಲೇ ಮತ್ತೆ ದೃಢನಾದೆ! ನೇಣು ಹಾಕಲ್ಪಡುವವನು ನೇಣನ್ನು ಬಿಗಿಯಾಗಿ ತಾನೇ ಬಿಗಿದುಕೊಂಡಂತಾಗಲಿಲ್ಲವೇ ಇದು? ಇಂದ್ರ, ನಿನ್ನ ಕವಚ ಕುಂಡಲಗಳನ್ನು ಕಸಿದುಕೊಂಡುದರಲ್ಲಿ ಏನಾಶ್ಚರ್ಯ! ಕರ್ಣ! ಇವು ಮಾತ್ರವಲ್ಲ! ಇಂದ್ರಿಯಗಳೂ, ಕರ್ಮೇಂದ್ರಿಯಗಳೂ, ಶರೀರ, ಕರಣಗಳೂ ಎಲ್ಲವೂ ದೈವದತ್ತವೇ. ಇವನ್ನು ಒಂದಿಲ್ಲೊಂದು ದಿನ ಹಿಂದಿರುಗಿಸಬೇಕಾದ ಹೊಣೆ ಎಲ್ಲ ಮಾನವರಿಗೂ, ಮಾನವ ಭಾವದಲ್ಲಿ ಬಂದ ಎಲ್ಲರಿಗೂ-ನನಗೂ-ಹೊಣೆ! ಇಗೋ, ಶರೀರ ಬಿಡಲು ಕಾಲಕಾಯುತ್ತಿದ್ದೇನೆ! ನಾನಾಗಿ, ನೀನಾಗಿ, ಈ ಕರಣಗಳನ್ನು ಸರಿಯಾಗಿ ಉಪಯೋಗಿಸದಿದ್ದರೆ, ದುರುಪಯೋಗಿಸಿದರೆ, ಅವನ್ನು 'ಕಸಿದು' ಕೊಳ್ಳುವ ಹಕ್ಕು ಈಶ್ವರನಿಗಿದ್ದೇ ಇದೆ! 'ಕಸಿಯುವುದು' ಎಂಬ ತಲೆತಿರುಕ ಶಬ್ದವನ್ನೇ ನೋಡು! ನೀನೇ ಅದನ್ನು ಬಳಸಿ, ತಪ್ಪಿದೆ! ನಿನ್ನದಾಗಿದ್ದರಲ್ಲವೆ, ಬೇರೆಯವರು ಕಸಿಯುವುದು? ಮೊದಲೇ ನಿನ್ನದಲ್ಲ! ಕೊಟ್ಟವನು ಮತ್ತೆ ಪಡೆದರೆ ಅದು ಕಳ್ಳತನವೇ?"

ಕರ್ಣ: "ನನ್ನ ಜನ್ಮವಿಷಯ ಪ್ರಕಟನೆಯಿಂದ ನನ್ನ ಶ್ರದ್ಧೆ ಒಡೆದುದು?"

ಶ್ರೀಕೃಷ್ಣ: "ನಿನ್ನ ಶ್ರದ್ಧೆ ದುಷ್ಟನ ಬಗೆಗೆ ಇದ್ದುದರಿಂದ, ಅದನ್ನು ತಿದ್ದಲು ಯತ್ನಿಸಲಾಯಿತೇ ವಿನಾ, ಯಾರೂ ಅದನ್ನು ಒಡೆಯಲಿಲ್ಲ! ನಿನ್ನ ಪರಿವರ್ತನೆಯ ಸದವಕಾಶವನ್ನೂ ಕಳೆದುಕೊಂಡು, ತಿದ್ದ ಬಂದವರನ್ನೂ ದೂಷಿಸುವೆ ಎಂದರೆ, ದುಷ್ಟಾನ್ನದ ಪ್ರಭಾವವಲ್ಲವೆ?"

ಕರ್ಣ: "ಶಲ್ಯ ನನ್ನ ತೇಜೋವಧೆ ಮಾಡಿದ್ದು ಯಾರ ಕುತಂತ್ರದಿಂದ?"

ಶ್ರೀಕೃಷ್ಣ: "ಅಂಥ ಅಹಂಕಾರಿಯನ್ನೇ ಸಾರಥಿಯನ್ನಾಗಿ ನೀನು ಬಯಸುವ ಹಠಮಾರಿತನ ಅದಕ್ಕೆ ಹೊಣೆ. ಶಲ್ಯನ ಸ್ವಭಾವ, ಬಾಯಿ ಬಡುಕತನ ಲೋಕ ಪ್ರಸಿದ್ಧವೇ ಇತ್ತು! ನಿನ್ನದೂ ಕಮ್ಮಿ ಇರಲಿಲ್ಲ! ಎರಡೂ ಹೇಗೆ ಕೂಡಿಯಾವು ಎಂದು ಯೋಚಿಸದೆ, ಆ ಸಾರಥ್ಯದಲ್ಲೂ ನಿನ್ನ ಹಿರಿಮೆಯನ್ನು ಸಾಧಿಸಲು ಹೊರಟೆ! ಮತ್ತೆ ಅಹಂಕಾರ! ಎಷ್ಟು ಸಲ ಹೇಳಬೇಕು?"

ಕರ್ಣ: "ನಿಸ್ಸಹಾಯಕನಾದಾಗ, ರಥಚಕ್ರ ಕೆಸರಲ್ಲಿ ಹೂತಾಗ, ವೇಳೆ ಕೊಡದೆ ನನ್ನನ್ನು ಕೊಲ್ಲಿಸಿದೆಯಲ್ಲ?"

ಶ್ರೀಕೃಷ್ಣ: "ನನ್ನನ್ನು ಮೂರ್ಖನೆಂದು ಭಾವಿಸಿ ಕೇಳಿದಂತಿದೆ, ಈ ಪ್ರಶ್ನೆ! ಅಯ್ಯಾ ಬೃಹಸ್ಪತಿಯೇ! ಜಗತ್ತು ಈಶ್ವರನ ಪರವರ್ತಿಯಾಗಿ ನಡೆಯುವುದೇ ಹೊರತು, ಪ್ರತಿಯೊಬ್ಬ ತಲೆತಿರುಕನ ರೀತಿಯಲ್ಲೂ ಅದು ನಡೆದಿದ್ದರೆ ಏನಾಗಬೇಕಿತ್ತು? ಅವತಾರಿ ನಾನೋ, ನೀನೋ? ಯಾರ ಪ್ರಯೋಜನ ಪ್ರಧಾನ? ಭೂಭಾರವನ್ನು ಇಳಿಸಲು ನಾನು ಉದ್ದೇಶಿಸಿದೆ! ಆ ಭಾರವನ್ನೇ ಬೆಳೆಸಲು ನೀನು ಯತ್ನಿಸಿದೆ!! ನಿನ್ನ ಉದ್ದೇಶ್ಯವನ್ನು ನನ್ನದಕ್ಕೆ ಅಧೀನವಾಗಿಸುವ ಬದಲು ನನ್ನ ವಿರುದ್ಧ ಪಕ್ಷವನ್ನು ಹಿಡಿದೆ! ಬೆಳೆಸಿದೆ! ನಾನು ಸುಮ್ಮನೆ ಕೂಡಬೇಕಿತ್ತೆ? ತಂತ್ರ ಮಾಡುವುದು ಕುತಂತ್ರಿಗಳ ಹಕ್ಕಾದರೆ, ಈಶ್ವರನಿಗೆ ಲೋಕತಂತ್ರದ ಹಕ್ಕಿಲ್ಲವೆ?.... ಹೇಳು, ಕರ್ಣ! ತಲೆ ತಗ್ಗಿಸಿ ನಿಲ್ಲಬೇಡ!!... ಪಾಂಡವರನ್ನು ಅರಗಿನಮನೆಯಲ್ಲಿ ಸಜೀವವಾಗಿ ಸುಡಿಸಲು ದುರ್ಯೋಧನನಿಗೆ ಬೋಧಿಸಿದವರಾರು? ದುರ್ದ್ಯೂತದಲ್ಲಿ ನಿನ್ನ ಪಾಲು ಏನಿತ್ತು? ದ್ರೌಪದಿಯ ಸೀರೆ ಸುಲಿಸೆಂದು ಸಭೆಯಲ್ಲಿ ಹೇಳಿದವರಾರು?.... ಇದೂ ಬಿಡು! ಅಭಿಮನ್ಯುವನ್ನು ಹಿಂದಿನಿಂದ ಬಂದು ಹೊಡೆದವರಾರು?... ಘೋಷ ಯಾತ್ರೆಯ ದುರ್ಬೋಧೆಯನ್ನು ದುರ್ಯೋಧನನಿಗಿತ್ತವರಾರು? ವಿರಾಟ ನಗರದ ಯುದ್ಧದಲ್ಲಿ ಊರಿಗೆ ಮೊದಲು ಓಡಿದ ವೀರನಾರು? ಮಾತು ಮಾತಿಗೆ ಬ್ರಾಹ್ಮಣರನ್ನು ಬೈಯ್ಯುತ್ತಾ, ದ್ರೋಣಾಶ್ವತ್ಥಾಮರನ್ನು ಎದುರೆದುರೇ ಬೈಯುತ್ತಾ, ದುರ್ಯೋಧನನೆದುರೇ ಹಾಗೆ ಮಾಡುತ್ತಾ ನೀನೆಷ್ಟು ದಾನ ಮಾಡಿದರೇನು? ಧರ್ಮ ಮಾಡಿದರೇನು? ಬ್ರಾಹ್ಮಣ ಪ್ರೇಮದ ನಾಟಕ ಏಕೆ? ಯಾರಿಗೆ ಈ ವಂಚನೆ? ದುರ್ಯೋಧನ ನಂಬಿದ್ದ ಭೀಷ್ಮ ದ್ರೋಣರನ್ನು ಎದುರೆದುರೇ ಬೈಯ್ಯುತ್ತಿದ್ದ ನೀನು ಎಂಥ ಮಿತ್ರಪ್ರೇಮಿ? ಎಂಥ ಆತ್ಮವಂಚನೆ ಇದು? ಭೀಷ್ಮ ಬದುಕಿರುವ ತನಕ ಬಿಲ್ಲೆತ್ತದೆ, ಹಾಗೆ ಪ್ರತಿಜ್ಞೆಗೈದ ನೀನು, ಎಂಥ ಕೃತಘ್ನ!! ಇದಕ್ಕೆಲ್ಲ ನನ್ನ ತಂತ್ರ ಕಾರಣವಾಯಿತೆ? ಋಣಭ್ರಷ್ಟನಾಗಿಯೇ ಕಾಲಕಳೆದು ಅದಕ್ಕೆ ಬೇರೆಯವರ ಹೆಗಲ ಮೇಲೆ ಏಕೆ ಭಾರ ಕೂರಿಸುವೆ?.... ಇನ್ನೂ ಹೇಳಲೇ?...."

ಕರ್ಣ: "(ದೈನ್ಯತೆಯಿಂದ ಶ್ರೀಕೃಷ್ಣನ ಮುಖ ನೋಡುತ್ತಾನೆ ಕಂಗಳಲ್ಲಿ ನೀರು ಮಿಡಿಯುತ್ತದೆ)"

ಶ್ರೀಕೃಷ್ಣ: "ನೀನೇ ದೊರೆಯಾಗಿ ಉಭಯಕುಲದ ಋಣವನ್ನು ತೀರಿಸಿ, ನಿನ್ನ 'ಮಿತ್ರ' ನನ್ನೂ ಉಳಿಸುವ ಸದಾವಕಾಶವನ್ನೂ ಒಮ್ಮೆ-ಒಮ್ಮೆ ಮಾತ್ರ-ನಿನಗಿತ್ತೆ! ಉಪಯೋಗಿಸಿದಯಾ? ಇದೂ ನನ್ನ 'ಕು'ತಂತ್ರ ಎಂಬ ಭ್ರಾಂತಿಯಿಂದ ಅದನ್ನು ನೀಗಿಕೊಂಡೆ! ಅಯ್ಯೋ! ಮಿತ್ರನಾಶಕ್ಕೆ ಬೇಕಾದುದನ್ನೆಲ್ಲ ಮಾಡಿ, ಮತ್ತೆ ಕೃತಜ್ಞತೆಯ ಮಾತಾಡುವೆಯಾ?"

ಕರ್ಣ: "ಕೃಷ್ಣಪ್ರಭು! ಅದು ಸಮಯ ಸಾಧಕತನವೆಂದು ಒಪ್ಪಲಿಲ್ಲ!"

ಶ್ರೀಕೃಷ್ಣ: "ಸ್ವಾರ್ಥವಿದ್ದಲ್ಲಿ ಸಮಯ ಸಾಧಕತೆ! ಅದಿಲ್ಲದೆ, ನನ್ನ ಮಾತಿಗೆ ಬೆಲೆ ಕೊಟ್ಟಿದ್ದರೆ ಹಾಗಾರು ಹೇಳುತ್ತಿದ್ದರು"

ಕರ್ಣ: "ನನ್ನ ಮನ ಒಪ್ಪಲಿಲ್ಲ... ದುರ್ಯೋಧನನ ಕೈಬಿಟ್ಟಿದ್ದರೆ!...."

ಶ್ರೀಕೃಷ್ಣ: "ದುರ್ಯೋಧನನ ಕೈಬಿಟ್ಟಿದ್ದರೆ, ಅವನೂ ನೀನೂ ಉಳಿಯುತ್ತಿದ್ದಿರೇನೋ! ಮುಳುಗುವವನು ಬೇರೆಯವನನ್ನೂ ತಬ್ಬಿಕೊಂಡು ಮುಳುಗಿದಂತಾಯ್ತು! ನಿನ್ನ ಮೌಲ್ಯಗಳ ಶ್ರೇಣಿಯೇ ತಲೆಗೆಳಗಾದುದಕ್ಕೆ ಇದೆಲ್ಲ ಸಾಕ್ಷಿ!.... ಇಷ್ಟರ ಮೇಲೆ ನೀನಾಡಿದ ಆ ಒಂದು ಮಾತಿಗೆ ನಿನ್ನನ್ನೆಂದೂ ಕ್ಷಮಿಸಲಾರೆ!"

ಕರ್ಣ: "ಯಾವ ಮಾತು, ಪ್ರಭು?"

ಶ್ರೀಕೃಷ್ಣ: "ನೆನೆದುಕೋ!... ನನಗೆ ಸಿಟ್ಟು ತರಿಸಿದ, ನಿನ್ನ ದುರಹಂಕಾರದ ಆ ಮಾತು!

**ಧರ್ಮಪ್ರಧಾನಂ ಕಿಲ ಪಾತಿ ಧರ್ಮ**
**ಇತ್ಯಬ್ರುವನ್ ಧರ್ಮವಿದಃ *ಸದೈವ!***

*ದಯಂ ಚ ಧರ್ಮೇ ಪ್ರಯತಾಮ ನಿತ್ಯಂ*
*ಚರ್ತುಂ ಯಥಾಶಕ್ತಿ, ಯಥಾ ಶ್ರುತಂ ಚ॥*
*ನ ಚಾಪಿ ನಿಘ್ನಾತಿ ನಪಾತಿ ಭಕ್ತಾನ್*
*ಮನ್ಯೇ ನ ನಿತ್ಯಂ ಪರಿಪಾತಿ ಧರ್ಮಃ॥*

ಇದು ಧರ್ಮದ ಅಣಕ! ಧರ್ಮವಿದರ ಅಣಕಾಟ!! ನೀನು ಸದಾ ಧರ್ಮದಲ್ಲಿರುವವನೆಂದೂ, ನಿನ್ನನ್ನು ಆ ಧರ್ಮ ಈಗ ಕಾಪಾಡಲಿಲ್ಲವೆಂದೂ, ಧರ್ಮವಿದರು ಅದು ಕಾಪಾಡುತ್ತದೆಂದು ಹೇಳಿದ್ದು ಸುಳ್ಳಾಯಿತೆಂದೂ, ಹಳಿದೆಯಲ್ಲ! ಎಂಥ ಆತ್ಮವಂಚನೆ, ಕರ್ಣ!! ಒಬ್ಬ ದುರ್ಯೋಧನನ ಆಶ್ರಯದಿಂದ ನಿನ್ನ ಇತರ ಆಚರಣೆಯೆಲ್ಲ ಮಿಥ್ಯಾಚಾರವೆಂದು ನಿನಗೆ ಅನ್ನಿಸಲಿಲ್ಲ. ಅಲ್ಲವೆ? ಧರ್ಮದಲ್ಲಿದ್ದವನು ನೀನೇ ಆದರೆ, ಉಳಿದವರೆಲ್ಲ ಅಧರ್ಮಿಗಳಾಗಲಾರರೆ? ಇದು ದೈವನಿಂದೆ ಆಗದೆ? ನಿನ್ನ ಧರ್ಮ ಪ್ರಜ್ಞೆ ಇಷ್ಟೇಯೆ? ನಿನ್ನ ಅಧರ್ಮಾಚರಣೆಗಳನ್ನೆಲ್ಲ ಪಟ್ಟಿ ಮಾಡಿ ನಾನು ಮೂದಲಿಸಿದಾಗ ನೀನೇಕೆ ಉತ್ತರಿಸಲಿಲ್ಲ? ಅಭಿಮನ್ಯುವನ್ನು ನೀನು ಕೊಂದ ರೀತಿ, ದ್ರೌಪದಿಯ ಮಾನ ಭಂಗಯತ್ನಕ್ಕೆ ಮೂಲ ಪ್ರಚೋದಕನಾದದ್ದು, ಇವನ್ನು ಹೇಗೆ ಕ್ಷಮಿಸಲಿ? ಅಯ್ಯಾ ಧಾರ್ಮಿಕನೇ, ಉತ್ತರಿಸುವೆಯಾ? ಅರ್ಜುನ ನಿನ್ನನ್ನು ಕೊಂದಾಗ ಆಡಿದ ವಿನಯದ ಪ್ರತಿಜ್ಞೆ ನೆನಪಿದೆಯೇ? ಪಾಪ! ಮರೆತಿರಬೇಕು!! ನೆನಪಿಸಲೇ?

*ತಪೋಸ್ತಿ ತಪ್ತಂ ಗುರವಶ್ಚ ತೋಷಿತಾ*
*ಮಯಾ ಯದೀಷ್ಟಂ ಸುಹೃದಾಂ ಶ್ರುತಂ ತಥಾ।*
*ಅನೇನ ಸತ್ಯೇನ ನಿಹನ್ತ್ವಯಂ ಶರಃ*
*ಸುಸಂಹಿತಃ ಕರ್ಣಮರಿಂ ಮಯೋರ್ಜಿತಂ॥*

'ನನಗೆ ಗುರುಗಳನ್ನು ತೃಪ್ತಿಪಡಿಸಿದ ಫಲವಿದ್ದರೆ, ತಪಸ್ಸನ್ನು ನಾನು ಮಾಡಿದ್ದರೆ, ಧರ್ಮಾಚರಣೆಯೂ ಅಧ್ಯಯನದ ಫಲವೂ ಸತ್ಯವೂ ನನಗಿದ್ದರೆ ಈ ಬಾಣ ಕರ್ಣನನ್ನು ಕೊಲ್ಲಲಿ, ಎಂದನಲ್ಲ! ಎಂಥ ವಿನಯ! ಕರ್ಣ! ನೀನು ಅವನನ್ನು ಈ ವಿನಯದಲ್ಲೂ, ಧರ್ಮದಲ್ಲೂ ಸೋಲಿಸುವ ಸದವಕಾಶವನ್ನು ಕಳೆದುಕೊಂಡೆ!

ವೈದಿಕ ಮಾರ್ಗವನ್ನು ಪುನಃ ಸ್ಥಾಪಿಸುವ ನನ್ನ ಮಹಾಯತ್ನದಲ್ಲಿ ಮಹಾವಿಘ್ನ ರೂಪನಾಗಿ ಮಹಾಭಾರತದಲ್ಲಿ ಎಂದೆಂದೂ ಉಳಿದೆ! ಇದೆಲ್ಲ ಯಾರ ಕರ್ಮ?.... ಯಾರ ಕರ್ಮ?.... ಯಾರ ಕರ್ಮ?" ಕರ್ಣ ಲಜ್ಜಿತನಾಗಿ ನಿಂತ!

"ಲೋಕಕ್ಕೆ ಬೆಳಕು ನೀಡಬೇಕಾದ ನೀನು ಈ ಕತ್ತಲೆಯನ್ನೇ ಉಗುಳಿದೆಯೆಂದರೆ ಭವಿಷ್ಯದ ಜನ ನಂಬುವರೆ?... ನೀನು ನನ್ನ ಅವತಾರವನ್ನು ವಿಫಲಮಾಡಿದೆ!... ನಿನ್ನನ್ನೂ ವಿಫಲವಾಗಿಸಿದೆ!".

ಶ್ರೀಕೃಷ್ಣ ಗದ್ಗದಿತನಾಗುತ್ತಾನೆ!

ಕರ್ಣ ಮರೆಯಾಗುತ್ತಾನೆ!...

ರುಕ್ಮಿಣೀ ಮೊದಲಾದ ರಾಣೀವಾಸದವರ ರೋದನ ಗಗನವನ್ನು ಮುಟ್ಟಿರುತ್ತದೆ. ಬ್ರಾಹ್ಮಣರು ಅವರನ್ನು ಸ್ಮಶಾನಕ್ಕೆ ಬಾರದಂತೆ ತಡೆಯುವಲ್ಲಿ ಯಶಸ್ವಿಯಾಗಿದ್ದಾರೆ!

ಮಧ್ಯಾಹ್ನದ ಸೂರ್ಯ ಮೇಲೇರುತ್ತಿದ್ದಾನೆ! ಹಸಿವು, ಬಾಯಾರಿಕೆಗಳಿಗಿಂತ, ನಿರಾಸೆಯ ಭಾವ ಶ್ರೀಕೃಷ್ಣನನ್ನು ಹಣ್ಣಾಗಿರಿಸುತ್ತಿದೆ!

"ಬಲಭದ್ರ! ನನ್ನ ಕಷ್ಟಸುಖಗಳಲ್ಲಿ ಎಂದೆಂದೂ ಭಾಗಿಯಾಗಿ, ನನ್ನ ಮನವನ್ನು ಹಗುರವಾಗಿಸುತ್ತಿದ್ದೆ! ಅಣ್ಣಾ!.... ಮುಂಚೆ ಹೊರಟೆಯಾ?....

"ಅರ್ಜುನ! ಬೇಗಬಾರದೇ ಎಷ್ಟು ನಿಧಾನಿಸುವೆ?.... ನನ್ನ ವೇಳೆ ಬರುತ್ತಿದೆ!... ದಾರುಕ ಎಲ್ಲಿಯ ತನಕ ಹೋಗಿದ್ದಾನೋ?... ಎಂದಿಗೆ ಅರ್ಜುನನನ್ನು ಕರೆತಂದಾನೋ!"

ಶ್ರೀಕೃಷ್ಣ ಆಸನವನ್ನು ಬದಲಿ ಮಾಡಿ, ಎಡಗಾಲ ಮೇಲೆ ಬಲಗಾಲನ್ನು ಹಾಕಿಕೊಂಡು ದೇಹಾಯಾಸವನ್ನು ಪರಿಹರಿಸಿಕೊಳ್ಳಲು ಯತ್ನಿಸಿದ!

ಬಲಗಾಲ ಹಸ್ತದ ಕೊನೆಯ ಹೆಬ್ಬೆರಳು ಒಂದು ಪಕ್ಷಿಯ ತಲೆಯಂತೆಯೂ, ಪಾದದ ಉಳಿದ ಭಾಗ ಒಂದು ಪಕ್ಷಿಯ ದೇಹಾಕೃತಿಯಂತೆಯೂ ಕಾಣಲಾರಂಭಿಸಿತು!

ದೂರದಿಂದ ಬೇಡನೊಬ್ಬನ ತೀಕ್ಷ್ಣಬಾಣವೊಂದು ಬಂದು ಆ ಪಾದವನ್ನು ಸೀಳಿತು! ರಕ್ತ ಪ್ರವಾಹವೇ ಹರಿಯಿತು! ದಿಢೀರನೆ ಆಕಾಶವೆಲ್ಲ ಅನಿರೀಕ್ಷಿತವಾಗಿ ಮೇಘಾಚ್ಛಾದಿತವಾದಂತೆ ಕಪ್ಪಾಯಿತು! ರುಕ್ಮಿಣಿ ಸತ್ಯಭಾಮಾದಿಗಳು ಚೀರಿದರು! ಒಂದು ಯುಗವೇ ಮುಗಿಯಿತು!

* * * * *

## ೧೨. ಶ್ರೀಕೃಷ್ಣ "ಅಮ್ಮಾ!" ಎಂದ!

ವೇದ ಆ ದಿವ್ಯಪಾದವನ್ನು 'ಚರಣಂ ಪವಿತ್ರಂ ವಿತತಂ ಪುರಾಣಂ' ಎಂದಿತ್ತು! ಆ ಪಾದ ಭಾರತ ದೇಶವನ್ನೆಲ್ಲ ಸುತ್ತಿ ಬಂದಿತ್ತು! ಭೂಮ್ಯಾಕಾಶವನ್ನೆಲ್ಲ ಅಳೆದಿತ್ತು! ಪತಿತರನ್ನು ಪಾವನರನ್ನಾಗಿಸಿತ್ತು!

*ಯಾದ್ವೃಂದಾವನಮಂಡಿತಂ ದಧಿರವೈರ್ಯತ್ತಾಂಡವಂ ಶಿಕ್ಷಿತಂ*
*ಯಲ್ಲಕ್ಷ್ಮೀಕರ ಸೌಖ್ಯಸಾಕ್ಷಿ ಜಲಜಪುಸ್ಪರ್ಧಮಾನರ್ಧಿ ಯತ್*
*ಯದ್ಭಕ್ತೇಷ್ವಜಲಸ್ಥಲಜ್ಞಮಪಿಯದ್ದೂತ್ಯ ಪ್ರಸಂಗೋತ್ಸುಕಂ*
*ತದ್ವಿಷ್ಣೋಃ ಪರಮಂ ಪದಂ ವಹತು ನಃ ಶ್ರೀರಂಗಿಣೋ ಮಂಗಳಂ॥*

ಎಂದು ಭಕ್ತರೊಬ್ಬರು ಅದನ್ನು ಕೊಂಡಾಡಿದ್ದರು! "ಬೃಂದಾವನದ ಒಂದೊಂದು ಅಂಗುಲದಲ್ಲೂ ನಡೆದು ಆ ಪಾದ ಪ್ರಚಂಡ ಪಂಡಿತವಾಗಿ, ಅನುಭವಶಾಲಿಯಾಗಿತ್ತು! ಯಶೋದೆ ಮೊಸರು ಕಡೆಯುವಾಗ, ಬೆಣ್ಣೆ ಬೇಡುತ್ತಾ, ಆ ಕಡೆಯುವ ತಾಳಕ್ಕೆ ಸರಿಯಾಗಿ ಕುಣಿಯುವ ತಾಂಡವ ನೃತ್ಯವನ್ನು ಅಭ್ಯಾಸ ಮಾಡಿತ್ತು! ಲಕ್ಷ್ಮೀದೇವಿಯ ಹಸ್ತದ ಸೌಖ್ಯ ಸ್ಪರ್ಶವನ್ನನುಭವಿಸಿ ಆ ಕೋಮಲತೆಗೆ ಸಾಕ್ಷಿಯಾಗಿರುತ್ತಾ, ಪದ್ಮಪುಷ್ಪದೊಡನೆ ಕಾಂತಿ, ಮಾರ್ದವಾದಿ ಗುಣಗಳಲ್ಲಿ ಸ್ಪರ್ಧಿಸುತ್ತಿತ್ತು! ಭಕ್ತರಿಗೆ ಆಪತ್ತು ಬಂದಲ್ಲಿ, ಬಂದಾಗ, ಸ್ಥಲ-ಜಲ ವ್ಯತ್ಯಾಸ ಕಾಣದೆ ಧಾವಿಸಿ ಅವರ ಸಹಾಯಕ್ಕಾಗಿ ಓಡಿ ಬರುತ್ತಿತ್ತು! ಧರ್ಮಪುತ್ರನಿಗಾಗಿ ದೂತ್ಯಕ್ಕೆ ಸಹ ಉತ್ಸುಕವಾಗಿ ಉಪಪ್ಲವ್ಯದಿಂದ ಹಸ್ತಿನಾಪತಿಗೆ ನಡೆದು ಬಂದಿತ್ತು! ಅಂಥ ಶ್ರೀರಂಗನ ದಿವ್ಯಪಾದವು ಮಂಗಳವಾದ ವೈಕುಂಠಲೋಕಕ್ಕೆ ನಮ್ಮನ್ನು ಕರೆದೊಯ್ಯಲಿ" ಎಂದು ಭಾವಪೂರ್ಣವಾಗಿ ಹಾಡಿದ್ದರು!

ತನ್ನ ಹಿಂದಿನ ಅವತಾರದಲ್ಲಿ ಇದೇ ಅವತಾರಿಯು ದಂಡಕಾರಣ್ಯದಲ್ಲೆಲ್ಲ ಬರಿಗಾಲಲ್ಲಿ ನಡೆದಾಡಿ, ಮುಳ್ಳು-ಕಲ್ಲು ಚುಚ್ಚಿ, ರಕ್ತ ಸೋರುತ್ತಿದ್ದ ಆ ಪಾದವನ್ನು, ಆ ಅವತಾರ ಸಮಾಪ್ತಿ ಕಾಲದಲ್ಲಿ, ತನ್ನನ್ನು ನೆನೆವರ ಮನದಲ್ಲಿಟ್ಟು, ತನ್ನ ಪರಂಜ್ಯೋತಿಗೆ ದಯಮಾಡಿಸಿದನೆಂದು ಮಹರ್ಷಿಯೂ ವರ್ಣಿಸಿದ!

*ಸ್ಮರತಾಂ ಹೃದಿ ವಿನ್ಯಸ್ಯ ವಿದ್ಧಂ ದಂಡಕ ಕಂಟಕೈಃ*
*ಸ್ವಪಾದಪಲ್ಲವಂ ರಾಮಃ ಆತ್ಮಜ್ಯೋತಿರಗಾತ್ ಪ್ರಭುಃ*

ಇಂದೂ ಅಂಥದೇ ಆಗಿತ್ತು! ಅದೇ ಶ್ರೀಪಾದವನ್ನು ಒಬ್ಬ ಮುಗ್ಧ ಬೇಡರವನು ಒಂದು ಬಾಣದ ತುದಿಯಿಂದ, ಅರಿಯದೆ, ಭೇದಿಸಿದ್ದ! ಅದರ ತುದಿಯಲ್ಲಿ, ದೂರ್ವಾಸ ಶಾಪದಿಂದ ಹುಟ್ಟಿದ್ದ

ಕಬ್ಬಿಣದ ಒನಕೆಯ ಉಳಿದ ಚೂಪಾದ ಅಲಗಿನ ಚೂರನ್ನು ಸೇರಿಸಿಬಿಟ್ಟಿದ್ದ! ಗಾಂಧಾರಿಯ ಶಾಪವೂ, ಮುನಿಯ ಶಾಪವೂ ಹೀಗೆ ಒಗ್ಗೂಡಿ ಆ ಪಾದಕ್ಕೆ ಅಪಚಾರ ಮಾಡಿದ್ದವು!

ಬಾಣ ಹೊಡೆದ ವ್ಯಾಧ, ಆಸೆಯಿಂದ "ಪಕ್ಷಿಯನ್ನು" ಹಿಡಿಯಲು ಓಡೋಡಿ ಬಂದ! ಪೀತಾಂಬರಧಾರಿಯೂ, ನೀಲಮೇಘ ಶ್ಯಾಮನೂ, ಮುಡಿಯಲ್ಲಿ ಮಯೂರ ಪಿಂಛಾಲಂಕೃತನೂ, ಮೋಹಕವಾದ ರೀತಿಯಲ್ಲಿ ಕಾಲಮೇಲೆ ಕಾಲುಹಾಕಿಕೊಂಡು ಕುಳಿತವನೂ, ಬಾಡದ ಮುಖಕಾಂತಿಯವನೂ ಆದ ಆ ವರದನನ್ನೂ, ರಕ್ತ ಸೋರುವ ಅವನ ಪಾದವನ್ನೂ ಕಂಡು "ಅಯ್ಯೋ! ಪ್ರಭು! ನಾನೆಂಥ ಘೋರ ಅಪರಾಧ ಮಾಡಿಬಿಟ್ಟೆ!! ನನಗೇನು ಗತಿ! ನನ್ನನ್ನು ಕ್ಷಮಿಸು!! ಎನ್ನುತ್ತಾ ಆ ಪ್ರಭುವಿನ ಬಳಿ ನೆಲದಲ್ಲಿ ಬಿದ್ದು ಒದ್ದಾಡುತ್ತಾ, ಹೊರಳಿ ಹೊರಳಿ, ತನ್ನ ಒಡಲ ಸಂಕಟವನ್ನು ತೋಡಿಕೊಂಡ.

ಶ್ರೀಕೃಷ್ಣ ಮೇಲೇಳಲಿಲ್ಲ! ಮಂದಸ್ಮಿತನಾಗಿಯೇ ಅವನನ್ನು ನೋಡಿ "ನೀನಾರಯ್ಯ! ನಿನ್ನ ಹೆಸರೇನು?" ಎಂದು ಪ್ರಶ್ನಿಸಿದ.

ಆ ಮುಗ್ಧ ವ್ಯಾಧನು "ನನ್ನ ಹೆಸರು ಜರಾ" ಎಂದ!

ಶ್ರೀಕೃಷ್ಣನಿಗೆ ಆ ಅವಸ್ಥೆಯಲ್ಲೂ ಮಂದಹಾಸ ಮೂಡಿತು!

"ಓ! ನಾನು 'ಮುಷ್ಟಿ'ನಿಂದ ಈ ಶರೀರ ಬಿಡುವಂತಿರಲಿಲ್ಲ! ಮನುಷ್ಯನಾಗಿ ಅವತರಿಸಿದ ಮೇಲೆ ಆ 'ಮುಷ್ಟಿ'ನ ಸಂಯೋಗವಿಲ್ಲದೆ ಶರೀರ ಬಿಡುವಂತೆಯೂ ಇರಲಿಲ್ಲ! ಅದು ನಿನ್ನ ಹೆಸರಿನ ರೂಪದಲ್ಲಿ ತನ್ನ ನಿಯಮವನ್ನು ಪೂರೈಸಿಕೊಂಡು, ನನ್ನನ್ನು ಅಪವಾದ ದೂರನನ್ನಾಗಿ ಮಾಡಿತು!" ಎನ್ನುತ್ತಾ ವ್ಯಾಧನನ್ನು ಕೃಪೆಯಿಂದ ನೋಡಿದ!

ವ್ಯಾಧ ಯಾವ ಶಿಕ್ಷೆಗೂ, ಶಾಪಕ್ಕೂ ತಯಾರಾಗಿ ನಿಂತಿರುವಂತೆ ತೋರಿದ! "ಪ್ರಭು! ನೀವೆಂದು ತಿಳಿಯದೆ, ಪಕ್ಷಿ ಎಂಬ ಭ್ರಾಂತಿಯಿಂದ, ಅಜ್ಞಾನದಿಂದ ಈ ಅಕಾರ್ಯ ಮಾಡಿಬಿಟ್ಟೆ!" ಎನ್ನುತ್ತಾ ಅಳಲಾರಂಭಿಸಿದ.

ಶ್ರೀಕೃಷ್ಣ ಅವನಿಗೆ ದಿವ್ಯಜ್ಞಾನ ಅನುಗ್ರಹಿಸಿದ! ಬೇಡ, ಕವಿಯಂತೆ ಸ್ತುತಿಸಲಾರಂಭಿಸಿದ. "ಪ್ರಭು! ಯಾವನನ್ನು ಸದಾ ಸ್ಮರಿಸುತ್ತಿದ್ದರೆ ಅಜ್ಞಾನವೆಲ್ಲ ನಾಶವಾಗುವುದೆಂದು ಹೇಳುವರೋ, ಆ ವಿಷ್ಣುವಾದ ನಿನಗೆ ನನ್ನಿಂದ ಈ ಅಪಚಾರ ನಡೆದುಹೋಯಿತು! ಬ್ರಹ್ಮರುದ್ರಾದಿಗಳಿಗೂ ನಿನ್ನ ಮಾಯೆ ಅರ್ಥವಾಗದೆಂದಾಗ, ಒಬ್ಬ ಯಃಕಶ್ಚಿತ್ ಬೇಡನಿಗೆ ಅದು ಹೇಗೆ ತಿಳಿಯಬೇಕು? ಇನ್ನು ಎಂದೆಂದೂ ಈ ಅಪರಾಧವೆಸಗದಂತೆ ನನ್ನನ್ನು ಶಾಶ್ವತವಾಗಿಯೇ ನಿಗ್ರಹಿಸು"

ಶ್ರೀಕೃಷ್ಣ ಕೇಳಿದ: "ಈಗ ಹೇಳು, ನೀನಾರು?"

ವ್ಯಾಧ ಉತ್ತರಿಸಲಿಲ್ಲ! ಅವನ ಕಣ್ಣಿಗೆ ಬೇರೇನೋ ಗೋಚರಿಸಲಾರಂಭಿಸಿತ್ತು!...ಅದೊಂದು ದಟ್ಟಾರಣ್ಯ! ಅಲ್ಲಿ ತಾನು ವಾನರ ರೂಪದಲ್ಲಿ ಕೆಳಗೆ ಬಿದ್ದಿದ್ದಾನೆ! ಅವನ ಎದೆಯಲ್ಲಿ ಚೂಪಾದ ಬಾಣವೊಂದು ನೆಟ್ಟಿದೆ. ಹೃದಯವನ್ನು ಹೊಕ್ಕ ಅದರ ಹೊರಭಾಗದಲ್ಲಿ 'ಶ್ರೀರಾಮ' ಎಂಬ ಮುದ್ದಾದ ಅಕ್ಷರಗಳಿವೆ! ಎದುರಿಗೆ ಕೋದಂಡಪಾಣಿಯಾದ ಸುಂದರ ಮಹಾಪುರುಷನೋರ್ವ ಬಿಲ್ಲಿನ ಹೆದೆಯನ್ನು ಕಳಚಿ, ಮೋಹಕ ಶೈಲಿಯಲ್ಲಿ ಅದನ್ನೂರಿಕೊಂಡು ನಿಂತಿದ್ದಾನೆ! ಎಡಗಡೆ ಒಬ್ಬ ವಾನರಸ್ತ್ರೀ ನಿಂತಿದ್ದಾಳೆ... ಅವಳು ಆ ವಾನರನ ಪತ್ನಿ ಇರಬೇಕು!... ಪತಿಯ ಹಸ್ತಕನನ್ನು ಬೈಯ್ಯ ಬಂದವಳು 'ವಿಶುದ್ಧ ಸತ್ತ್ವ'ಳಾಗಿ ಅವನನ್ನು ಅಪ್ರಮೇಯನೆಂದೂ, ಜಿತೇಂದ್ರಿಯನೆಂದೂ ಕೊಂಡಾಡುತ್ತಾಳೆ. "ಅಸ್ಥಾನದಲ್ಲಿ ಇವನನ್ನು ಕೊಂದು ನಿನಗೆ ಇದು ತಪ್ಪೆನಿಸುವುದಿಲ್ಲವೇ?"

*ಅಸ್ಥಾನೇ ವಾಲಿನಂ ಹತ್ವಾ ಯುದ್ಧಮಾನಂ ಪರೇಣ ಚ।*
*ನ ಸಂತಪ್ಯತಿ ಕಾಕುತ್ಸ್ಥಃ ಕೃತ್ವಾ ಕರ್ಮ ಸುಗರ್ಹಿತಂ॥*
*(ಶ್ರೀ ರಾಮಾಯಣ, ಕಿಷ್ಕಿಂಧಾ-೨೦-೧೫)*

ಎಂದು ಆಕ್ಷೇಪಿಸಿದ ಅವಳ ಮೊದಲಿನ ಮಾತು ಅದೇ ಆಗಲೇ ಅವಳಿಗೆ ಮರೆತಿರುತ್ತದೆ! ಆ ಮಹಾಪುರುಷನ ಮೋಹನರೂಪ, ಆ ದಿವ್ಯ ಸಾನ್ನಿಧ್ಯ ಹಾಗೆ ಮಾಡಿಸುತ್ತದೆ! ವಾನರ ರೂಪದ ವೀರನ ಮೊದಲ ಮಾತುಗಳೂ ಅದೇ ಅರ್ಥದಲ್ಲಿರುತ್ತವೆ! ಆಮೇಲೆ ಅವನೂ ಕ್ಷಮೆ ಕೇಳಿಯೇ ಪ್ರಾಣ ಬಿಡುತ್ತಾನೆ.

***ಯದಯುಕ್ತಂ ಮಯಾಪೂರ್ವಂ ಪ್ರಮಾದಾದುಕ್ತಂ ಅಪ್ರಿಯಂ।***
***ತತ್ರಾಪಿ ಖಲುಮೇ ದೋಷಂ ಕರ್ತುಂನಾರ್ಹಸಿ ರಾಘವ॥ (ಅದೇ ೧೮-೪೮).***

ವ್ಯಾಧನಿಗೆ ಭ್ರಮೆಯಾಗುತ್ತದೆ!... ಆಗ ವಾನರ ರೂಪದಲ್ಲಿ ಸತ್ತ ತಾನು ಮತ್ತೆ ಇಂದ್ರ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ!... ಭ್ರಮೆ ಹೆಚ್ಚುತ್ತದೆ!...

ಶ್ರೀಕೃಷ್ಣ: "ಅಯ್ಯಾ! ಜರೆಯೇ! ನೀನಂದು ವಾಲಿಯಾಗಿದ್ದೆ! ಇಂದ್ರಾಂಶದಲ್ಲಿ ಹುಟ್ಟಿಯೂ ಉದ್ದಂಡನಾಗಿ, ಮನಬಂದಂತೆ ನಡೆದೆ! ನಿನ್ನನ್ನು ಶಿಕ್ಷಿಸಬೇಕಾಯ್ತು! ಆದರೂ ನಿನಗೂ ನಿನ್ನ ಪತ್ನಿಗೂ ಮನದಲ್ಲಿ ನನ್ನ ಮೇಲೆ ಕೋಪವಿತ್ತು! ನನ್ನ ಸಾನ್ನಿಧ್ಯದಿಂದ ಅದು ಮರೆಯಿತಾದರೂ, ಅನುಕ್ತವಾಗಿ ಸುಪ್ತವಾಗಿ ಉಳಿಯಿತು. ಆ ಶೇಷ ಉಳಿಸಬಾರದೆಂದು ನಿನಗೀ ಅವಕಾಶವಿತ್ತೆ. ಈಗ ಹಳೆಯ ಶೇಷವೇನೂ ಉಳಿಯದೆ, ನಿಜಸ್ವರೂಪಕ್ಕೆ ವಿಶುದ್ಧನಾಗಿ ಮರಳು!"....

ವ್ಯಾಧನಿಗೆ ವ್ಯಾಧಜನ್ಮ ಅಲ್ಲಿಂದಲ್ಲೇ ಕಳಚಿತು! ದಿವ್ಯವಿಮಾನಾರೂಢನಾಗಿ ಅವನ ಆತ್ಮಸ್ವರ್ಗಕ್ಕೆ ಸೇರಿತು!!

* * * * *

ಶ್ರೀಕೃಷ್ಣ ತನ್ನ ಪಾದ ನೋಡಿಕೊಂಡ! ರಕ್ತ ಪ್ರವಾಹವೇ ಅಲ್ಲಿ ಹರಿಯುತ್ತಿತ್ತು! ಕೊರಳಲ್ಲಿ ಬಾಡದ ತುಳಸೀ ಮಾಲೆಯಿಂದ ಒಂದು ದಳವನ್ನು ಕಿತ್ತು ಶ್ರೀಕೃಷ್ಣ ಆ ವ್ರಣದಲ್ಲಿಟ್ಟ. ಒಂದೇ ಒಂದು ಕ್ಷಣ ತೀವ್ರ ನೋವು ಕಾಣಿಸಿಕೊಂಡು, ಜಗದೀಶ್ವರ ಒಂದೇ ಸಲ ಮಾತ್ರ- "ಅಮ್ಮಾ!" ಎಂದು ತಾಯಿಯನ್ನು ಸ್ಮರಿಸಿ ಕರೆದ!

* * * * *

ಒಡನೆಯೇ ಮೂವರು ಸ್ತ್ರೀಯರ ಮುಖಗಳು ಎದುರು ಕಾಣಿಸಿಕೊಂಡವು! ಒಂದನೆಯದು ದೇವಕೀದೇವಿಯದು!!

"ಅಮ್ಮಾ!" ಎಂಬ ಕೂಗನ್ನು ಕೇಳಿಯೇ ದೇವಕಿ ಪುಳಕಿತಳಾದಳು! ಬಾಲಕೃಷ್ಣನೇ ಕೂಗಿ ಕರೆದಂತೆ ಭಾಸವಾಗಿ ಅವನ ಬಾಲಲೀಲೆಗಳನ್ನು ನೋಡದ ಕೊರತೆಯನ್ನೂ, ಹಾಗೆ ತಾಯಿಯೆಂದು ಕರೆಯಲ್ಪಡದ ಕೊರತೆಯನ್ನೂ ಕೊಂಚ ಮರೆತಳು! ಶ್ರೀಕೃಷ್ಣನ ಈಗಿನ ಸ್ಥಿತಿಯನ್ನು ಕಂಡು ಆ ಪುಳಕ ಹಾಗೇ ಅಡಗಿತು!

"ಕಂದಾ!" ಎಂದಳುತ್ತಾ "ಇದೇನಿದು ನಿನ್ನ ಪಾದದಲ್ಲಿ" ಎಂದು ಸಮೀಪಿಸುತ್ತಾಳೆ.

ಶ್ರೀಕೃಷ್ಣ:- "ಯಾರೋ ಭಕ್ತ, ಪಾದದಲ್ಲಿ ಒಂದು ಕೆಂಪು ದಾಸವಾಳವಿಟ್ಟು ಹೋದ! ಅದರ ಶೋಭೆ ಈ ಪಾದವನ್ನು ಹೇಗೆ ಬೆಳಗುತ್ತಿದೆಯೆಂದು ನೋಡಿದೆಯಲ್ಲ!... ನೀನಿನ್ನು ಹೊರಡು ತಾಯಿ!!... ನನ್ನ ಬಾಲಲೀಲೆಗಳನ್ನು ನೋಡದ ನೀನು ನನ್ನ ಈ ಕಡೆಯ ಲೀಲೆಯನ್ನೂ ನೋಡಬೇಡ! ನೀನು ನೋಡುವುದನ್ನು ನಾನೂ ನೋಡಲಾರೆ!!... ನೀನು ಬರೀ ನನ್ನ ಹಡೆದ ತಾಯಿ! ನನ್ನ ಆಪತ್ಕಾಲದಲ್ಲಿ ನಿನ್ನ ಜಠರದಲ್ಲಿ ಅಷ್ಟು ಜಾಗಕೊಟ್ಟು ಉಪಕರಿಸಿದವಳು! ಈ ಉಪಕಾರ ಹೇಗೆ ತೀರಿಸಲಿ, ಅಮ್ಮ! ನೀನಗೆ ಹೇಳಿ, ಇದೋ ಹೊರಟಿದ್ದೇನೆ... ಬರುತ್ತೇನೆ... ಹಿಂದೊಮ್ಮೆ ಮಹಾಪ್ರಳಯ ಕಾಲದಲ್ಲಿ ನಿಲ್ಲಲೂ ನೆಲೆಯಿಲ್ಲದ ನನಗೆ ಒಂದು ಆಲದೆಲೆ ಜಾಗಕೊಟ್ಟು ಉಪಕರಿಸಿತು! ಆಮೇಲೆ ಅಕೃತಕವಾದ ವೇದವಾಣಿಯು, ಶ್ರುತಿ ಶಿರೋಭಾಗದಲ್ಲಿ ಗೂಢವಾಗಿ ಅಡಗಿರಲು ನನಗೆ ಜಾಗಕೊಟ್ಟಿತು! ಇದೋ ಈ ಅವತಾರದಲ್ಲಿ ನೀನು ಅವಕಾಶ ಕೊಟ್ಟೆ!! ಎಂಥ ಉಪಕಾರ, ಅಮ್ಮಾ!

ವಟದಲದೇವಕೀಜಠರ ವೇದಶಿರಃ ಕಮಲಾಸ್ತನ ಶಠಕೋಪ ವಾಗ್ವಪುಷಿ... ಎಂದು ಒಬ್ಬ ಕವಿ ಹಾಡುತ್ತಾನೆ. ಲಕ್ಷ್ಮಿಯ ಎದೆಯಂತೂ ನನಗೆ ನಿತ್ಯವಾಸಸ್ಥಾನವಾಯಿತು. ಅಮ್ಮ, ನಿನ್ನನ್ನೂ, ನನ್ನ ಜನ್ಮ ಭೂಮಿಯಾದ ಮಥುರಾ ಪುರಿಯನ್ನೂ, ಅದರಲ್ಲಿ ನೀವು ಸೆರೆಯಿದ್ದು ನಾನು ಜನಿಸಿದ ಜಾಗವನ್ನೂ ಯಾವ ಯಾವ ಅವತಾರಗಳಲ್ಲೂ ನಾನು ಹೇಗೆ ಮರೆಯಲಿ, ತಾಯಿ!!

ದೇವಕೀ: "ಆ ಕೊನೆಯದೊಂದು ವಾಸಸ್ಥಾನ ಹೇಳಿದೆಯಲ್ಲ, ಅದೇನು ಮಗು?"

ಶ್ರೀಕೃಷ್ಣ: "ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ" ಎಂದು ಅರ್ಜುನನಿಗೆ ಹೇಳುವಾಗ ಒಬ್ಬ ಭಕ್ತನ ಸ್ಮರಣೆಯಾಯಿತು! 'ನನಗೆ ಎಲ್ಲವೂ-ಧಾರಕ ಪೋಷಕ ಭೋಗ್ಯಗಳೂ ಶ್ರೀಕೃಷ್ಣನೇ' ಎನ್ನುತ್ತಾ ಹುಟ್ಟಿ ಬರುವ ಅವನು ಇನ್ನೂ ಈ ಲೋಕದಲ್ಲಿ ಕಾಲಿಟ್ಟಿಲ್ಲ! ನನ್ನ ಅವತಾರ ನಾಳೆ ಬೆಳಿಗ್ಗೆ ಮುಗಿಯುತ್ತದೆಯಮ್ಮ!... ಇದಾದ ನಲವತ್ತಮೂರನೆಯ ದಿನಕ್ಕೆ ಸರಿಯಾಗಿ ಆ ಭಕ್ತ ತಾಮ್ರಪರ್ಣೀ ನದೀ ತೀರದಲ್ಲಿ ಹುಟ್ಟಿ ಬರುತ್ತಾನೆ...! ನನ್ನನ್ನು ಕಾಣದಾಗ ಅವನಿಗಿರುವಂತೆ, ಅವನನ್ನು ಕಾಣದೆ ಹೊರಡುತ್ತಿರುವ ಕೊರತೆ ನನಗೂ ಉಂಟು! ಅವನ ಮಧುರ ಮಧುಪೂರಿತ ವಾಣಿಯಾದ ಸ್ತುತಿಗಳಲ್ಲೂ ನಾನು ನಿತ್ಯವಾಸ ಮಾಡುತ್ತೇನೆಯಮ್ಮ! ಈ ಉಭಯ ಸ್ಥಿತಿಗೆ ಸಮವಾಗಿ ನಿನ್ನ ಉದರವನ್ನೂ ಗೌರವಿಸಿದ ಭಾಗ್ಯ ಹೊರತು ನಿನಗೆ ಬೇರೇನನ್ನೂ ಕೊಡದ ಕೊರತೆ ನನ್ನನ್ನು ಈ ವೇಳೆಯಲ್ಲಿ ಕಾಡುತ್ತಿದೆ! ನನ್ನ ವೈಫಲ್ಯಗಳಲ್ಲಿ ಇದೂ ಒಂದು ತಾಯಿ!... ನೀನಿನ್ನು ಹೊರಡು! ನನ್ನ ಈ ಅಂತ್ಯಲೀಲೆಯನ್ನು ನೋಡಬಾರದು... ನೀನದನ್ನು ತಾಳಲಾರೆ!!.... ತಾಳಲಾರೆ..."

ದೇವಕಿಯ ಮುಖ ಅದೃಶ್ಯವಾಗುತ್ತದೆ!!

* * * * *

ಯಶೋದಾದೇವಿಯ ಮುಖ, ಎರಡನೆಯದಾಗಿ ಕಾಣಿಸಿಕೊಳ್ಳುತ್ತದೆ!

"ಕೃಷ್ಣಾ! ನೀನು 'ಅಮ್ಮಾ' ಎಂದು ಕರೆದು ಎಷ್ಟು ದಿನವಾಗಿತ್ತೋ, ಕಂದಾ!... ಕಾಲಿಗೇನಾಗಿದೆಯೋ ಮಗೂ" ಎನ್ನುತ್ತಾ ಕಾಲನ್ನು ಸಮೀಪಿಸುತ್ತಾಳೆ!

ಶ್ರೀಕೃಷ್ಣ: "ಅಮ್ಮಾ! ಶಕಟನನ್ನು ಒದ್ದಾಗ, ಅರ್ಜುನ ವೃಕ್ಷಗಳನ್ನು ಭೇದಿಸಿದಾಗ, ಗೋಕುಲದ ಗೋಪಿಕರ ಮನೆಯ ಅಂಗಳಗಳಲ್ಲಿ ಬೆಣ್ಣೆ ಯಾಚಿಸಿ ನರ್ತನ ಮಾಡುವಾಗ, ಕಾಳಿಂಗನ ಹೆಡೆಯಲ್ಲಿ ನರ್ತಿಸುವಾಗ... ಬೃಂದಾವನದಲ್ಲಿ, ಯಮುನಾ ತೀರದಲ್ಲಿ ರಾಸಲೀಲೆ ಆಡಿದಾಗ ನನ್ನ ಪಾದ ಗಟ್ಟಿಯಾಗಿತ್ತು. ಅಮ್ಮಾ!.. ನೀನು ಉಣಿಸಿದ ಬೆಣ್ಣೆ, ಬಡಿಸಿದ ತುಪ್ಪ, ನಾನಾಗಿ ಕುಡಿದ ಹಾಲು ಮೊಸರು... ಎಲ್ಲಕ್ಕಿಂತ ನಿನ್ನ ಎದೆಹಾಲು!... ಓ!! ಆ ರುಚಿ, ಆ ಭೋಗ್ಯತೆ!... (ಶ್ರೀಕೃಷ್ಣ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳುತ್ತಾನೆ!... ಮಾತು ಗದ್ಗದಿತವಾಗುತ್ತದೆ... ಯಶೋದೆ ಹತ್ತಿರ ಬರಲು ಯತ್ನಿಸುತ್ತಾಳೆ!... ಕೃಷ್ಣಮಾಯೆ ತಡೆಯುತ್ತದೆ! ಕೃಷ್ಣದರ್ಶನಭಾಗ್ಯಮಾತ್ರವೇ ವಿನಾ ಸ್ಪರ್ಶಕ್ಕೆ ಅದು ಅವಕಾಶವೀಯದು!)... ಇವು ನನ್ನ ಪಾದಗಳನ್ನು ಅಂದು ಗಟ್ಟಿಯಾಗಿ ಇಟ್ಟಿದ್ದವು!... ತಾಯಿ! ನಾನು ನಿನ್ನನ್ನಗಲಿದ ದುರ್ಭಾಗ್ಯಶಾಲಿ!... ನನ್ನ ರಾಜಕಾರಣದ ಹೊಣೆ ನನ್ನನ್ನು ಮಥುರೆಗೆ ಮತ್ತೆ ಕರೆದೊಯ್ದಿತು!... ನಿನ್ನ ಕೈಲಿ ಬೆಣ್ಣೆ ತಿನ್ನುವ, ಉಣ್ಣುವ ಆ ಗೋಕುಲವಾಸ ಭಾಗ್ಯ ನನಗೆ ತೀರಿತು! ಆಮೇಲೆ ದೇಶವನ್ನೆಲ್ಲ ಅಲೆದಲೆದು, ದುಷ್ಟರ ಮನೆಗೂ ಅಲೆದು, ನನ್ನ ಪಾದ ಶಿಥಿಲವಾಯಿತು ತಾಯಿ! ನಾನು 'ಅಮ್ಮ' ಎಂದಾಗಲೆಲ್ಲ ಬಂದು ನೀನು ಬೆಣ್ಣೆ ತಿನ್ನಿಸುತ್ತಿದ್ದರೆ ಈ ಪಾದ ಬಳಲುತ್ತಿರಲಿಲ್ಲ, ಬಾಡುತ್ತಿರಲಿಲ್ಲ!... ಬಾಡಿ ಬಳಲಿದ ಅದಕ್ಕೆ ಒಬ್ಬ ಭಕ್ತ ಇಕೋ ಕೆಂಪು ಕಣಗಿಲೆ ಹೂಗಳ ಗುಚ್ಛವೊಂದನ್ನಿಟ್ಟು ಉಪಚರಿಸಿದ್ದಾನೆ!..."

ಯಶೋದೆ: "(ಅಳುತ್ತಾ)..." ಮಗು, ನೀನು ಸುಳ್ಳು ಹೇಳುವುದನ್ನು ಇನ್ನೂ ಬಿಟ್ಟಂತೆ ತೋರುವುದಿಲ್ಲ! ನನ್ನಾಣೆ! ನಿಜ ಹೇಳು! ಅದು ಕಣಗಿಲೆ ಹೂವಿನಂತೆ ನನಗಂತೂ ತೋರುತ್ತಿಲ್ಲ!

ಕಣ್ಣು ಮಂಜಾಗಿದೆ!... ತಾಳು, ನಿನ್ನ ತಂದೆಯನ್ನು ಕರೆಯುತ್ತೇನೆ... ಅವರಾದರೂ ನೋಡಿ ಅದೇನೆಂದು ಹೇಳಲಿ..."

ಶ್ರೀಕೃಷ್ಣ: "ಬೇಡ ತಾಯೀ! ಬೇಡ!!... ಅಪ್ಪ ಬಂದು ನೋಡಿ ಯಾತನೆ ಪಡುವುದು ಬೇಡ! ಪರಮ ಸಾತ್ವಿಕನಾದ ಆ ತಂದೆ ನನ್ನಲ್ಲಿಟ್ಟ ಪ್ರೀತಿಗೆ ಈ ಪ್ರತಿಫಲ ನಾನು ಕೊಡುವುದು ಬೇಡ... ನಾನು ಮಗುವಾಗಿದ್ದಾಗ, ಎತ್ತಲೂ ಅಸುರ ಕಾಟವಾದುದರಿಂದ, ತೊಟ್ಟಿಲ ಕೆಳಗೆ ಸಣ್ಣ ಇರುವೆ ಹಾಯ್ದರೂ ಈಟಿಯಿಂದ ಕೊಲ್ಲಲು ಸದಾ ತೊಟ್ಟಿಲ ಸಮೀಪವೇ ಆ ಈಟಿಯನ್ನಿಟ್ಟುಕೊಂಡು ಕಾವಲು ಕಾಯುತ್ತಿದ್ದ ಆ ಪ್ರೇಮಘನ ಹೃದಯ ಈಗ ಇದನ್ನು ಕಂಡು ಒಡೆಯುವುದು ಬೇಡ!... ತಾಯಿ, ನಾನು ಸುಳ್ಳು ಹೇಳಲಿಲ್ಲ!... ಹಿಂದೆ ಹೇಳಿದುದೆಲ್ಲ ಲೋಕ ರಕ್ಷಣೆಗಾಗಿಯೇ ಹೊರತು ನನ್ನ ಸ್ವಾರ್ಥಕ್ಕಾಗಿ ಅಲ್ಲ!... ನನ್ನಲ್ಲೇ ಪ್ರಾಣವಿಟ್ಟ ನೀನು ಮತ್ತೆ ದುಃಖಿಸಬಾರದೆಂದು ನಾನು ಹೇಳಿದ ಈ ಮಾತಿನಲ್ಲೂ ಸತ್ಯವಿದೆ... ಯಾವನೋ ಭಕ್ತ, ಏನೆಂದೋ ಭ್ರಮಿಸಿ ಒಂದು ಬಾಣಬಿಟ್ಟ! ಅದು ಕಣೆಗಲೇ ಹೂವಿನಷ್ಟು ಮೃದುವಾಗಿ ನನ್ನ ಪಾದಕ್ಕಂಟಿ ಕುಳಿತಿದೆ! ಅದರ ಭೋಗ್ಯತೆ ನೆನೆದು, 'ಅಮ್ಮ' ಎಂದು ಸಹಜವಾಗಿ ಅಂದೆ! ನಿನ್ನನ್ನು ನೆನೆಸಿ ಬಹುದಿನಗಳೇ ಆಗಿದ್ದವು... ಬರುತ್ತೇನೆ, ತಾಯಿ!..."

ಯಶೋದೆಗೆ ಏನೂ ತಿಳಿಯಲಿಲ್ಲ! "ಏನೋ ಇನ್ನೂ ಮರೆಮಾಚುತ್ತಿದ್ದೀಯೇ... ತಾಯಿಯಾದ ನನಗೆ ನಿಜ ಹೇಳಬಾರದೇ?" ಎನ್ನುತ್ತಾ ಅಳುತ್ತಾಳೆ!

ಶ್ರೀಕೃಷ್ಣ: "ನಿನಗೆ ವೇದಾಂತ ಅರಿಯುವ, ಅರಗಿಸಿಕೊಳ್ಳುವ ಹೃದಯಭೂಮಿಕೆ ಇಲ್ಲ ತಾಯಿ!... ಸಾಮಾನ್ಯ ಮನುಷ್ಯರಿಗೆ ಆಘಾತಕರವಾದ ಘೋರ ಸತ್ಯಗಳು ಶ್ರುತಿ ಶಿರಸ್ಸಿನಿಂದ ಹೃದಯಕ್ಕೆ ಗುರುಮುಖೇನ ಬೀಳುವಾಗ, ಆ ಹೃದಯ ಗಟ್ಟಿಯಿಲ್ಲದಿದ್ದರೆ ತೂತಾಗಿಬಿಡುತ್ತದೆ! ಅದಕ್ಕೆ ಹುಚ್ಚು ಹಿಡಿಯಬಹುದು!!... ತಿಳಿಯಿತೆ?... ತಿಳಿಯಲಿಲ್ಲ, ನೋಡು! ನಾನಾಡುವ ಮಾತಿಗೆ ಅದೇ ಸಾಕ್ಷಿ!... ನಾನೀಗ ನಿನ್ನ ಮುದ್ದು ಕೃಷ್ಣ!... ನೀನು ನನ್ನ ವಾತ್ಸಲ್ಯದ ತಾಯಿ! ಇಷ್ಟೇ ಸಂಬಂಧ ನಿನ್ನ ಬಂಧ ಬಿಡುಗಡೆಗೆ ಸಾಕು! ನಾನೆಂದಂದೂ ಯಶೋದೆಯ ಕೃಷ್ಣನೇ! ವೇದಾಂತದಲ್ಲಿ ನಾನು ನಿನಗೆ ಏನೂ ಅಲ್ಲ! ನಾನು ನಿನಗೆ ಏನೂ ಅಲ್ಲ!... ನೀನೂ ನನಗೆ ಏನೂ ಅಲ್ಲ... ಹಾಂ!... ಅಳಬೇಡ!... ನೋಡಿದೆಯಾ? ಮನಸ್ಸಿಗೆ ಎಷ್ಟೊಂದು ನೋವಾಗುತ್ತದೆ, ಈ ಮಾತು? ಈ ಹುಟ್ಟು ಸಾವಿನ ಲೋಕದಲ್ಲಿ ಎಲ್ಲಕ್ಕೂ ಒಂದು ಆದಿ, ಒಂದು ಅಂತ್ಯ ಇರಬೇಕು! ಅದು ಸೃಷ್ಟಿಕರ್ತನ ನಿಯಮ. ಆದಿ ಅಂತ್ಯವಿಲ್ಲದ ಒಂದು ತತ್ವ, ಒಂದು ಜ್ಯೋತಿ, ಈ ಆದಿ ಅಂತ್ಯವುಳ್ಳ ಲೋಕದಲ್ಲಿ ಇಳಿದು ಬರುವಾಗ, ಎರಡೂ ಕಡೆ ಒಂದೊಂದು ನಿಮಿತ್ತಗಳು ಬೇಕು! ದೇವಕೀದೇವಿ ನನ್ನ ಈ ಆದಿಯ ನಿಮಿತ್ತ; ನೀನು ಮಧ್ಯದ ನಿಮಿತ್ತ; ಈ ಕಣೆಗಲೇ ಹೂವು ಅಂತ್ಯದ ನಿಮಿತ್ತ! ವೇದಾಂತವನ್ನರಿಯಬಲ್ಲ ಧೀರರಿಗೆ, ಈ ನಿಜಮಾತು! ಆ ಧೈರ್ಯವಿಲ್ಲದವರಿಗೂ ಈ ನಿಜ ಬೇರೊಂದು ಭಾಷೆಯಲ್ಲಿ ಹೇಳಿದರೆ ತಿಳಿದು, ಅದೇ ಫಲ ಕೊಡುತ್ತದೆ!... ಇದು ಕಾರ್ಯ ಕಾರಣ ಸಂಬಂಧದ ಭೂಮಿ... ಜನ ನಿನ್ನಂತೆ ನನ್ನನ್ನು ಮಗುವನ್ನಾಗಿ, ನಿರ್ವ್ಯಾಜ್ಯ ಪ್ರೀತಿಯಿಂದ ಕಂಡರೆ ಸಾಕು! ಅದೇ ಉಪಾಸನೆ! ನಾನು ಅವರನ್ನು ನಿನ್ನಂತೆ ತಾಯಿಯನ್ನಾಗೇ ಕಾಣುತ್ತೇನೆ... "ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಂ" ಎಂದೆನಲ್ಲ! ಆ ಮಾತಿಗೆ ಇದೇ ಅರ್ಥ!

ಯಶೋದೆಗೆ ಅರ್ಥಮರ್ಥ ತಿಳಿದು, ತಿಳಿಯದ ಭಾಗದಲ್ಲಿ ಏನು ಸುಳಿದಿದೆಯೋ! ಎಂದು ಶಂಕೆ, ಭಯ, ಮೌಢ್ಯಗಳು ಆವರಿಸುತ್ತವೆ!

"ನೀನು ಎಂದೂ ನನ್ನ ಕೃಷ್ಣನಲ್ಲವೇ?" ಎಂದು ಬಿಕ್ಕಿ ಅಳುತ್ತಾ ಕೇಳುತ್ತಾಳೆ!

ಶ್ರೀಕೃಷ್ಣ: "ನಾನೆಂದದ್ದೂ ಅದನ್ನೇ! ಕಣೆಗಲೇ ಹೂವಿನ ಮರ್ಮವನ್ನು ಮಾತ್ರ ಕೇಳಬೇಡ!... ಅದನ್ನರಿತು ಜೀರ್ಣಿಸಿಕೊಳ್ಳಲು ನಿನಗೆ ಶಕ್ತಿಯಿಲ್ಲ, ತಾಯಿ!"

ಯಶೋದೆ: "ಬಲರಾಮನೆಲ್ಲಿ, ಮಗು?... ಇಲ್ಲೇಕೆ ಕುಳಿತಿರುವೆ?... ನಿನ್ನ ಸುತ್ತ ಗೆಳೆಯರೇಕಿಲ್ಲ?"

ಶ್ರೀಕೃಷ್ಣ: "ಮತ್ತೆ ಆ ತಿಳಿಯಲಾಗದ ಕಣಗಲೇ ಹೂವಿನ ರಹಸ್ಯವನ್ನೇ ಕೇಳುತ್ತಿರುವೆ, ಅಮ್ಮ!... ಹೇಗೆ ಹೇಳ ?... ರಾಮ ನನಗಿಂತ ಮೊದಲೇ ಸ್ವಸ್ಥಾನ ಸೇರಿ ಆಯ್ತು!... (ಶ್ರೀಕೃಷ್ಣ ಆ ಅಗಲಿಕೆಯನ್ನು ನೆನೆದು ಕಂಬನಿದುಂಬಿ ಗದ್ಗದಿತನಾಗಿ, ಕಷ್ಟಪಟ್ಟು ತಡೆದುಕೊಳ್ಳುತ್ತಾನೆ!) ಗೆಳೆಯರೂ ಹೊರಟಾಯ್ತು! ಸಧ್ಯಕ್ಕೆ ಯಾರೂ ಬರಲಾರರು!... ಒಬ್ಬನೇ ಗೆಳೆಯ ಮಾತ್ರ ದೂರದಿಂದ ಬರಲಿದ್ದಾನೆ!... ಪ್ರಾಣಸಖ ಅವನು! ನಾನು ಗೋಕುಲದಲ್ಲಿ ಕಾಲಿಟ್ಟದ್ದೂ ಅವನ ಸಲುವಾಗಿಯೇ!... ನಿನಗೆ ಈ ಮರ್ಮ ಗೊತ್ತಿರಲಿಲ್ಲ! 'ಇಂದ್ರಸ್ಯ ಯುಜ್ಯಃ ಸಖಾ' ಎಂದು ವೇದ ಹೇಳಲಿಲ್ಲವೇ?... ಆ ಗೆಳೆಯನಿಗೆ ಹೇಳಿ ಕಳುಹಿದ್ದೇನೆ... ಇನ್ನೇನು ಬರುತ್ತಾನೆ... ಆ ವರೆಗೆ ಈ ಕಣಗಲೇ ಹೂವು ಬಾಡದಂತೆ ಹರಸು!"

ಯಶೋದೆ: (ಮುಗ್ಧೆಯಾಗಿ ಕಣ್ಣರಳಿಸುತ್ತಾ) "ಏನೋ ಅಪ್ಪ! ನೀನಾಡುವುದೊಂದೂ ತಿಳಿಯುತ್ತಿಲ್ಲ!... ಎಷ್ಟಾದರೂ ದನಕಾಯುವ ಗೊಲ್ಲತಿ ನಾನು!... ನಿನ್ನ ಹೆಂಡತಿಯರು ಎಲ್ಲಿ! ಆ ರುಕ್ಮಿಣೀ ಬಲು ಚೆಲುವೆಯಂತೆ! ಸತ್ಯಭಾಮೆಯೂ ಸಹ!... ನಾನು ನೋಡಬೇಡವೇ?"

ಶ್ರೀಕೃಷ್ಣ: "ಮತ್ತೆ ಇದೂ ಕಣಗಲೇ ಹೂವಿಗೇ ಬರುತ್ತದೆ ಮಾತು! ಅದನ್ನು ಪಾದದಿಂದ ತೆಗೆಯುವ ತನಕ ಅವರಾರೂ ಇಲ್ಲಿ ಬರುವಂತಿಲ್ಲ! ಬಂದ ಮೇಲೆ ಆ ಅವಸ್ಥೆಯಲ್ಲಿ ನೀನು ಅವರನ್ನು ನೋಡಬಾರದು!"

ಯಶೋದೆ: (ಮತ್ತಷ್ಟು ಗಲಿಬಿಲಿಯಿಂದ) "ಅಂದರೆ!... ಇವತ್ತು ಬರೀ ಮೋಡೀ ಮಾತುಗಳನ್ನೇ ಆಡಿ ತಾಯಿಯನ್ನು ತುಂಬಾ ಬಳಲಿಸುತ್ತಿರುವೆ! ಈ ಲೀಲೆಯನ್ನು ನೋಡಿರಲಿಲ್ಲ! ಮೂಢಳಾದರೂ ತಾಯಿ ತಾಯಿಯೇ ಅಲ್ಲವೇ ಮಗು? ತಿಳಿಯುವಂತೆ ಹೇಳಬಾರದೆ?"

ಶ್ರೀಕೃಷ್ಣ: "ಅಮ್ಮ ಹೇಳಿದರೆ ತಿಳಿಯದ ವಿಷಯಗಳನ್ನು ತೋರಿಸಿಯೇ ಬಿಡುತ್ತೇನೆ, ಉಪಾಯದಿಂದ! ನೋಡಿ, ನೀನೇ ಅರಿಯುವೆಯಾ? ಮತ್ತೆ ಕಣ್ಣುಮುಚ್ಚುವೆಯಾ?"

ಶ್ರೀಕೃಷ್ಣ ತಾಯಿಗೆ ಬಾಯಿ ತೆರೆದು ಬ್ರಹ್ಮಾಂಡ ತೋರಿಸುತ್ತಾನೆ. ಯಶೋದೆಗೆ, ಗೋಕುಲದಲ್ಲಿ, ಬಾಲಕೃಷ್ಣ ತನ್ನ ಬಾಯನ್ನೇ ತೋರಿಸಿದ ಹಳೆಯ ನೆನಪಾಗುತ್ತದೆ!! 'ಈಗ ಕೃಷ್ಣ ಯಾವ ಮಣ್ಣು ತಿಂದ ಬಗ್ಗೆ ಜಾಡಿಯೂ ಬಂದಿಲ್ಲವಲ್ಲ!' ಎಂದು ಮುಗ್ಧೆಯಾಗಿ ಭೂತವರ್ತಮಾನಗಳನ್ನು ಬೆರೆಸಿ, ನಿನ್ನೆ-ನಾಳೆಯರಿಯದ ಮಗುವಿನಂತೆ, ಕುತೂಹಲದಿಂದ ಕೃಷ್ಣನ ಮುಖ ನೋಡುತ್ತಾಳೆ. ಈ ಭಾವಕ್ಕೂ ಶ್ರೀಕೃಷ್ಣ ಉತ್ತರಿಸಿ ಹೀಗೆನ್ನುತ್ತಾನೆ.

ಶ್ರೀಕೃಷ್ಣ: "ತಾಯಿ! ಈ ನನ್ನ ಲೀಲಾವಿಭೂತಿಯಲ್ಲಿ ಎಲ್ಲರೂ ಒಂದಲ್ಲೊಂದು ರೀತಿಯಲ್ಲಿ ಉಣ್ಣುವುದೆಲ್ಲ ಮಣ್ಣನ್ನೇ! ನನಗೆ ಅದು ಲೀಲೆ ಎನಿಸಿದರೆ ಉಳಿದವರಿಗೆ ಅದು ಕರ್ಮ ಎನಿಸುತ್ತದೆ! ಅಷ್ಟೇ ವ್ಯತ್ಯಾಸ!! ಮಣ್ಣನ್ನೂ, ಮಣ್ಣು ತಿನ್ನುವವರನ್ನೂ, ತಿನ್ನಿಸುವವರನ್ನೂ ನಾನೇ ಕೊನೆಗೊಮ್ಮೆ ಉಂಡು ಮುಗಿಸುತ್ತೇನೆಂದು ವೇದ ಹೇಳುತ್ತದೆ. ಅದೆಲ್ಲ ನನ್ನದೇ ಆದುದರಿಂದ ನನಗೆ ಅದು ಬೆಣ್ಣೆಗೆ ಸಮ! ಹೀಗೆಷ್ಟು ಸಲ ಉಂಡೆನೋ?... ಅದು ಜೀರ್ಣವಾಗದೆ ನಿನ್ನ ಮನೆಯ, ಗೋಕುಲದ ಹಳ್ಳಿಯ ಎಲ್ಲರ ಮನೆಯ ಬೆಣ್ಣೆಯನ್ನೂ ನಾನು ಔಷಧಿಯಂತೆ ಉಂಡೆನೆಂದು ಹೇಳುವವನು, ಇಕೋ ಇನ್ನು ನಲವತ್ತಮೂರನೇ ದಿನಕ್ಕೆ ಹುಟ್ಟಿ ಬರುತ್ತಾನೆ. ಮಣ್ಣಿನಲ್ಲಿ ಹುಟ್ಟಿದವರು, ಅದನ್ನೇ ತಿಂದು, ಅಲ್ಲೇ ಬೀಳುತ್ತಾರೆಂಬುದೂ ಅವನ ಪರಿಭಾಷೆಯೇ!! ಇರಲಿ... ಇಗೋ ಈ ಬಾಯಿ ನೋಡು..."

ಎನ್ನುತ್ತಾ ಶ್ರೀಕೃಷ್ಣ ತಾಯಿಗೆ ಮತ್ತೆ ತನ್ನ ಬಾಯಿ ತೆರೆದು ತೋರುತ್ತಾನೆ!...

ಈ ಸಲ ಯಶೋದೆ ಭಯಪಡದೆ ನೋಡುತ್ತಾಳೆ... ಬಲಭದ್ರನ ಬಾಯಿಂದ ಬಿಳಿಯ ಸಾವಿರ ಹೆಡೆಯ ಹಾವೊಂದು ಹೊರಬಂದು ಸಮುದ್ರ ಪ್ರವೇಶಿಸಿದುದನ್ನೂ, ಯಾದವರು ಮದ್ಯಪಾನಾಸಕ್ತರಾಗಿ ಪರಸ್ಪರ ಹೊಡೆದಾಡಿ ಸತ್ತುದನ್ನೂ, ಕೃಷ್ಣ ಪುತ್ರ-ಪೌತ್ರರ ಗತಿಯನ್ನೂ, ಆಕ್ರಂದಿಸುವ ಕೃಷ್ಣ ಪತ್ನಿಯರ ದುಃಸ್ಥಿತಿಯನ್ನೂ, ಕೃಷ್ಣನ ಕಾಲಲ್ಲಿ ಬಾಣದ ಪೆಟ್ಟನ್ನೂ, ರಕ್ತ ಸೋರುತ್ತಿರುವುದನ್ನೂ ಆ ಬಾಯಿ ತೋರಿಸುತ್ತದೆ!... ಕೊನೆ ಕೊನೆಗೆ ಬರುತ್ತಾ ಯಶೋದೆ ಚೀರುತ್ತಾಳೆ!

ಶ್ರೀಕೃಷ್ಣ: "ಅಂತೂ, ಕಣಗಲೇ ಹೂವಿನ ರಹಸ್ಯವನ್ನು ನೋಡಿ ಅರಿತೆ! ಯಾರಿಗೂ ಹೇಳಬೇಡ."

ಯಶೋದೆ: "ಮಗು! ನಾನು ನಿನಗೆ ಈಗ ಬರೀ ಚಿತ್ರವೋ! ವ್ಯವಹಾರ ಯೋಗ್ಯ ತಾಯಿಯೋ?"

ಶ್ರೀಕೃಷ್ಣ: "ತಾಯಿ! ನನ್ನ ಬಾಯನ್ನು ನೋಡಿದ ಮೇಲೆ ನಿನ್ನ ಭಾಷೆಯೇ ವ್ಯತ್ಯಾಸವಾಗಿದೆ? ಏನಾಯ್ತು?"

ಯಶೋದೆ: "ಏನಾದರಾಗಲಿ! ಚಿತ್ರದಿಂದ ಹೊರಬರಲು ನೀನು ಅವಕಾಶ ಕೊಟ್ಟರೆ, ನನ್ನ ಸೆರಗಿನಿಂದ ನಿನ್ನ ಪಾದಕ್ಕೆ ಪಟ್ಟಿಕಟ್ಟಿ ಚಿಕಿತ್ಸೆ ಮಾಡುತ್ತೇನೆ!... ಮಗು! ಬೇಡವೆನ್ನಬೇಡ!!"

ಪರಮಯೋಗಿಗಳಿಗೂ, ವೇದಾಂತಿಗಳಿಗೂ ಅಭೇದ್ಯವಾದ ಈ ಶುದ್ಧಪ್ರೇಮ ರಹಸ್ಯ, ಇಷ್ಟು ಸುಲಭವಾಗಿ ಇವಳಿಗೆ ತಿಳಿದದ್ದಕ್ಕೆ- "ಮಯಿ ತೇ ತೇಷು ಚಾಪ್ಯಹಂ" ಎಂಬುದಕ್ಕೆ ಭಾಷ್ಯದಂತಹ ಇವಳ ಪ್ರೀತಿಗೆ ಮನಸೋತು ಶ್ರೀಕೃಷ್ಣ ಆ ಕನಸನ್ನು ನನಸಾಗಿಸಿ, ಯಶೋದೆಯ ಸೆರಗಿನಿಂದ ಗಾಯಕ್ಕೆ ಪಟ್ಟಿಕಟ್ಟಿಸಿಕೊಳ್ಳುತ್ತಾನೆ!

ಶ್ರೀಕೃಷ್ಣ: "ಅಮ್ಮ! ನಿನಗೊಂದು ವರ ಕೊಡುತ್ತೇನೆ!"

ಯಶೋದೆ: (ಧನ್ಯತೆಯ ಹಿಗ್ಗಿನಲ್ಲಿ ಆನಂದಾಶ್ರು ಸುರಿಸುತ್ತಾ, ಸೆರಗೊಡ್ಡಿ, ಪ್ರಸಾದ ಸ್ವೀಕರಿಸುವವಳಂತೆ ನಿಲ್ಲುತ್ತಾಳೆ). "ಕೃಷ್ಣ! ನೀನು ಎಂದೆಂದೂ ನನ್ನ ಮಗುವಾಗಿಯೇ ಇರು. ಇದು ಬಿಟ್ಟು ಏನೂ ಬೇರೆ ವರ ಬೇಡ, ಕಂದ!"

ಶ್ರೀಕೃಷ್ಣ: "ನನ್ನ ಬಾಲಲೀಲೆಯನ್ನೆಲ್ಲ ನೋಡಿದೆ!... ಅಥವಾ ನಾನು ತೋರಿಸಿದೆ!!... ನನ್ನ ವಿವಾಹ ನೋಡಬೇಡವೇ?"

ಯಶೋದೆ: "ಕಣಗಲೇ ಹೂವನ್ನು ತೋರಿಸಿದ ಮೇಲೆ, ಅದಕ್ಕ ಅವಕಾಶವೆಲ್ಲಿ ಮಗು? ಉಂಡ ಎಲೆಯನ್ನು ಬಿಸಾಡಿದ ಮೇಲೆ ಮತ್ತೆ ಮೃಷ್ಟಾನ್ನವೇ?"

ಶ್ರೀಕೃಷ್ಣ: "ಬೇರೆ ಎಲೆ ಹಾಕಿದರಾಯ್ತು! ಸ್ವಲ್ಪ ಕಾಲಬಿಟ್ಟು ಉಂಡರಾಯ್ತು!... ಮುಂದೆ ಬರುವ ಕಲಿಯುಗದಲ್ಲಿ ನೀನು ಮತ್ತೆ ನನ್ನ ತಾಯಿಯಾಗಿ ಆ ಭಾಗ್ಯ ನೋಡುವೆ!... ಆಗ ನಿನಗೆ ಬಕುಳಮಾಲಿಕೆ ಎಂದು ಹೆಸರಿರುತ್ತದೆ!... ನಾನು ಈಗಿನಂತೆ ಆಗಲೂ ನಿನ್ನ ಶ್ರೀನಿವಾಸನೇ! ಶುಕಪುರಿಯಲ್ಲಿ ನನ್ನ ವಿವಾಹ ನಡೆಯುತ್ತದೆ! ನನ್ನ ಭಕ್ತನೇ ಲಗ್ನಪತ್ರಿಕೆ ಬರೆಯುತ್ತಾನೆ!! ಯುಗಪೂರ್ತ ದಿನೇ ದಿನೇ ಆ ವಿವಾಹದ ಪುನರಾವರ್ತನೆಯನ್ನು ನೋಡುತ್ತಾ ಹಿಗ್ಗುವೆಯಂತೆ! ಈ ಕಣಗಲೇ ಹೂವನ್ನು ಮರೆತು ಬಿಡು!... ಹೋಗಿ ಬಾ ತಾಯಿ... ಮತ್ತೆ ಸೇರೋಣ!..."

ಮಾಯೆ ತೀರುತ್ತದೆ! ಯಶೋದೆ ಕಣ್ಮರೆಯಾಗುತ್ತಾಳೆ!...

* * * * *

ಮೂರನೆಯ ತಾಯಿಯ ಮುಖ ಮಸಕು ಮಸಕಾಗಿ ಕಾಣುತ್ತದೆ! ಆ ತಾಯಿಯ ಮುಖ ಲಜ್ಜಿಸುತ್ತ ಲಜ್ಜಿಸುತ್ತಾ, ತನ್ನನ್ನು ಕೃಷ್ಣ ತಾಯಿಯೆಂದೊಪ್ಪಿ ಗೌರವಿಸುವನೋ, ತಿರಸ್ಕರಿಸುವನೋ, ಎಂದಂಜುತ್ತಾ, ಆಗಾಗ ಮರೆಯಾಗುತ್ತಾ, ಸುಳಿದಾಡುತ್ತದೆ!

ಶ್ರೀಕೃಷ್ಣ ಪುಳಕಿತನಾಗುತ್ತಾನೆ! ಇದೊಂದು ಅನಿರೀಕ್ಷಿತ ಘಟನೆಯಾಗಿ,

"ಹೌದು, ಅಮ್ಮ! ನಿನ್ನನ್ನೂ ಕರೆದೆ! ಬಾ ತಾಯಿ!" ಎಂದು ಪ್ರೀತಿಯಿಂದ ಕರೆಯುತ್ತಾನೆ!

ಪೂತನಿಯ ಮುಖ, ಅಂದು ಎದೆಯುಣಿಸಿದ ವೇಷದಲ್ಲಿ ಮತ್ತೆ ದೃಢವಾಗಿ ಕಾಣುತ್ತದೆ.

* * * * *

# ೧೩. ಶ್ರೀಕೃಷ್ಣ ಕಂಡ ಮೂರನೆಯ ತಾಯಿ!

ಕೊಂಚ ಸ್ಥೂಲಕಾಯದ, ಪ್ರಾಯಮುಗಿಯುತ್ತಾ ಮಧ್ಯವಯಸ್ಸಿನಲ್ಲಿ ಕಾಲಿಟ್ಟ, ಮಹಿಳೆ ಅವಳು! ಸುಂದರ ಉಡುಗೆಯನ್ನುಟ್ಟು, ತಲೆಯ ಮುಡಿಯ ತುಂಬ ಮಲ್ಲಿಗೆಯ ಹೂವನ್ನು ಮುಡಿದಿದ್ದಾಳೆ! ನಡೆಯುವಾಗ ಬಳುಕುತ್ತಾ ಎಲ್ಲ ಅಂಗೋಪಾಂಗಗಳು ಕುಲುಕಾಡುತ್ತವೆ! ಕಿವಿಯ ಓಲೆಗಳಂತೂ ಸರಿಯೆ! ಅವಳ ಮುಡಿಯ ಹೂಗಳನ್ನನುಸರಿಸಿ ದುಂಬಿಗಳೂ ಹಿಂಬಾಲಿಸುತ್ತಿದ್ದ ದೃಶ್ಯ ಅದ್ಭುತ!*

ಶ್ರೀಕೃಷ್ಣ ಕಣ್ಣರಳಿಸಿ ಕುತೂಹಲದಿಂದ ಅವಳಾರೆಂದು ನೋಡಿದ! ತೀರ ಎಳವೆಯಲ್ಲಿ ಒಂದೇ ಒಂದು ಬಾರಿ ಅವಳನ್ನು ಕಂಡ ನೆನಪು ಸರ್ವಜ್ಞ ಕೃಷ್ಣನಿಗೆ ಆಯಿತು! ಅವಳ ಮೈಯ್ಯಲ್ಲಿ ತನ್ನದೇ ಶರೀರದಂತಹ ಒಂದು ದಿವ್ಯ ಸುಗಂಧ ಹೊರ ಬರುತ್ತಿತ್ತು! ಅದರ ಮರ್ಮವನ್ನು ನೆನೆಸಿ ಸರ್ವಗಂಧನಾದ ಪ್ರಭು ಮುಸಿ ನಕ್ಕ!

**ಶ್ರೀಕೃಷ್ಣ:** "ಬಾ ತಾಯಿ! ನಿನ್ನನ್ನೂ ನೆನೆದೆ! 'ಅಮ್ಮಾ' ಎಂದು ಕರೆದಾಗ ಆ ಇಬ್ಬರು ತಾಯಂದಿರೂ ಬಂದುಹೋದರಷ್ಟೆ! ಒಳಬರಲು ನೀನೇಕೆ ಅಷ್ಟು ಹಿಂದೆ ಮುಂದೆ ನೋಡಿದೆ?... ನಿನ್ನ ಹಾಲು ಅಷ್ಟನ್ನೂ ಉಂಡು, ಒಮ್ಮೆಲೇ ತೇಗಿದವನು ನಿನಗೆ ಮುಖ ತೋರಿಸದಷ್ಟು, ಮಾತಾಡಿಸದಷ್ಟು ಕೃತಘ್ನನೇ, ನಾನು?"

**ಪೂತನಾ:** "ಪ್ರಭು!... ನಿನ್ನ ಔದಾರ್ಯ ಅದು!... ನಿನ್ನನ್ನು ಮಗುವೆಂದು ಸಂಬೋಧಿಸುವ ಹಕ್ಕು ನನಗಿದೆಯೋ ಇಲ್ಲವೋ ಕಾಣೆ!... ಅಂದು ನಾನು ನಿನ್ನ ತಂದೆಯ ಮನೆಗೆ ಬಂದುದು ಕಂಸನ ಅಪ್ಪಣೆಯಂತೆ!... ಉದ್ದೇಶ ಕೆಟ್ಟದ್ದೇ ಇತ್ತು!... ಕಂಸ ನನ್ನನ್ನು ಬಾಲ್ಯದಿಂದ ವಿಷಕನ್ಯೆಯನ್ನಾಗಿಯೇ ಬೆಳೆಸಿದ್ದ... ದಿನಾ ಊಟದ ಜೊತೆಗೆ ಅಷ್ಟಷ್ಟು ವಿಷವನ್ನೂ ಉಣ್ಣುತ್ತ ನನ್ನ ಶರೀರವೆಲ್ಲ ವಿಷಮಯವಾಗಿ, ಉಸಿರೂ, ಸ್ಪರ್ಶ, ದೃಷ್ಟಿಗಳೆಲ್ಲಾ ವಿಷವೇ ತುಂಬಿ ನಾನೊಂದು ಬಗೆಯಲ್ಲಿ ಅಸ್ಪೃಶ್ಯಳೂ, ಅದರ್ಶನೀಯಳೂ, ಸಮಾಜಬಾಹಿರಳೂ ಆಗಿಹೋದೆ! ನನಗೆ ಬುದ್ಧಿ ಬರುವ ವೇಳೆಗೇ ಈ ನನ್ನ ಆತ್ಮನಾಶ, ಸ್ವರೂಪನಾಶ, ಪತಿತತ್ವ ಆಗಿಹೋಗಿತ್ತು. ಬದುಕುವ ದಾರಿ ಹೇಗೆ?... ಕಂಸ ಹೇಳಿದವರನ್ನೆಲ್ಲ ದಿನದಿನವೂ ಕೊಲ್ಲುತ್ತಾ, ಹೊಟ್ಟೆ ಪಾಡು ಹೊರೆಯುವುದೊಂದೇ ದಾರಿ ಉಳಿದಿತ್ತು! ಹಾವಸ್ತು ಒಂದು ನಾಲ್ಕು ಜನರಂತೆ ನಾನೂ ವಿವಾಹಿತಳಾಗಿ ಮಕ್ಕಳನ್ನು ಹಡೆದು ಸಮಾಜದಲ್ಲಿ ಸಹಜ ಜೀವನವನ್ನು ನಡೆಸುವ ದಾರಿಯನ್ನು ಕಂಸ, ನನ್ನಕೇಳದೆಯೇ ತನ್ನ ಸ್ವಾರ್ಥಕ್ಕಾಗಿ ಮುಚ್ಚಿಬಿಟ್ಟಿದ್ದ!... ಸೂಳೆಗಿಂತ ಕಡೆಯಾದ ಜೀವನವಲ್ಲವೆ, ಪ್ರಭು!"

**ಶ್ರೀಕೃಷ್ಣ:** "ಪ್ರಭು ಎನ್ನಬೇಡ, ಅಮ್ಮ! ಮಗು ಎಂದೇ ಕರೆ!... ನನ್ನ ಇಡೀ ಆಯುಷ್ಯದಲ್ಲಿ ನಿನ್ನಂತಹ ನಿಸ್ವಾರ್ಥಿಗಳನ್ನು ಬೇರೆಲ್ಲೂ ನಾನು ಕಾಣಲಿಲ್ಲ! ನಿನ್ನ ಕತೆಯನ್ನು ಕೇಳಬೇಕೆಂಬಲ್ಲಿ ನೀನು ಆಗಿನ ಅಸುರೀಶರೀರವನ್ನೂ ತೊರೆದೆ! ನನಗೂ ಆಗ ಕತೆ ತಿಳಿಯುವ ವಯಸ್ಸಿರಲಿಲ್ಲ!... ನೀನು ಹುಟ್ಟಿ ಬೆಳೆದದ್ದು ಎಲ್ಲಿಯೋ? ತಂದೆ ತಾಯಿ ಯಾರು?"

---

*ತಾಂ ಕೇಶಬಂಧ ವ್ಯತಿಷಕ್ತ ಮಲ್ಲಿಕಾಂ ಬೃಹನ್ನಿತಂಬಸ್ತನ ಕೃಚ್ಛ್ರಮಧ್ಯಮಾಂ।
ಸುವಾಸಸಂ ಕಲ್ಪಿತ ಕರ್ಣಭೂಷಣತ್ವಿಷೋಲ್ಲಸತ್ ಕುಂತಲ ಮಂಡಿತಾನನಾಂ॥ (ಶ್ರೀಭಾಗವತ, ೧೦-೬-೫)

ಹಾಗೂ

ಅಪಶ್ಯತ್ [illegible] ತತ್ರ ಕಾಚಿತ್ ವ್ರಜಪದೇ ಮಧುರಾಕೃತಿರಂಗನಾ।
[illegible] ಕಪಟ ಪೂತನಾ ತೇ ನಿಕಟಂ ಗತಾ॥ (ನಾರಾಯಣೀಯಂ)

**ಪೂತನಾ:** "ಮಗು! ಅವರು ಯಾರೆಂದು ನಾನು ಅರಿಯೆ! ನನಗೆ ಬುದ್ಧಿ ಬಂದಾಗಿಂದ ತಿಳಿದದ್ದು ಇಷ್ಟೆ. ಒಂದು ರಹಸ್ಯ ಕೊಠಡಿಯಲ್ಲಿ ಕಂಸನ ಅರಮನೆಯಲ್ಲೇ ನನ್ನನ್ನಿಟ್ಟಿರುತ್ತಿದ್ದರು! ಕಾಲಕಾಲಕ್ಕೆ ಊಟ ಬಡಿಸುತ್ತಾ, ಜೊತೆಗೆ ಒಂದು ಪುಡಿಯನ್ನು ಬಡಿಸುತ್ತಿದ್ದರು. ಅದು ಬಹು ಆಕರ್ಷಕ ರುಚಿಯನ್ನೂ ವಾಸನೆಯನ್ನೂ ಹೊಂದಿರುತ್ತಾ, ಅದೂ ಆಹಾರವೆಂದೇ ತಿಳಿದು, ಇಷ್ಟಪಟ್ಟು ತಿನ್ನುತ್ತಿದ್ದೆ! ಒಂದು ಹೊತ್ತು ಅದು ಕಮ್ಮಿಯಾದರೂ ಶರೀರದಲ್ಲಿ ಯಾತನೆಯಾಗುವ ಸ್ಥಿತಿಗೆ ಬರುವಷ್ಟರಲ್ಲಿ ಅದು ವಿಷವೆಂದು ತಿಳಿಯಿತು! ಊಟ ಬಡಿಸುವವರೂ, ನೀರು ಕೊಡುವವರೂ, ಅಲಂಕಾರ ಸಾಮಗ್ರಿಗಳನ್ನು ನೀಡುವವರೂ ದೂರದಿಂದ ಒಂದು ಬಡಿಸಿ, ನೀಡಿ, ಮೂಗು ಮುರಿಯುತ್ತಾ ಹೋಗುವವರಾಗಿ, ಬಹುದಿನ ಇದಕ್ಕೆ ಕಾರಣವೂ ತಿಳಿದಿರಲಿಲ್ಲ! ಕಂಸ ನನ್ನನ್ನು ಮೊದಲ ಪ್ರಯೋಗಕ್ಕಾಗಿ ಕಳುಹಿದಾಗ, ನನ್ನ ಸ್ಪರ್ಶವೇ ಮರಣದಾಯಕವೆಂಬುದೂ ನನಗೆ ತಿಳಿದಿರಲಿಲ್ಲ! ಆಮೇಲ ತಿಳಿಯಿತು! ನನಗೆ ಗೊತ್ತಿಲ್ಲದೆಯೇ ಜೀವನದ ಎಲ್ಲ-ಮುಖಗಳೂ ನನಗೆ ಸೆರೆಮನೆಗಳಾಗಿ, ಕಂಸ ನನ್ನನ್ನು ಹೊರಗೆ ಬಿಟ್ಟಿದ್ದರೂ, ನಾನೆಲ್ಲೂ ಹೋಗಿ ಬದುಕುವಂತಿರಲಿಲ್ಲ! ಕೊಲ್ಲುವುದೇ ಕಸುಬಾಗಿ, ಉಪಯೋಗಿಸಿದವರಿಗೂ ಬೇಡವಾಗಿ, ಕಟುಕರಿಗಿಂತ, ಸೂಳೆಗಿಂತ ಕಡೆಯಾದ ಬಾಳ್ವೆ ನಡೆಸುತ್ತಿದ್ದ ನನಗೆ ದಾರಿ ತೋರಿದ ಕರುಣಾಳು ನೀನೇ ಪ್ರಭು!... ನನ್ನ ಚೆಲುವು ಯಾವ ದೊರೆಯ ರಾಣಿಯದಕ್ಕಿಂತಲೂ ಕಮ್ಮಿ ಇರಲಿಲ್ಲ! ಆದರೆ ಅದನ್ನು ಕಂಸ, ತನ್ನ ಸ್ವಾರ್ಥಕ್ಕಾಗಿ, ವ್ಯರ್ಥ ಮಾಡಿದ!... ಎಂಥ ಹೀನ ರಾಜಕಾರಣ ಅದು!... ನನ್ನನ್ನು ನಿರ್ಭೀತಿಯಿಂದ ಮುಟ್ಟಿ, ಮಗು ತಾಯಿಗೆ ತೋರಬೇಕಾದ ಪ್ರೀತಿಯನ್ನು ಆ ಒಂದು ಗಳಿಗೆಯಲ್ಲಿ ನೀನೇ ನನಗೆ ತೋರಿದವನು!!"

**ಶ್ರೀಕೃಷ್ಣ:** "ನನ್ನನ್ನು ಕೊಲ್ಲಬೇಕೆಂದೇ ಬಂದೆಯಲ್ಲ!... ಈ ಹೃದಯ ಮಾರ್ಪಾಟು ಯಾವಾಗ ಆಯಿತು?"

**ಪೂತನಾ:** "ಪ್ರಭು! ನನಗೆ ಕೊಲ್ಲುವುದರ ಹೊರತು ಬೇರೇನು ಶಕ್ತಿ ಇತ್ತು? ಉ[illegible]ಕ್ಯ, ಕಂಸನ ಊಳಿಗವೆಂದ ಮೇಲೆ, ಹೊರಲೋಕವನ್ನೇ ನಾನು ನೋಡಿರಲಿಲ್ಲವೆಂದ ಮೇಲೆ, ಅದು ಕೆಟ್ಟದ್ದೊ, ಏನಾದರೋ ಆಗಲಿ, ನನ್ನ ಸ್ವಾರ್ಥ ಅದರಲ್ಲೇನಿತ್ತು? ...ಜನ ನನ್ನನ್ನು ರಕ್ಕಸಿ ಎನ್ನುತ್ತಿದ್ದುದು ನನ್ನ ಕಿವಿಯಲ್ಲೇ ಆಗಾಗ ಬೀಳುತ್ತಿತ್ತು! ನಾನು ಏನಾಗಿದ್ದರೇನು? ಆಗಿನ ನನ್ನ ಸ್ಥಿತಿಯನ್ನು ದೇವತೆಯೆಂದೇ ಬಣ್ಣಿಸಿದ್ದರೂ ನನಗೇನು ಲಾಭವಾಗುತ್ತಿತ್ತು! ... ನಾನು ಯಾರೋ? ನನಗೇ ಗೊತ್ತಿಲ್ಲದೆ, ಏನಾಗಬೇಕೆಂಬ ಸ್ವತಂತ್ರಕಲ್ಪನೆಯಿಂದಲೂ ವಂಚಿತಳಾಗಿ, ಪ್ರಕೃತಿದತ್ತ ಹಕ್ಕುಗಳೂ ಕಸಿಯಲ್ಪಟ್ಟು, ಸಮಾಜವೂ-ದೇವರೂ-ಪರಿತ್ಯಾಗಮಾಡಿದ್ದ ನಾನು ಸಾವಿಗಿಂತ ಕೀಳು ಸ್ಥಿತಿಯಲ್ಲಿದ್ದೆನಲ್ಲ, ಕೃಷ್ಣ! ...ಆಮೇಲೆ ನನ್ನ ಜನ್ಮ ವಿಮೋಚನೆಯ ದಾರಿ ಹೇಗೆ? ಈ ವಿಚಾರವೂ ನನ್ನ ತಲೆಗೆ ಬಾರದಂತಹ ಕಬ್ಬಿಣದ ಸುತ್ತು ಗೋಡೆ, ನನ್ನ ಸುತ್ತ ಆವರಿಸಿತ್ತು!"

**ಶ್ರೀಕೃಷ್ಣ:** "ನಿನ್ನ ಹೃದಯ ಮಾರ್ಪಾಟು ಯಾವಾಗ ಆಯಿತೆಂದು ಹೇಳಲಿಲ್ಲವಲ್ಲ!"

**ಪೂತನಾ :** "ಕಂಸ ಹೇಳಿದ್ದನ್ನು ಮಾಡುವುದೇ ಜೀವನದ ಪರಮ ಗುರಿ ಎಂದು ಬಹುಕಾಲ ನಂಬಿ, ಅದೊಂದೇ ತಿಳಿದಿದ್ದವಳಿಗೆ, 'ಮಾರ್ಪಾಡು' ಎಂಬುದೊಂದಿದೆಯೆಂದೇ ತಿಳಿಯದಿದ್ದವಳಿಗೆ, ಈ ಪ್ರಶ್ನೆ ಕೇಳುವುದೇ, ಪ್ರಭು ! .. ಗೋಕುಲದಲ್ಲೂ, ಮಥುರೆಯ ಸುತ್ತಮುತ್ತಲೂ ಕಂಸ ಅಲ್ಲಲ್ಲಿ ಶಿಶುಗಳನ್ನು ಕೊಲ್ಲಲು ಕಳುಹಿಸಿದಾಗ, ಒಂದು ಕಿರಣ ಕಾಣಿಸಿದ್ದು... ಬಹುಶಃ ಅದೇ ನೀನೆನ್ನುವ ಮಾರ್ಪಾಟಿನ ತಿರುವಾಗಿರಬೇಕು?"

**ಶ್ರೀಕೃಷ್ಣ:** "ಹೇಗೆ? ಎಲ್ಲಿ? "

**ಪೂತನಾ:** "ಗೋಕುಲಕ್ಕೆ ಮತ್ತು ಸುತ್ತಲ ಹಳ್ಳಿಗಳಿಗೆ, ನಗರಗಳಿಗೆ, ದಿನಕ್ಕೆ ಇಂತಿಷ್ಟು ವೇಳೆ, ಮುಂಜಾನೆ ಮತ್ತು ಸಂಜೆ, ಹೋಗಿ ಬರಬೇಕೆಂದೂ, ನಾನಾ ನೆವಗಳಲ್ಲಿ ಜನಗಳೊಡನೆ ಹೊಕ್ಕು, ಮನೆಗಳಲ್ಲಿ ಸೇರಿ, ಉತ್ಸವಗಳಲ್ಲಿ, ಹಬ್ಬಗಳಲ್ಲಿ ಬೆರೆತು, ಸ್ತ್ರೀಯರೊಡನೆ ಪಳಗಿ, ಅವರಿಗೆ

ವಿಷಕನ್ಯೆಯೆಂಬುದರಿಯದಂತೆ, ಅಲ್ಲಲ್ಲಿ ಶಿಶುಗಳನ್ನೆತ್ತಿಕೊಂಡು, ಹಲ್ಲು ಇನ್ನೂ ಬಾರದ ಕೂಸುಗಳನ್ನೂ, ಆರು ತಿಂಗಳೊಳಗಿರುವ ಯಾವ ಎಲ್ಲ ಶಿಶುಗಳನ್ನೂ ಹಾಲು ಕುಡಿಸುವ ನೆಪದಲ್ಲಿ ಕೊಂದು ಬರಬೇಕೆಂದು ನನಗೆ ಅಪ್ಪಣೆಯಾಯಿತು! ... "

**ಶ್ರೀಕೃಷ್ಣ:** "ನಿನಗೂ ಮಗುವಿತ್ತೆ? ... ಎದೆ ಹಾಲು ಎಂದೆಯಲ್ಲ? "

**ಪೂತನಾ:** "ಅದನ್ನೆಲ್ಲ ಹೇಳಬೇಕೆ, ಪ್ರಭು! ... ತಿಳಿಯದ ಯಾವನೋ ಅಜ್ಞಾನಿ ದುರ್ದೈವೀಪುರುಷ ನನ್ನನ್ನು ಕೂಡಿ ಸತ್ತ! ಹುಟ್ಟಿದ ಶಿಶುವೂ ಸತ್ತಿತ್ತು! ... ಎದೆಹಾಲು ಸಮೃದ್ಧವಾಗಿತ್ತು! ಯಾರಿಗೂ ನಾನು ಸದ್ಗೃಹಿಣಿ, ಮಕ್ಕಳುಳ್ಳವಳು ಎಂಬುದರಲ್ಲಿ ಸಂದೇಹ ಬರುವಂತಿರಲಿಲ್ಲ..."

**ಶ್ರೀಕೃಷ್ಣ:** "ಅಂತೂ ನೀನು ತಾಯಾಗಿ, ತಾಯ್ತನದ ಅನುಭವ ಪಡೆದೇ ನನ್ನನ್ನು ಸಮೀಪಿಸಿದೆ, ಎನ್ನು' ... "

**ಪೂತನಾ:** "ಕೃಷ್ಣ! ಸರ್ವಾಂತರಾತ್ಮನಾಗಿದ್ದೂ, ನಾಚಿಕೆಯ ವಿವರಣೆಗಳನ್ನು ನನ್ನಿಂದಲೇ ಹೇಳಿಸಲು ಬಯಸುತ್ತೀಯ! ... ಕಂಸ ದೊರೆಗೆ ಶತ್ರುಗಳಿಗೇನು ಕಮ್ಮಿ? ಯಾವನನ್ನೋ ಕೊಲ್ಲಿಸಬೇಕೆಂದು ದೊರೆ ನನ್ನನ್ನುಪಯೋಗಿಸಿದ! ಅವನಾರೆಂದು ನನಗೇನು ಗೊತ್ತು? ನನ್ನ ವಿಷದ ಶಕ್ತಿಯನ್ನೂ, ಅದರ ತೀವ್ರತೆಯನ್ನೂ, ತಾನು ಬೆಳೆಸಿದ ರೀತಿಯ ಸಫಲತೆಯನ್ನು ಪರೀಕ್ಷಿಸುವುದೂ ಅವನಿಗೆ ಬೇಕಿತ್ತು! ... ನನಗೂ ವಯಸ್ಸು! ಯಾವುದಾದರೊಂದು ಸಾಮಾಜಿಕ ಸಂಪರ್ಕ ಬಯಸುತ್ತಿದ್ದವಳಿಗೆ ಎಂಥದೆಂಬ ಕಲ್ಪನೆ ಎಲ್ಲಿ? ಪರಿಣಾಮದ ಕಲ್ಪನೆಯೆಲ್ಲಿ? ... ತಾಯ್ತನದ ಅನುಭವವೆನ್ನಲೇ, ಅದರ ವಿಡಂಬನೆ ಎನ್ನಲೇ? ಎಲ್ಲ, ಅರಮನೆಯಲ್ಲಿ ಗೌಪ್ಯ! ಮುಟ್ಟಿದವರಾರೂ ಉಳಿಯಲಿಲ್ಲ! ತಿಳಿದೇ ಉಪಚರಿಸಿ ಸತ್ತರು, ಆ ಊಳಿಗದವರು! ಉಪಚರಿಸದೆಯೇ ದೊರೆಯ ಆಜ್ಞೆಯಂತೆ ಸಾಯುವುದಕ್ಕಿಂತ, ಹೀಗೆ ಸಾಯುವುದೇ ಲೇಸೆಂದು ಅವರೂ ನಿಶ್ಚಯಿಸಿದರೆಂದು ಕಾಣುತ್ತದೆ... ನನ್ನ ವಿಷ ಶಕ್ತಿ ಸುಳ್ಳಾಗಲೆಂದು ನಾನೂ ದೇವರಿಗೆ ಪ್ರಾರ್ಥಿಸಿದೆ! ... ಆ ಪರಿಚಾರಕರೂ ಬಯಸಿದರು! ವಿಷ, ತನ್ನ ಕೆಲಸವನ್ನು ಮಾಡಿಯೇ ಬಿಟ್ಟಿತು... ಅಷ್ಟ ಕಥೆ ಸಾಕೆ? ... ಇನ್ನೂ ಗುಪ್ತ ವಿವರಗಳು ಬೇಕೆ? ... "

**ಶ್ರೀಕೃಷ್ಣ:** "ಸಾಕು ತಾಯಿ! ನಿನ್ನ ಮಾರ್ಪಾಟಿನ ವಿಷಯ ಕೇಳಿದ್ದಕ್ಕೆ ಏನೋ ಹೇಳಲು ಆರಂಭಿಸಿದ್ದೆ..."

**ಪೂತನಾ:** "ಸರಿ! ... ನನ್ನ ಗ್ರಾಮಸಂಚಾರ ಗೋಕುಲದಿಂದಲೇ ಆರಂಭವಾಯಿತು! ... ಮೊದಲೆರಡು ದಿನ ಯಾವ ಶಿಶುವನ್ನೂ ಕೊಲ್ಲದೆ, ಸುಮ್ಮನೆ, ಗ್ರಾಮವನ್ನು ಸುತ್ತಿ, ಅಲಲ್ಲಿ ನಿಂತು, ಜನರೊಡನೆ ಬೆರೆಯುತ್ತಾ, ನನ್ನ ಗುಟ್ಟು ರಟ್ಟಾಗದಂತೆ, ಗ್ರಾಮ ಪರಿಚಯ, ಜನಪರಿಚಯ ಮಾಡಿಕೊಂಡು ಬಂದೆ! ... ಆ ಒಂದು ದಿನ ಗೋಕುಲದ ಒಂದು ವಿಷ್ಣು ಗುಡಿಯಲ್ಲಿ ಒಬ್ಬ ಭಕ್ತಭಾವುಕರು ರಾಮಾಯಣದ ಕಥೆ ಹೇಳುತ್ತಿದ್ದರು! ರಾಮಾಯಣವೆಂಬುದೇನೆಂದೂ ಕೇಳಿರದಿದ್ದ ನನಗೆ ಆ ಕಥೆ ಬಹುರುಚಿಕರವೂ, ಮನಸ್ಸಿಗೆ ತಿರುವು ತಂದು ಕೊಟ್ಟಿದ್ದೂ ಆಗಿರಬೇಕು! ... ಕೃಷ್ಣಾ! ಗೋಕುಲದಲ್ಲಿ ಎಷ್ಟೊಂದು ಗುಡಿಗಳು!... ಎಲ್ಲೆಲ್ಲೂ ಭಜನೆ, ... ಕೀರ್ತನೆ... ಪ್ರವಚನ... ಪಾರಾಯಣ! ಮಥುರೆಯ ಬ್ರಾಹ್ಮಣರೆಲ್ಲ, ಅಲ್ಲೇ ಬಂದು ಕಾಲಕಳೆಯುತ್ತಿದ್ದರು! ... ಪ್ರವಚನಕಾರರು ಅಂದು ಹೇಳುತ್ತಿದ್ದ ಭಾಗ ಸೀತಾದೇವಿಯು ಹನುಮಂತನನ್ನು ತಡೆದು ರಾಕ್ಷಸಿಯರನ್ನು ಹಿಂಸಿಸದಂತೆ, ತನ್ನ ಪ್ರಭಾವ ಬೀರಿದ್ದ ಕಥಾ ಭಾಗ. 'ಎಲೋ ! ಹನುಮ! ಈ ರಕ್ಕಸಿಯರು ನನ್ನನ್ನು ಪೀಡಿಸುತ್ತಿದ್ದುದು ನಿಜ! ಆದರೆ ಅವರ ಸ್ವಾರ್ಥ ಅದರಲ್ಲೇನಿತ್ತು? ದೊರೆ ಹೇಳಿದಂತೆ ಅವರು ಕೇಳಿ ನಡೆದರು, ಅಷ್ಟೆ! ಆ ದೊರೆ ದುಷ್ಟನಲ್ಲದೆ, ಆ ಆಜ್ಞೆ ಒಳ್ಳೆಯದೇ ಇದ್ದರೆ, ಅದರಂತೆಯೇ ನಡೆದು ನನ್ನನ್ನು ಪೂಜಿಸುತ್ತಲೂ ಇರುತ್ತಿದ್ದರು! ಆದರವನು ದುಷ್ಟನಾಗಿ, ದುಷ್ಟ ಆಜ್ಞೆ ಇತ್ತು, ಅದರಂತೆ ಅವರು ನಡೆಯುವುದು ನನ್ನ ಭಾಗ್ಯ ವೈಷಮ್ಯ! ಇವರ ತಪ್ಪೇನು?' ಎಂದು ಬಲು ಮೋಹಕವಾಗಿ, ನನ್ನ ಮನಕ್ಕೂ ತಂಪಾಗುವಂತೆ,

ಒಳ್ಳೆಯ ಕಂಠದಿಂದ ಆ ಶ್ಲೋಕವನ್ನು ಹೇಳಿ ವಿವರಿಸುತ್ತಾ ಆನಂದಾಶ್ರುಗಳನ್ನು ಹಾಕುತ್ತಿದ್ದರು! ಶ್ರೋತೃಗಳು ಪರವಶರಾಗಿ ಕೇಳುತ್ತಿದ್ದರು..."

**ಶ್ರೀಕೃಷ್ಣ:** ಆ ಶ್ಲೋಕ ನೆನಪಿದೆಯೆ?"

**ಪೂತನಾ:** "ಪ್ರಭು! ಕಂಸ ದೊರೆ, ನನ್ನನ್ನು ಸಹಜ ಸ್ವಭಾವದ ಸ್ತ್ರೀಯೆಂದು ಇತರರಿಗೆ ತೋರಿಸಲು ಅಷ್ಟಿಷ್ಟು ವಿದ್ಯಾಭ್ಯಾಸವನ್ನು ಮಾಡಿಸಿದ್ದ!... ಆದರೆ ಕಲಿಸುವವರು ಏಕಾಂತದಲ್ಲಿ ನನ್ನೊಡನೆ ಕುಳಿತಿರಲೂ ಭಯಪಟ್ಟು ಬೆದರಿಯೇ ಸಾಯುತ್ತಿದ್ದರು! ಅವರಲ್ಲಿ ಹಾಗೆ ಸಾಯುವರೋ ಎಂಬ ಭಯದಿಂದ, ನಿರೀಕ್ಷೆಯಿಂದ ನಾನೂ ಭಯವಿಹ್ವಲಳಾಗಿ, ಪಾಠದ ಮೇಲೆ ಲಕ್ಷ್ಯವಿಡುತ್ತಿರಲಿಲ್ಲ! ಮೇಲಾಗಿ ಯಾವ ವಿದ್ಯೆಯಿಂದ ನನಗೇನು ಲಾಭವಾಗಬೇಕಿತ್ತು? ಮೃತ್ಯುವಾದ ಕಾಳಿಯ ಗುಡಿಗೆ ಕುರಿಗಳು ಬಂದು ಉಪನಿಷತ್ಪಾರಾಯಣ ಮಾಡಿ ಹೋಗುತ್ತಿದ್ದಂತೆ, ಆ ಸನ್ನಿವೇಶದ ಘೋರ ವಿಕಟತೆಯನ್ನು ಕಂಡು ನಾನೇ ನಕ್ಕಿದ್ದುಂಟು!... ಅಂತೂ ಅಷ್ಟೋ ಇಷ್ಟೋ ಅಕ್ಷರಜ್ಞಾನ ಹತ್ತಿತ್ತು!... ಆ ಶ್ಲೋಕ ಮಾತ್ರ ನೆನಪಿಲ್ಲ!"

ಶ್ರೀಕೃಷ್ಣ: "ನಿನ್ನ ಅಂತಃಪರಿವರ್ತನೆಗೆ ಕಾರಣವಾದ ಆ ಶ್ಲೋಕವನ್ನು ಮರೆಯುವುದೇ?"

**ಪೂತನಾ:** "ಆ ಶ್ಲೋಕ ಅಲ್ಲಿ ಹಾಗೆ ಬಂದು ನನ್ನನ್ನು ತಿದ್ದಿಯೇ ಬಿಡುತ್ತದೆಂಬ ಕನಸನ್ನು ನಾನು ಮುಂಚೆಯೇ ಕಂಡಿದ್ದರಲ್ಲವೆ, ನೆನಪಿಡುವ ಉದ್ದೇಶ ನನಗೆ ಉದಿಸುತ್ತಿತ್ತು!... ಪ್ರವಚನಕಾರರು ಶ್ಲೋಕ ಹೇಳಿ ಮುಗಿಸಿದ ಮೇಲೆಯೇ, ಅರ್ಥ ನನಗೆ ಅವರು ಹೇಳಿದ್ದು ರುಚಿಸಿದ ಮೇಲೆಯೇ, ಅದರ ಅನ್ವಯ ನನಗೆ ಮಾಡಿಕೊಂಡದ್ದು!... ಪ್ರಭು!... ನೀನೇ ಆ ಶ್ಲೋಕ ಹೇಳು!... ನಾನು ಕೇಳಿದ್ದು ಅದೇಯೋ ಅಲ್ಲವೋ... ಹೇಳಲು ಯತ್ನಿಸುವೆ!..."

**ಶ್ರೀಕೃಷ್ಣ:** "ನೆನಪಿಡು, ಈ ಸಲ:

***ರಾಜಸಂಶ್ರಯವಶ್ಯಾನಾಂ ಕುರ್ವತೀನಾಂ ಪರಾಜ್ಞಯಾ।***
***ವಿಧೇಯಾನಾಂ ಚ ದಾಸೀನಾಂ ಕಃ ಕುಪ್ಯೇತ್, ವಾನರೋತ್ತಮ?॥***

ಸರಿ, ಇದು ನಿನ್ನ ಪರಿವರ್ತನೆ ಹೇಗೆ ಮಾಡಿತು?"

**ಪೂತನಾ:** "ನೋಡು, ಪ್ರಭು! ಅದು ನನಗೂ ಅನ್ವಯವಾಗಲಿಲ್ಲವೆ? ನಾನೂ ರಾಜಾಶ್ರಯದ ದಾಸಿಯೇ ಆಗಿದ್ದೆ! ದೊರೆಯ ಆಜ್ಞೆ ಪಾಲಿಸುವುದಷ್ಟೇ ನನ್ನ ವೃತ್ತಿ-ಹೊಟ್ಟೆಪಾಡಿನ ದೆಸೆಯಿಂದ ಆಗಿತ್ತು! ನಾನಾರನ್ನೂ ದ್ವೇಷಿಸುತ್ತಿರಲಿಲ್ಲ, ಕೊಲ್ಲಬೇಕೆಂಬುದೂ ಇರಲಿಲ್ಲ. ಯಾವ ಸ್ವಾರ್ಥವೂ ನನಗೆ ಇರಲಿಲ್ಲ! ಆ ಪಾಪಪುಣ್ಯದ ಫಲ ನನ್ನ ದೊರೆಗೇ ಹೊರತು, ನಾನೇ ಹೊಣೆಗಾರಿಕೆಯಿಂದ ಮಾಡಿದ್ದ ಉದ್ದಿಷ್ಟ ಪಾಪಕರ್ಮದ ಹೊರತು, ನನಗೇನೂ ಅಂಟಿಲ್ಲವೆಂದು ಕಂಡುಕೊಂಡು, ದೇವರನ್ನು ಪ್ರಾರ್ಥಿಸಿದೆ. 'ನನಗಾವ ದುಷ್ಟ ಸ್ವಾರ್ಥ ಹೊಣೆಗಾರಿಕೆಯ ಕರ್ಮವನ್ನೂ ಹಚ್ಚಬೇಡ' ಎಂದು."

ಶ್ರೀಕೃಷ್ಣ ಇವಳ ತಿಳುವಳಿಕೆಗೆ ಬೆರಗಾಗುತ್ತಾನೆ!... ಬಹುಸಲ ಬಿಡಿಸಿ ಹೇಳಿದರೂ ಅರ್ಜುನನಿಗೆ ತಿಳಿಯಲು ಬಲು ಕಠಿಣವಾದ ಕರ್ಮಯೋಗ ರಹಸ್ಯ, ಅದರ ಕೌಶಲ, ಇವಳಿಗೆ ಇಷ್ಟು ಸುಲಭವಾಗಿ ತಿಳಿದದ್ದು ಹೇಗೆ? ಎಂದು ಚಿಂತಿಸುತ್ತಾನೆ!... ಕಂಸನ ಕ್ರೂರ ಆಜ್ಞೆಗಳ ಕಠೋರತೆಯಲ್ಲಿ ಇವಳು ಮುಳುಗದೆ, 'ಅದರಿಂದ ತನ್ನ ಆತ್ಮೋದ್ಧಾರ ಶಕ್ಯವೇ?... ಅದಕ್ಕೇನು ದಾರಿ? ಎಂದು ಸದಾ ಚಿಂತಿಸುತ್ತಿರಬೇಕು!! ಎಲ್ಲೋ ಹೇಗೋ ಆ ವೃತ್ತಿ ಹಿಡಿಸದೇ, ಜುಗುಪ್ಸಾಭಾವ ಉಂಟಾಗಿದ್ದುದೇ ಇವಳಿಗೆ ಆ ನಿರ್ಗಮದ್ವಾರ ಆಗಿರಬೇಕು!... ಆಂ!... 'ಗೋಪ್ತುಂ ಇಚ್ಛಾ ಜುಗುಪ್ಸಾ!' ಅಲ್ಲವೆ? ತನ್ನನ್ನು ರಕ್ಷಿಸುವ ಇಚ್ಛೆ ಏರ್ಪಟ್ಟರೆ, ಆ ಜುಗುಪ್ಸೆಯೂ ಮೋಕ್ಷದ ಹಾದಿ ಆದೀತು!... ಕಂಸನಿಗೆ ಪರವಶಳಾದದ್ದು ಸ್ವೇಚ್ಛೆಯಿಂದಲ್ಲ ಎಂಬುದು ಇವಳನ್ನುಳಿಸಿತು!... ಆ ಸ್ವೇಚ್ಛೆ ಇದ್ದೇ ಕರ್ಮ ಕೆಟ್ಟಿ!... ಕೆಟ್ಟದ್ದನ್ನೇ ಮಾಡುವವರಿಗೂ ಈ ಬಗ್ಗೆ ಜ್ಞಾನೋದಯವಾದರೆ !!... ಶ್ರೀಕೃಷ್ಣ ಕೆಲಹೊತ್ತು ಅನ್ಯಮನಸ್ಕನಾದ!... ಪೂತನೆ ಕಥೆ ಹೇಳದೆ ನಿಂತಳು!...

ಶ್ರೀಕೃಷ್ಣ: "ಅಂದರೆ, ನಿನಗೆ ಅಂದೇ ಬಾಳಲು ಬೇರೆ ದಾರಿ ಇದ್ದಿದ್ದರೆ... ನಿನ್ನ ವಿಷವನ್ನು ಯಾರಾದರೂ ಮಾಂತ್ರಿಕನು ಇಲ್ಲ ಮಾಡಬಲ್ಲವನಾಗಿದ್ದರೆ,... ಕಂಸನ ಊಳಿಗವನ್ನು ತೊರೆಯಲು ಸಿದ್ಧಳಿದ್ದೆಯಾ!"

**ಪೂತನಾ:** "ನನ್ನ ಹೃದಯವನ್ನೇ ನೀನಾಡಿದೆ, ಸ್ವಾಮಿ!.. ಅರಮನೆಯಲ್ಲಿ ಎಲ್ಲರೂ.. ಹೇಳುತ್ತಿದ್ದರು!.. "ಕಂಸನನ್ನು ಕೊಲ್ಲುವ, ಜನರನ್ನು ರಕ್ಷಿಸುವ ರಕ್ಷಕ ಹುಟ್ಟಿ ಬಂದಿದ್ದಾನಂತೆ!... ದೇವಕಿಯ ಎಂಟನೇ ಶಿಶುವಂತೆ!... ರಹಸ್ಯವಾಗಿ ಗೋಕುಲದಲ್ಲೋ, ಎಲ್ಲೋ ಬೆಳೆಯುತ್ತಿರುವನಂತೆ!...ಎಂದು! ನನಗೆ 'ಕಂಸದೊರೆ ಕೊಟ್ಟ ಕೆಲಸ, ನನ್ನ ವಿಮೋಚನೆಗೇ ಏಕೆ ದಾರಿ ಆಗಬಾರದು?' ಎಂದು ಒಮ್ಮೆ ಆಸೆ ಆಯಿತು, ಕೃಷ್ಣ! ನೀನೆಂದ ಆ ಮಾಂತ್ರಿಕ ನೀನೇ ಆಗಿದ್ದೆ ಎಂಬುದು, ಜನ ನಿನ್ನನ್ನು ರಕ್ಷಕ ಎಂದು ಪದೇ ಪದೇ ಕರೆಯುತ್ತಿದ್ದುದರಿಂದ ನನಗೆ ಭಾಸವಾಗುತ್ತಿತ್ತು!... ಗೋಕುಲದಲ್ಲಿ ನಾನು ಕೇಳಿದ ಆ ಕೀರ್ತನೆ ಆ ಆಸೆಯನ್ನು ಕುದುರಿಸಿತು, ಬೆಳೆಸಿತು! ರಕ್ಷಕನನ್ನು ಹುಡುಕುವ ಕಾಯಕವಾಗಿ, ಕಂಸನ ಆ ಆಜ್ಞೆ, ನನಗೆ ಮಾರ್ಪಟ್ಟಿತ್ತು! ನನ್ನ ಮಾರ್ಪಾಟಿನ ಸಂಧಿ ಇದೇ ಇರಬೇಕು! ಅಲ್ಲವೇ? ರಕ್ಷಕನನ್ನು ಹುಡುಕುವ ಭರದಲ್ಲಿ ನೂರಾರು ಶಿಶುಗಳು ನನ್ನ ಶರೀರದ ವಿಷದಿಂದ ಹತರಾದರು! ನನಗೆ ಲಕ್ಷ್ಯ ಅತ್ತ ಇದ್ದಿಲ್ಲ! 'ನಿರಪರಾಧಿಗಳು ಹೀಗೆ ಸಾಯುತ್ತಿದ್ದಾರಲ್ಲ!' ಎಂಬ ವ್ಯಥೆ ನನ್ನನ್ನು ಸುಡುತ್ತಿದ್ದರೂ, ಈ ಅನಿವಾರ್ಯತೆಯನ್ನು ನಾನು ಕಲ್ಲುಮನಸ್ಸಿನಿಂದ ಸಹಿಸಿ, ರಕ್ಷಕನ ಅನ್ವೇಷಣೆ ಬಿಡಲಿಲ್ಲ!"

ಶ್ರೀಕೃಷ್ಣನಿಗೆ ಮತ್ತೆ ಅಚ್ಚರಿ ಆಗುತ್ತದೆ! ಒಬ್ಬ ರಕ್ಕಸಿಯ ಉಪಾಸನೆ ಈ ರೂಪವನ್ನು, ಈ ತೀವ್ರತೆಯನ್ನು ಈ ವಿಷಮ ಸನ್ನಿವೇಶದಲ್ಲಿ ಪಡೆದು ಹೀಗೆ ನಡೆಯಬಹುದೆಂಬ ಕಲ್ಪನೆಗೆ ಬೆರಗಾಗುತ್ತಾನೆ! ಕ್ಷತ್ರಿಯರ ಯುದ್ಧ ವ್ಯಾಪಾರದಲ್ಲೂ ಇದೇ ಬಗೆಯ ಕೊಲೆಯ ಅನಿವಾರ್ಯತೆ ಇದ್ದರೂ, ಅದೂ ಭಗವಂತನ ಉಪಾಸನೆಯಾಗಿ, ಯೋಗವಾಗಿ ಮಾರ್ಪಡಬಹುದೆಂಬ ತನ್ನ ಉಪದೇಶ ಅರ್ಜುನನಿಗೆ ತಿಳಿಯಲು ಎಷ್ಟು ಕಠಿಣವಾಯ್ತು! ಯೋಗಿಗಳಾಗ ಹೊರಟವರಿಗೆ ಇನ್ನೂ ಎಷ್ಟು ಜನರಿಗೆ ತಿಳಿದಿದೆ?

***ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ।***
***ಹತ್ವಾಪಿ ಸ ಇಮಾನ್ ಲೋಕಾನ್ ನಾಯಂ ಹಂತಿ ನಹನ್ಯತೇ॥***

ಈ ಶ್ಲೋಕವನ್ನು ಕೃಷ್ಣ ಮೆಲುದನಿಯಲ್ಲಿ ತನಗೆ ತಾನೇ ಎಂದುಕೊಂಡ! ಪೂತನೆ ಅದನ್ನು ಕೇಳಿ,

**ಪೂತನಾ:** "ಅದೇನು ಶ್ಲೋಕ, ಪ್ರಭು?" ಎಂದು ಮುಗ್ಧಳಾಗಿ ಕೇಳುತ್ತಾಳೆ!

**ಶ್ರೀಕೃಷ್ಣ:** "ನೀನು ಕಂಡುಕೊಂಡ ಆತ್ಮೋದ್ಧಾರದ, ಕ್ರೂರ ಸಂದರ್ಭದಲ್ಲೂ ಕಠೋರ ನಿಷ್ಠೆಯ, ಇನ್ನೊಂದು ಸೂತ್ರ ಅದು!.... ಗೀತೆಯಲ್ಲಿ ಅರ್ಜುನನಿಗೆ ಎಂದದ್ದು!"

ಪೂತನೆ ಅದನ್ನು ಮತ್ತೆ ಹೇಳಿಸಿ, ನೆನೆಪಿಟ್ಟುಕೊಳ್ಳಲು ಯತ್ನಿಸುತ್ತಾಳೆ!

**ಶ್ರೀಕೃಷ್ಣ:** " ಸರಿ! ಆ ನಿನ್ನ ರಕ್ಷಕ ನಿನಗೆ ದೊರೆತದ್ದು ಹೇಗೆ?"

**ಪೂತನಾ:** "ಗೋಕುಲದಲ್ಲೇ ಅವನಿರಬೇಕೆಂಬ ಬಹುಜನರ ದನಿ ನನ್ನ ಮನೋವೃತ್ತಿಗೆ ತೀವ್ರತೆ ಇತ್ತಿತ್ತು! ದಿನಕ್ಕೊಂದು ವೇಷಾಲಂಕಾರ ಮಾಡಿಕೊಂಡು ಅಲ್ಲೇ ಸುಳಿಯುತ್ತಿದ್ದೆ!... ಯಶೋದಾದೇವಿಯ ಪ್ರೀತಿಯನ್ನು ಗಳಿಸಿದೆ!... ಕ್ರಮೇಣ ನಂದಗೋಪರ ಹಾಳಿಗೆಯತ್ತ ಒಮ್ಮೆ ದೃಷ್ಟಿ ಹರಿಸಿದೆ!.... (ಆ ದೃಶ್ಯವೆಲ್ಲ.. ಅವಳ ಕಣ್ಣಮುಂದೆ ಸುಳಿಯುತ್ತದೆ!)... ಭೋಗದ ಅರಮನೆಯಂತಲ್ಲದೆ ದೇವಾಲಯದ ಭವ್ಯತೆಯನ್ನು ಹೊಂದಿತ್ತು ಆ ನಿವಾಸ! ಸದಾ ಬ್ರಾಹ್ಮಣರು ವೇದಪಠನ ಮಾಡುತ್ತಾ, ಪೂಜೆ ನಡೆಸುತ್ತಾ, ಬಂದು ಹೋಗುತ್ತಿದ್ದ ನಿವಾಸ ಅದು!... ಇಲ್ಲೇ ನನ್ನ ರಕ್ಷಕ-ಎಲ್ಲರ ರಕ್ಷಕ ಇರಬೇಕೆಂದು ಹೃದಯ ಹೇಳಿತು!... ಒಳಹೋಗುವುದೆಂತು?... ಸಮಯ ನಿರೀಕ್ಷಿಸಿದೆ!.... ಒಂದು ದಿನ!... ಈ!!

ಆ ಸುದಿನ ಹೀಗೆ ಬಂತು! ಗೋಕುಲದ ಎಲ್ಲ ತಾಯಂದಿರೂ ಸಿಂಗರಿಸಿಕೊಂಡು ನಿನ್ನದೊಂದು ಹಬ್ಬದ ಆಚರಣೆಗೆ ಅಲ್ಲಿ ಗುಂಪು ಗುಂಪಾಗಿ ಹೊರಟಿದ್ದರು!... ನಾನೂ ಹಲವರ ಸ್ನೇಹ ಪಡೆದಾಗಿತ್ತು! ಅನುಮಾನ ಬಾರದಂತೆ ಅವರೊಡನೆ ಸೇರಿ ಹೊರಟೆ... ಗೋಕುಲದಲ್ಲಿ ಐದು ಲಕ್ಷ ಪ್ರಜೆಗಳಿದ್ದರು ಎಂಬುದು ಅಂದಿನ ಖ್ಯಾತಿ!... ಎಷ್ಟು ಕುಟುಂಬಗಳೆಂಬುದನ್ನು ಯೋಚಿಸು!.... ಅಲ್ಲೊಂದಿಲ್ಲೊಂದು ಮಗು ನನ್ನ ಕೈಲಿ ಸತ್ತಿದ್ದರೂ, ಯಾವ ನಿರ್ಭಾಗ್ಯ ತಾಯಿಗೂ ನನ್ನ ಗುರುತು ತಿಳಿಯದಂತೆ ಮಾಯವಾಗಿ, ಮಾಯವಾಗಿ ತಪ್ಪಿಸಿ ಬರುತ್ತಿದ್ದೆ! ಅವರು ಘೋರ ರೂಪದ ಕಲ್ಪನೆಯ ರಕ್ಕಸಿಯೊಬ್ಬಳನ್ನು ಹುಡುಕುತ್ತಿದ್ದರು! ರಕ್ಕಸಿಯರು ಸುರೂಪದಲ್ಲೂ ಇರಬಹುದೆಂಬುದನ್ನು ಅವರೇನು ಬಲ್ಲರು, ಕೃಷ್ಣ! ಆಗ ನನ್ನ ಗತಿ ಏನಾಗುತ್ತಿತ್ತು!!... ನಂದಗೋಪರ ಮಾಳಿಗೆಯಲ್ಲಿ ನನಗೂ ಇತರರಂತೆ ಸ್ವಾಗತವಾಯ್ತು! ನಾನು ಕಂಡ ಪ್ರಥಮ ಸ್ವಾಗತ, ಸಮಾಜೋತ್ಸವ ಅದು!! ಅದು ನನ್ನ ಪರಿವರ್ತಿತ ಹೃದಯದ ಸದಿಚ್ಛೆಯ, ಆತ್ಮೋದ್ಧಾರದ ಸ್ವಾಗತವೆಂದು ನಾನು ಬಗೆದೆ, ಕೃಷ್ಣ! ತಪ್ಪೆ!! ಕೃಷ್ಣದ್ವಾರದ ರಕ್ಷಕರು ಹಾಗೆ ತಿಳಿದೇ ನನ್ನನ್ನು ಒಳಬಿಟ್ಟಿರಬೇಕು! ಇಲ್ಲವಾದರೆ ಸರ್ವಜ್ಞನ ಸೇವಕರು ನನ್ನನ್ನು ನಿರಾಕರಿಸುತ್ತಿರಲಿಲ್ಲವೇ?... ಒಳನಡೆದೆ!.... ಪನ್ನೀರು ಹಾಕಿದರು! ಹೂ ಮುಡಿಸಿದರು! ಬಾಗಿನ ನೀಡಿದರು! ಓ!... ಹಿಗ್ಗಿದೆ!... ಯಶೋದೆ, ಅತಿಥಿಗಳಿಗೆ ಸ್ವಾಗತದ, ಬಾಗಿನ ನೀಡುವ ಸಂಭ್ರಮದಲ್ಲಿದ್ದಳು.... ಗುಂಪೋ ಗುಂಪು!... ನಾನು ತೊಟ್ಟಿಲ ಬಳಿ ನಡೆದೆ!... ಅಲ್ಲಿ ಯಾರೂ ಇರಲಿಲ್ಲ!... ನನಗೆ ಆಶ್ಚರ್ಯವೋ ಆಶ್ಚರ್ಯ!..."

**ಶ್ರೀಕೃಷ್ಣ:** " ಆಶ್ಚರ್ಯವೇಕೆ? ನೀನು ಕಂಡ ಶಿಶು ಹಾಗಿತ್ತೆ?"

**ಪೂತನಾ:** "ಶಿಶುವಲ್ಲ! ಆ ಸನ್ನಿವೇಶ!... ಸುತ್ತಮುತ್ತ ಮಕ್ಕಳು ಸಾಯುತ್ತಿದ್ದ ದಿನಂಪ್ರತಿ ವದಂತಿ ಇದ್ದರೂ, ಅಂದು ಅಲ್ಲಿ ಈ ಶಿಶುವನ್ನು ಕಾಯುವವರು ಯಾರೂ ಇದ್ದಿಲ್ಲದ ಆ ಸನ್ನಿವೇಶ ತುಂಬಾ ಆಶ್ಚರ್ಯಕರವಾಗಿತ್ತು!"

**ಶ್ರೀಕೃಷ್ಣ:** "ಯಾರಾದರೂ ಕಾವಲಿದ್ದರೆ ಏನು ಮಾಡುತ್ತಿದ್ದೆ?"

**ಪೂತನಾ:** "ಏನು ಮಾಡುತ್ತಿದ್ದೆನೇ?... ಆ ಶಿಶುವನ್ನು ಕಂಡೊಡನೆಯೇ 'ಇವನೇ ನನ್ನ ರಕ್ಷಕ' ಎಂದು ಹೃದಯ ಹೇಳಿತು!... ಸಂದೇಹ ಉಳಿಯಲಿಲ್ಲ!... ಯಾರಾದರೂ ತಾಯಂದಿರೋ, ಉಳಿದವರೋ ಅಲ್ಲಿದ್ದರೆ, 'ಅಮ್ಮಾ! ಅಪ್ಪಗಳಿರಾ! ನಾನು ಪಾಪಿ! ಕಂಸನ ಸೇವಕಿ! ಶಿಶುಘಾತಿನಿಯಾಗಿ ಏರ್ಪಟ್ಟವಳು! ನನಗಿದು ಬೇಕಿಲ್ಲ!' ಎಂದು ತಪ್ಪೊಪ್ಪಿ, ಆ ರಕ್ಷಕನೆದುರು ನನ್ನ ಹೃದಯ ತೋಡಿಕೊಂಡು, ಅವನ ಪಾದಮುಟ್ಟಿ, ಎಲ್ಲವನ್ನೂ ಹೇಳಿ, ಯಾರ ಶಿಕ್ಷೆಗೂ ಸಿದ್ಧಳಾಗಿ, ಪ್ರಾಣ ಬಿಡಲೂ ತಯಾರಾಗಿದ್ದೆ! ನನಗೆ ಬೇಕಿದ್ದುದು ಆ ವಿಷಶರೀರವನ್ನು ಹೇಗಾದರೂ ನೀಗುವುದು ಆಗಿತ್ತು! ಕಂಸನೇ ಕೊಂದರೇನು? ನಂದ ಗೋಪಭಟರು ಕೊಂದರೇನು? ಅದು ನನಗೆ ವಿಮುಕ್ತಿಯೇ ಅಲ್ಲವೇ?... 'ಸಿಕ್ಕಿಬಿದ್ದರೆ' ಎಂಬ ಭಯದಿಂದ ಅಂದು ಎಂತೂ ದೂರಳಾಗಿದ್ದೆ!..."

**ಶ್ರೀಕೃಷ್ಣ:** "ಯಶೋದೆಯ ಶಿಶುವಿಗೆ ಮೊಲೆಯುಣಿಸುತ್ತಿರಲಿಲ್ಲವೇ?... ಅದೂ ಸತ್ತಿದ್ದರೆ ನಿನಗೆ ಮೋಕ್ಷವಾಗುತ್ತಿತ್ತೆ?... ಆ ಮೊಲೆಯುಣಿಸುವ ಬಯಕೆ ಬಂದಿತು ಹೇಗೆ? ಅದರಲ್ಲಿ ದುರುದ್ದೇಶ್ಯ ವಿರಲಿಲ್ಲವೇ?"

**ಪೂತನಾ:** "ಆ ಕ್ಷಣದ ನನ್ನ ಮನದ ಹೊಯ್ದಾಟಗಳನ್ನೇನು ವರ್ಣಿಸಲಿ?... ಶಿಶುವು ನನಗೆ ರಕ್ಷಕನೇ ವಿನಾ ನನ್ನ ಎದೆಹಾಲಿನಿಂದ ಅವನು ಸಾಯುವವನಲ್ಲ! ಎಂಬ ನಿಶ್ಚಯ ಅದನ್ನು ನೋಡಿದೊಡನೆಯೇ ನನ್ನ ಹೃದಯದಲ್ಲಿ ಬೇರೂರಿತು!... ಎದೆ ಹಾಲು ಉಣಿಸಿದರೂ ಇಲ್ಲವಾದರೂ ಅವನಿಗೇನೂ ಲಾಭನಷ್ಟಗಳಿಲ್ಲವಾದಂತೆ, ನನಗೂ ಯಾರ ನಷ್ಟದ ಭಯವೂ ಇರಲಿಲ್ಲ! ಹಾಗೆ ಉಣಿಸಿ ಕಂಸನ ಆಜ್ಞೆಯನ್ನು ಪೂರೈಸುವ ವಿಚಾರವಂತೂ ನನಗೆ ಬರಲೇ ಇಲ್ಲ!... ಆ ಹಲವು ದಿನ... ನಂದಗೋಕುಲಕ್ಕೆ ನಡೆದಾಡಿ, ಆ ದಿವ್ಯ ಸ್ತ್ರೀಯರ ಒಡನಾಟದಲ್ಲಿ... ಆ ಭಜನೆ, ಕೀರ್ತನಾದಿಗಳನ್ನು

ಕೇಳುತ್ತಿದ್ದ ಸುದಿನಗಳಲ್ಲಿ ನನ್ನ ಸ್ಥಿತಿಯೇ ನನಗೆ ಮರೆತಿತ್ತು! ಕಂಸನ ನೆನಪೇ ಇರದ ಆ ಸ್ಥಿತಿ ಅವರ್ಣನೀಯ!!"

**ಶ್ರೀಕೃಷ್ಣ:** "ಹಾಗಾದರೆ ಎದೆಹಾಲು ಉಣಿಸಿದೆಯೇಕೆ?"

**ಪೂತನಾ:** "ಕೃಷ್ಣ! ಅದು ಅಚಿಂತಿತವಾಗಿ ನಡೆದೇ ಹೋಯಿತು!... ಮಾಳಿಗೆಗೆ ಬಂದವರೆಲ್ಲ ಹಣ್ಣು, ಕಾಯಿ, ಹೂವು, ಮಗುವಿಗೆ ಉಪಾಯನಗಳು, ಯಶೋದಾ ದಂಪತಿಗಳಿಗೆ ಉಡುಗೊರೆಗಳು ಎಲ್ಲ ತಂದಿದ್ದರು!... ನಾನೊಬ್ಬಳು ಬರಿಗೈಲಿ ಬಂದಿದ್ದೆ!! ಅಂಥ ಬೆಲೆಬಾಳುವ ರೇಶಿಮೆ ಉಟ್ಟು, ಮೈತುಂಬ ಬಂಗಾರದ ಒಡವೆ ಧರಿಸಿ, ಭಾರವಾಗಿ ಬಗ್ಗಿ ಬಂದವಳಿಗೆ ಅದು ತೋರಲಿಲ್ಲ! ಕಂಸನ ಕಡೆಯವರು ಹಾಗೆ ಹೋಗಬೇಕೆಂದು ಎಚ್ಚರಿಸಲೂ ಇಲ್ಲ! ನನಗೆ ಸ್ವತಂತ್ರವಾದ ಆರ್ಥಿಕ ಸ್ಥಿತಿ ಎಲ್ಲಿತ್ತು, ಕೃಷ್ಣಾ!.. ರಕ್ಷಕನಾದ ನಿನಗೆ ಏನಾದರೂ ಅಂದು ಕೊಡಲೇಬೇಕೆಂಬ ಉತ್ಕಟ ಬಯಕೆ ಆಯ್ತು!... ಸತ್ತು ಹೋದ ನನ್ನ ಮಗುವಿನ ನೆನಪು ಆಗಿ ಎದೆಹಾಲು ಉಕ್ಕಿತು!... ತಡೆಯುವುದಾಗಲಿಲ್ಲ!... ನಾನು ನಿನಗೆ ಕೊಡಬಹುದಿದ್ದ ನನ್ನ ಸರ್ವಸ್ವ... ಕಂಸವಶವಲ್ಲದ್ದು!... ಅಂದು ಅದು ಒಂದೇ ಆಗಿತ್ತು!... ಇದು ಅರ್ಪಣಯೋಗ್ಯ ವಲ್ಲವೆಂಬ ಬುದ್ಧಿ ನನಗೆ ಮರೆತೇ ಹೋಯಿತು!... ಆ ಶಿಶುವಿನ ದರ್ಶನ ಆ ಮಾಯೆಯನ್ನು ನನಗೆ ಹಾಗೆ ಬೀಸಿತ್ತು! ನನ್ನ ಸ್ಥಿತಿಯನ್ನು, ಅಲ್ಲಿದ್ದವರಾರೂ ದೂರದಿಂದ ಗಮನಿಸಿದಂತೆಯೂ ಕಾಣಲಿಲ್ಲ!... ನಿನ್ನನ್ನು ಕೈಗೆತ್ತಿಕೊಂಡೆ!!... ಎದೆಗವಚಿಕೊಂಡೆ!! ಪ್ರೀತಿಯಿಂದ ತಬ್ಬಿ ಮುದ್ದಿಸಿದೆ!..."

ಪೂತನೆ ಬಿಕ್ಕಿ ಬಿಕ್ಕಿ ಅಳುತ್ತಾಳೆ!... ಶ್ರೀಕೃಷ್ಣನ ಗಂಭೀರವದನದಲ್ಲೂ ಕಣ್ಣೀರು ಕಾಣಿಸಿಕೊಳ್ಳುತ್ತದೆ! ಅವನದನ್ನು ನಿವಾರಿಸುವುದಿಲ್ಲ!...

*ಸ್ತನ್ಯಂ ತದ್ವಿಷ ಸಂಯುಕ್ತಂ ರಸ್ಯಮಾಸೀತ್ ಜಗದ್ಗುರೋಃ॥*

ಎಂಬ ಮುನಿವಚನವನ್ನು ಕೃಷ್ಣ ನೆನೆಯುತ್ತಾನೆ!

**ಶ್ರೀಕೃಷ್ಣ:** "ವಿಷಪೂರ್ಣವಾಗಿದ್ದರೂ ಆ ಸ್ತನ್ಯದಲ್ಲಿ ಏನೊ ವಿಶಿಷ್ಟ ರಸವೊಂದು ಇದ್ದುದು ಈಗ. ನನಗೆ ಅರ್ಥವಾಯಿತು!... ಹೇಳು, ಮುಂದೇನಾಯಿತು?"

**ಪೂತನಾ:** "ಮುಂದೇನಾಯಿತೆಂದು ಹೇಳ ಬೇಕಾದವನು ನೀನಲ್ಲವೆ, ಪ್ರಭು!... ನೀನು ನನ್ನ ಸರ್ವಸ್ವವನ್ನೂ, ಪ್ರಾಣವನ್ನೂ, ಲೋಕ ಯಾವುದನ್ನು ಹೇಸಿಗೆಯ ಭಾವದಿಂದ ನೋಡುತ್ತಿತ್ತೋ ಆ ವಿಷವನ್ನೂ ಪಾನ ಮಾಡಿದೆ! ಸ್ವೀಕರಿಸಿದೆ!... ನನ್ನನ್ನುದ್ಧರಿಸಿದೆ!... ರಕ್ಷಿಸಿದೆ!"

**ಶ್ರೀಕೃಷ್ಣ:** "ನಿನ್ನ ಭಯಂಕರ ರಾಕ್ಷಸಾಕಾರವೊಂದು ಅಲ್ಲಿ ಆಮೇಲೆ ಬಿದ್ದು, ಬಹಿರಂಗವಾಯಿತಂತಲ್ಲ! ನಾನದರ ಮೇಲೆ ಆಡುತ್ತಿದ್ದಾಗ, ನನ್ನ ತಾಯಿ ಸಹ ನನ್ನನ್ನೆತ್ತಿಕೊಳ್ಳಲು ಅಂಜಿದಳಂತಲ್ಲ!"

**ಪೂತನಾ:** "ಪ್ರಭು! ನನ್ನಲ್ಲಿ ಪರಿವರ್ತನೆ ಆದ ದಿನದಿಂದ ಒಂದು ಪ್ರಶ್ನೆಗೆ ಉತ್ತರ ಸಿಕ್ಕಿತ್ತು! ಅದೂ ನನ್ನ ಸ್ವಂತ ಅನುಭವದಿಂದ! ಆ ಪ್ರವಚನಕಾರರೂ ಅದನ್ನೇ ಸಮರ್ಥಿಸಿದ್ದರು!... ದೇವಾಸುರ ಯುದ್ಧವು ಪ್ರತಿಜೀವಿಯ ಹೃದಯದಲ್ಲೇ ಸದಾ ನಡೆದೇ ಇರುತ್ತದೆಂದೂ, ಆದುದರಿಂದ ಪ್ರತಿವ್ಯಕ್ತಿಯ ವ್ಯಕ್ತಿತ್ವದಲ್ಲೂ ಒಂದು ದ್ವಂದ್ವ ಏರ್ಪಡುವುದು ಸಹಜವೆಂದೂ, ನಮ್ಮಲ್ಲಿನ ಆಸುರೀ ಶಕ್ತಿ ಸತ್ತು ದೈವೀ ಶಕ್ತಿ ಬೆಳೆಯುವುದೇ ಪರಿಪೂರ್ಣತೆಗೆ ದಾರಿ ಎಂದು!.... ಈ ಮಾತು ನನಗರ್ಥವಾದ ದಿನವೇ ಕಂಸದೊರೆ ನನ್ನಲ್ಲಿ ಬೆಳೆಸಿದ್ದ ಆಸುರೀ ಶಕ್ತಿಯ ಬೇರುಗಳು ಒಣಗಲಾರಂಭಿಸಿ, ಒಂದು ಅವ್ಯಕ್ತ ಆಸೆ ಚಿಗುರಿ, ಮುಂದಿನ ಶಾಶ್ವತ ಪರಿವರ್ತನೆಗೆ ದಾರಿ ಆಗಿತ್ತು! ಶರೀರ ಮಾತ್ರ ಪಾಪ ಪೂರಿತವಾಗಿ, ಇನ್ನು ತಿದ್ದಲಾರದ ಸ್ಥಿತಿಗೆ ಮುಟ್ಟಿ, ತನ್ನ ವಿಮೋಚನಕಾಲಕ್ಕೆ ಕಾಯುತ್ತಿತ್ತು!... ಕೃಷ್ಣ! ಹೀಗೆ ಹೇಳಲೇ!... ನನ್ನಲ್ಲಿದ್ದ ಆಸುರೀಪೂತನೆಯನ್ನು ನೀನು ಕೊಂದೆ! ಅವಳ ಸೆರೆಯಲ್ಲಿ ಸಿಕ್ಕ ಈ ನಿಜ ಪೂತನೆಯನ್ನು

ಬಿಡಿಸಿದೆ! ಸತ್ತವಳು ನನ್ನ ಸೆರೆ ಮನೆಯಾಗಿದ್ದವಳು; ನೀನು ಆಡಿದ್ದೂ ಅವಳ ಮೈಮೇಲೆಯೇ! ಅದೂ ನಿನ್ನ ಸಂಗದಿಂದ ಪವಿತ್ರವಾಗಿ, ಸುಟ್ಟಾಗ ಸುಗಂಧ ಚೆಲ್ಲುತ್ತಾ ಉರಿಯಿತಂತೆ! ಅದನ್ನು ನೋಡಲು ನಾನಲ್ಲಿರಲಿಲ್ಲ!"

ಪೂತನೆಯ ವಿವೇಚನಾ ಶಕ್ತಿಗೆ ಕೃಷ್ಣ ಬೆರಗಾಗುತ್ತಾನೆ!... ವೇದವನ್ನೋದಿದ ಪಂಡಿತರೂ ಆಗಾಗ ಮರೆಯುವ ಈ ದೈವಾಸುರಯುದ್ಧ ಮರ್ಮ ಇವಳಿಗೆ ಸುಲಭವಾಗಿ ತಿಳಿಯಿತು ಹೇಗೆ?.. ಅರ್ಜುನನಿಗೆ ಉಪದೇಶಿಸಿದ್ದ ದೈವಾಸುರ ಸಂಪತ್ತುಗಳ ಅಂತರ ತಿಳಿದದ್ದು ಹೇಗೆ?... ಯಾವ ಜನ್ಮದ ಪುಣ್ಯವೋ!... ಮುನಿ ವಾಕ್ಯದ ನೆನಪಾಯಿತು!

*ಜಿಘಾಂಸಯಾಪಿ ಹರಯೇ ಸ್ತನ್ಯಂ ದತ್ವಾಽಽಪ ಸದ್ಗತಿಂ।*
*ಕಿಂ ಪುನಃ ಶ್ರದ್ಧಯಾ ಭಕ್ತ್ಯಾ ಕೃಷ್ಣಾಯ ಪರಮಾತ್ಮನೇ॥*
*ಯಚ್ಛನ್ ಪ್ರಿಯತಮಂ ಕಿಂ ನು ರಕ್ತಾಸ್ತನ್ಮಾತರೋ ಯಥಾ।*
*ಪದ್ಭ್ಯಾಂ ಭಕ್ತ ಹೃದಿಸ್ಥಾಭ್ಯಾಂ ವಂದ್ಯಾಭ್ಯಾಂ ಲೋಕವಂದಿತೈಃ॥*
*ಅಂಗಂ ಯಸ್ಯಾ! ಸಮಾಕ್ರಮ್ಯ ಭಗವಾನಪಿಬತ್ ಸ್ತನಂ।*

*ಯಾತುಧಾನ್ಯಪಿ ಸಾ ಸ್ವರ್ಗಂ ಅವಾಪ ಜನನೀಗತಿಂ॥...*

ಬಹುಹೊತ್ತು ಶ್ರೀಕೃಷ್ಣ ಈ ಲೋಕ ವಿಸ್ಮಯವನ್ನು ಚಿಂತಿಸುತ್ತಾ ಕುಳಿತ! ಪೂತನೆ ಬೆರಗಾಗಿ ಅವನ ವಿಚಾರಧಾರೆಯನ್ನು ಕಲ್ಪಿಸಿಕೊಳ್ಳಲು ಯತ್ನಿಸಿ ವಿಫಲಳಾಗಿ ಕೇಳುತ್ತಾಳೆ!

**ಪೂತನಾ:** "ಪ್ರಭು! ನನ್ನದೊಂದು ಮುಗ್ಧ ಕಡೆಯ ಪ್ರಶ್ನೆ. ಕೇಳಲೇ?"

**ಶ್ರೀಕೃಷ್ಣ:** (ಚಕಿತನಾಗಿ) "ಕೇಳು, ತಾಯಿ!"

**ಪೂತನಾ:**"ಅಂದು ನಿನಗರ್ಪಿಸಲು ನನಗೆ ಬೇರೇನೂ ಇರಲಿಲ್ಲ! ಆ ವಿಷದ ಹಾಲು ನಿನಗೆಷ್ಟು ಕಹಿಯಾಗಿತ್ತೋ!... ಎಷ್ಟು ಯಾತನೆ ಮಾಡಿತೋ!... ನನ್ನನ್ನು ಕ್ಷಮಿಸಿದೆನೆಂದು ಹೇಳುವೆಯಾದರೆ, ಈಗಲಾದರೂ ನೆಮ್ಮದಿಯ ನಿಟ್ಟುಸಿರಿಡುತ್ತೇನೆ..."

**ಶ್ರೀಕೃಷ್ಣ:** (ಗಹಗಹಿಸಿ ನಗುತ್ತಾನೆ!)"ನನ್ನ ಯಶೋದೆ ತಾಯಿಯಂತೆ ನೀನೂ ಮುಗ್ಧಳು, ಹೋಗು!" (ಮತ್ತೆ ನಗುತ್ತಾನೆ!)... "ಕಲ್ಲು ಮುಳ್ಳು ವಿಷ ಜನ್ತುಗಳು, ಶಿಷ್ಟರು ದುಷ್ಟರು, ಅಖಿಲಾಂಡಕೋಟಿಗಳು... ಎಲ್ಲವನ್ನೂ ಉಂಡು ಮುಗಿಸುವವನನ್ನು ಈ ಪ್ರಶ್ನೆ ಕೇಳುವೆಯಾ?... ನನಗೆ ರುಚಿ ತಿಳಿದರಲ್ಲವೆ?.... ಶ್ರುತಿ ನನಗೆ ಈ ಎಲ್ಲವೂ ಅನ್ನ, ಓದನವೆನ್ನುತ್ತದೆ! ವ್ಯಾಸರು ನನ್ನನ್ನು 'ಎಲ್ಲ ತಿನ್ನುವನು'- 'ಅತ್ತಾ' ಎಂದು ಸೂತ್ರಿಸಿದ್ದಾರೆ!... ಕೇಳು!.... ಸಮುದ್ರ ಮಥನಕಾಲದಲ್ಲಿ ಹುಟ್ಟಿದ ಕಾಲಕೂಟವನ್ನು ಕುಡಿದ ರುದ್ರದೇವನಿಗೆ ಅದು ಕಂಠದಲ್ಲೇ ನಿಂತು, ಅವನು ಒಂದು ಬಗೆಯ ನಂಜುಂಡನಾದರೆ, ನಾನು ಅದನ್ನು ಕಂಠದ ಕೆಳಗೂ ಇಳಿಸಿ ಜೀರ್ಣಿಸಿಕೊಂಡವನು!... ಅದಕ್ಕಿಂತ ಭಯಂಕರ ಹಾಲಾಹಲವನ್ನು ಇನ್ನೂ ದಿನಾ ಕುಡಿಯುತ್ತಿರುವೆ, ತಾಯಿ! ಯಾವುದೆಂದು ಬಲ್ಲೆಯಾ? ನನ್ನ ಅವತಾರ ವೈಫಲ್ಯಗಳ ವಿಷ! ಯಾರೂ ನನ್ನನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇಹೋದರೆಂಬ ವಿಷ ಅದು!....'

**ಪೂತನಾ:**"ಪ್ರಭು! ನನ್ನನ್ನು ಅಣಕವಾಡುತ್ತಿರುವೆಯಾ?"

**ಶ್ರೀಕೃಷ್ಣ:** "ನೀನು ಸರಿಯಾಗೇ ಅರ್ಥಮಾಡಿಕೊಂಡೆಯೆಂದೇ ನನಗೆ ಸಮೀಪವಾದೆ! ಏನೂ ಓದದೆ, ಜ್ಞಾನಿಯೆಂಬ ಬೀಗಿಲ್ಲದ ನೀನು, ನನ್ನ ತಾಯಿ ಯಶೋದೆ, ಗೋಕುಲದ ಗೆಳೆಯರು,

---

*ಮುಕುಂದ ವಿದ್ವೇಷ ವಿಷಾನುಷಂಗಾತ್ ವಿಯೋಜಿತಾಂಗೀ ಕಿಲ ಪೂತನೈಕಾ।
ಪಪಾತ, ಧನ್ಯಾ ಲಿಲಾಗ್ರಗಣ್ಯಾ ಜಗಾಮ ಚಾನ್ಯಾಮರಲೋಕಲೋಕಂ!!

—ವಾದಿರಾಜಸ್ವಾಮಿಗಳ 'ರುಕ್ಮಿಣೀಶ ವಿಜಯ'ದಿಂದ

ಗೋಪಿಯರು, ಗೋವುಗಳು ನನ್ನನ್ನರಿತಂತೆ, ಈ ತಿಳಿದವರೆಂಬ ಗುಂಪಿನ ವಿದ್ಯಾಮದಾಂಧರು ನನ್ನನ್ನು ತಿಳಿಯಲಿಲ್ಲ! ವೈಪರೀತ್ಯ ನೋಡಿದೆಯಾ?... ತತೋ ಭೂಯ ಇವ ಯ ಉ ವಿದ್ಯಾಯಾಂ ರತಾಃ!... ಅಂಧಂತಮಃ ಪ್ರವಿಶನ್ತಿ!!... ಭೀಷ್ಮನ ವಿದ್ಯೆ, ದ್ರೋಣನ ಉಪಾಸನೆ, ಕರ್ಣನ ವಿದ್ಯೆ, ಏತಕ್ಕೆ ಉಪಯೋಗವಾಯಿತು?.... ನನ್ನೆದುರು ನಿಂತು, ಅದು ತಪ್ಪೆಂದೇ ತಿಳಿಯದ ಮೂಢರು!!!.... ತ್ರಿಭಿರ್ಗುಣಮಯೈರ್ಭಾವೈಃ!... ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಂ ಅವ್ಯಯಂ!!!... ನನ್ನನ್ನರಿಯದ ಓದು ಏತಕ್ಕೆ? ನನ್ನನ್ನರಿತ ಮೇಲೆ ಓದು ಏತಕ್ಕೆ? ಅತ್ರ ವೇದಾ ಅವೇದಾ ಭವನ್ತಿ!... ಇನ್ನೂ ಕೇಳು!.... ನೀನು ಕೊಟ್ಟ ಹಾಲಿನಷ್ಟು ಸಿಹಿ ಹಾಲನ್ನು ನಾನೆಂದೂ ಕುಡಿದೇ ಇರಲಿಲ್ಲ! ಇದು ಸತ್ಯ ಅಮ್ಮ!... ಈ ಮಾತು ಕೇಳಿಲ್ಲವೆ?...

*ಅಣ್ವಪ್ಯುಪಹೃತಂ ಭಕ್ತೈಃ ಪ್ರೇಮ್ಣಾಭೂರ್ಯೇವ ಮೇ ಭವೇತ್।*
*ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ॥*

ನನ್ನಲ್ಲಿ ಪ್ರೇಮವಿಡದವರು, ಅಭಕ್ತರು ಡಂಭಕ್ಕಾಗಿ ಏಷ್ಟೊಂದು ಭಕ್ಷ್ಯಭೋಜ್ಯಾದಿಗಳನ್ನಿತ್ತರೂ ಅವರಲ್ಲಿ ನಾನು ಸಂತೋಷ ಪಡಲಾರೆ! ಭಕ್ತರಾದವರು ಅಣುವನ್ನೇ ಅರ್ಪಿಸಿದರೂ ಅದು ನನಗೆ ತೃಪ್ತಿ ತರುವಷ್ಟು ಸಮೃದ್ಧವಾಗಿ ಬಿಡುತ್ತದೆ! ಇದು ಸಮರ್ಪಣೀಯ ವಸ್ತುವಿನ ಪ್ರಮಾಣದ ಮಾತು ಮಾತ್ರವಲ್ಲ! ವಸ್ತುವಿನ ಗುಣಕ್ಕೂ ಅನ್ವಯ!... ಕುಚೇಲನೆಂಬ ನನ್ನ ಮಿತ್ರನಿಗೆ ನಾನೇ ಹೇಳಿದ ಮಾತಿದು! ಇನ್ನು ಕೊಡುವವರ ಮನೋಭಾವದ ಬಗೆಗೆ ನನ್ನ ಭಕ್ತನೊಬ್ಬ ಹೇಳಿದ ಆ ಮಾತು ಕೇಳಿರುವೆಯಾ?

*ಯಾಃ ಕ್ರಿಯಾಃ ಸಂಪ್ರಯುಕ್ತಾಃ ಸ್ಯುಃ ಏಕಾಂತಗತ ಬುದ್ಧಿಭಿಃ।*
*ತಾಃ ಸರ್ವಾಃ ಶಿರಸಾ ದೇವಃ ಪ್ರತಿಗೃಹ್ಣಾತಿ ವೈ ಸ್ವಯಂ॥*

ನನ್ನಲ್ಲೇ ಅನನ್ಯ ಭಾವವಿಟ್ಟ ಭಕ್ತರು ಏನೆಲ್ಲವನ್ನೂ ಕೈಗಳಿಂದ ಅರ್ಪಿಸುವರೋ, ಅವನ್ನು ನಾನು ತಲೆಯೊಡ್ಡಿ ಸ್ವೀಕರಿಸುತ್ತೇನೆ!... ಸರ್ವಸಮೃದ್ಧನಾದ ನನಗೆ ಭಕ್ತರು ಕೊಡುವ ಯಾವುದರಿಂದ ಆಗಬೇಕಾದ ಲಾಭವೇನು? ಕೊಟ್ಟದ್ದು ಪ್ರೀತಿಯಿಂದಾದರೆ, ಅದೆಲ್ಲವನ್ನೂ ಒಪ್ಪ ಮಾಡಿಕೊಳ್ಳಬಲ್ಲ ನನಗೆ ಅಮೃತವೇನು, ವಿಷವೇನು?... ಅಮೃತವನ್ನೂ ವಿಷ ಮಾಡುವವರು ಈ ಭೂಲೋಕದಲ್ಲಿ ಮಾತ್ರ ಉಂಟು, ತಾಯಿ! ವಿಷವನ್ನೂ ಅಮೃತ ಮಾಡುವುದು ಸೂರ್ಯನಿಗೆ ಶಕ್ಯವೆಂದು ವೇದದಲ್ಲಿ ಅಗಸ್ತ್ಯ ಕೊಂಡಾಡಿದ್ದಾನೆ! ಸೂರ್ಯನನ್ನು ಹಡೆದ ನನಗೆ ಅದು ಅಸಾಧ್ಯವೇ?.... 'ನ ಕಂಟಕಾರಿಕಾ ಪುಷ್ಪಂ ದೇವಾಯ ವಿನಿವೇದಯೇತ್' ಮುಳ್ಳು ಗಿಡದ ಮೇಲಿನ ಹೂವನ್ನು ನನಗೆ ಅರ್ಪಿಸಬಾರದೆಂದು ಶಾಸ್ತ್ರ ಹೇಳುತ್ತದೆಯಷ್ಟೆ!... ಶಾಸ್ತ್ರವೆಂದರೆ ನನ್ನದೇ ಶಾಸನ!... ಅದನ್ನೇಕೆ ವಿಧಿಸಿದೆನೆಂದರೆ, ಅಂಥ ಹೂಗಳನ್ನು ಕೊಯ್ಯುವಾಗ ಭಕ್ತರ ಕೈಗೆ ಆ ಮುಳ್ಳು ಚುಚ್ಚುವುದು ಬೇಡ! ಎಂದು!... ನನ್ನ ಹೃದಯ ತಿಳಿಯಿತೇ?"

ಪೂತನೆ ಧನ್ಯಭಾವದಲ್ಲಿ ಹಿಗ್ಗಿ ನಿಲ್ಲುತ್ತಾಳೆ... ಮಾಯವಾಗುತ್ತಾಳೆ!...

ಶ್ರೀಕೃಷ್ಣ ಅವಳ ವಿಚಿತ್ರ ಚರಿತ್ರೆಗೆ ಬೆರಗಾಗುತ್ತಾನೆ!.... ಆತ್ಮವಿಕಾಸಕ್ಕೆ ವಿಶೇಷ ವಾತಾವರಣವನ್ನು ಹುಡುಕುವವರು ಎಷ್ಟು ವಿಕ್ಷಿಪ್ತರು!... ಇದ್ದಲ್ಲೇ, ಇದ್ದ ಪರಿಸ್ಥಿತಿಯಿಂದಲೇ, ದೊರೆತ ದ್ರವ್ಯಗಳಿಂದಲೇ, ಸುಸಂಸ್ಕೃತ ಮನಃಸ್ಥಿತಿಯಿಂದ ಅದು ಶಕ್ಯ!... ಅದಿಲ್ಲದಿದ್ದರೆ ಯಾವ ಸಾಧನ ಸಲಕರಣೆ ಇದ್ದರೂ ಅದು ಸಾಧ್ಯವಾಗದು!!.... ಶ್ರೀಕೃಷ್ಣ ಪೂತನೆಯ ವಿಚಿತ್ರ ಪರಿವರ್ತನೆಯನ್ನೂ, ಅವಳ ಉಪಾಸನೆಯ ವಿಶಿಷ್ಟತೆಯನ್ನೂ, ಚಿಂತಿಸಿ, ಇಂಥ ಭಕ್ತೆಯನ್ನು ಯಾರೂ ಸ್ತುತಿಸದ ಕೊರತೆಯಿಂದ ವ್ಯಗ್ರ ಮನಸ್ಕನಾಗುತ್ತಾನೆ.

ಈ ಶ್ಲೋಕಗಳು ಶ್ರಾವ್ಯವಾದ ಮೆಲುದನಿಯಲ್ಲಿ ಅವನ ಒಳಗಿವಿಗೆ ಕೇಳಿ ಬರುತ್ತವೆ! ಶ್ರೀಕೃಷ್ಣನಿಗೆ ಅಚ್ಚರಿಯಾಗುತ್ತದೆ!

*"ಪುರಾ ಪಿಪಾಸುಃ ಪರಿಪೀಡ್ಯ ಪೂತನಾ
ಪಯೋಧರೌ ಯಃ ಪೃಥುಕಃ ಪಯಃ ಪಪೌ।
ಪರಾತ್ಪರಃ ಪಾಪಪರಂಪರಾಪಹಃ
ಸ ಪಾತು ನಃ ಪಾವನ ಪಾದಪಂಕಜಃ॥

ಪೂತನಾ ಸ್ವಸ್ತನಕ್ಷೀರಂ ವಿಷಾಕ್ತಮಪಿ ಶೌರಯೇ।
ದತ್ವಾ ಪ್ರಾಪ್ಯಾಮೃತಂ ಕ್ಷಿಪ್ರಂ ದುರ್ಲಭಂ, ತತ್ಕೃಪಾವಶಾತ್॥

ಸ್ವಸ್ತನ್ಯಂ ದೇವಕೀ ನೈವ ದದೌ ಕೃಷ್ಣಾಯ ಸೂನವೇ।
ತತಸ್ತಸ್ಯಾಃ ಸ್ತನೌವ್ಯರ್ಥೌ ಪೂತನಾಯಾಸ್ತು ಸಾರ್ಥಕೌ॥

ಅಸುರಾಪ್ಯಸುರಕ್ಷಾಶಾಂ ವಿನಾ ಪ್ರಾಪ್ಯ ಶಿಶುಂ ಹರಿಂ।
ದತ್ತ್ವೋಪಹಾರಂ ಸ್ವಸ್ತನ್ಯಂ ತಸ್ಮೈ, ಮೋಕ್ಷಂ ಕ್ಷಣಾದ್ಯಯೌ॥

ಪೂತನಾಯಾಃ ಸ್ತನೌ ವಂದೇ ಭವಭೀತಿ ಹರೌ ಚಿರಾತ್।
ಚುಂಬಿತೌ ಬಾಲಕೃಷ್ಣೇನ ಯೌ ತಸ್ಯಾಃ ಮೋಕ್ಷದಾಯಕೌ॥

ಪ್ರವರ್ತತೇ ಯಸ್ಯ ವಾಚಿ ಪೂತನಾಮರತಾ ಕಥಾ।
ಸ ಪೂತನಾಮಾ ರಮತೇ ಶ್ರೀಕೃಷ್ಣ ಚರಿತೇ ಸದಾ॥

(ಹಿಂದೆ, ಬಾಯಾರಿ, ಯಾವ ಭಗವಂತನು ಪೂತನೆಯಸ್ತನಗಳನ್ನು ಪೀಡಿಸಿ ಹಾಲು ಕುಡಿದನೋ, ಆ ಪರಾತ್ಪರನೂ, ಪಾವನಪಾದಪದ್ಮಗಳುಳ್ಳವನೂ ಆದ ಸ್ವಾಮಿಯು ನಮ್ಮನ್ನು ರಕ್ಷಿಸಿ, ಪಾಪಪರಂಪರೆಗಳನ್ನು ನೀಗಲಿ. ವಿಷ ತುಂಬಿದ್ದರೂ ತನ್ನ ಎದೆಹಾಲನ್ನು ಕೃಷ್ಣನಿರ್ಗೆಪಿಸಿ, ಅವನಿಂದ, ಇತರರಿಗೆ ದುರ್ಲಭವಾದ ಅಮೃತಪದವಿಯನ್ನು ಪಡೆದಳು. ದೇವಕಿಯು ಒಮ್ಮೆಯೂ ಆ ಕೃಷ್ಣನಿಗೆ ಎದೆಹಾಲೂಡಿಸದೆ, ಆ ಎದೆಗಳು ವ್ಯರ್ಥವಾದವು! ಪೂತನೆಯವು ಮಾತ್ರ ಸಾರ್ಥಕವೆನಿಸಿದವು!! ಅಸುರೆಯಾದರೂ, ಪ್ರಾಣದ ಆಸೆ ಬಿಟ್ಟು, ಮಗು ಕೃಷ್ಣನನ್ನು ಎತ್ತಿ, ಉಪಹಾರವನ್ನಾಗಿ ಹಾಲುಣಿಸಿ, ಕ್ಷಣಮಾತ್ರದಲ್ಲಿ ಮೋಕ್ಷ ಹೊಂದಿದಳು। ಬಾಲಕೃಷ್ಣನು ಚುಂಬಿಸಿದ ಆ ಪೂತನೆಯಸ್ತನಗಳನ್ನು ವಂದಿಸುತ್ತೇನೆ! ಅವು ಸಂಸಾರ ಭೀತಿಯನ್ನು ಕಳೆಯುತ್ತವೆ!! ಏಕೆಂದರೆ ಅವಳಿಗೇ ಮೋಕ್ಷ ಕೊಟ್ಟವು ಆ ಸ್ತನಗಳು! ಯಾವನ ಮಾತುಗಳಲ್ಲಿ ಈ ಪೂತನೆಯ ಕಥೆ ಬರುತ್ತದೋ, ಅವನ ಹೆಸರೂ ಪವಿತ್ರವೆನಿಸಿ, ಶ್ರೀಕೃಷ್ಣ ಕಥೆಯಲ್ಲಿ ಅವನಿಗೆ ರುಚಿ, ಆಸಕ್ತಿ ಬರುತ್ತದೆ).

* * * * *

ಸೂರ್ಯಾಸ್ತವಾಯಿತು!.... "ಇನ್ನೂ ಅರ್ಜುನ ಬರಲಿಲ್ಲ!!" ಎಂದು ಶ್ರೀಕೃಷ್ಣ ವ್ಯಗ್ರ ಮನಸ್ಕನಾದ!... ರಾತ್ರಿ ಆವರಿಸಿ, ಎಲ್ಲೆಡೆ ಕಾರ್ಗತ್ತಲು ಕವಿಯಿತು!!

* * * * *

*ಈ ದಿವ್ಯಶ್ಲೋಕಗಳನ್ನು ರಚಿಸಿದವರು ವೈ.ಮಾ. ಶ್ರೀ ಜಗ್ಗು ಶಿಂಗರೈಯ್ಯಂಗಾರ್ಯರೆಂಬ ಮಹಾವಿದ್ವಾಂಸರು, ಭಕ್ತ ಮಹಾಕವಿವರೇಣ್ಯರು, ಮೇಲುಕೋಟೆ.

# ೧೪. ಶ್ರೀಕೃಷ್ಣನ ಕೊನೆಯ ಸ್ಮರಣೆ-ದ್ರೌಪದೀ!

ಸೂರ್ಯ ಮುಳುಗಿ ಬಹಳ ವೇಳೆಯಾಗಿತ್ತು!.... ಸುತ್ತಲ ಹೆಣಗಳ ವಾಸನೆ ಸ..ಸಲಾ-ಾಷ್ಯವೆನಿಸಿತ್ತು.... ಕತ್ತಲೆಯಲ್ಲಿ ಕಾಗೆಗಳ, ಹದ್ದುಗಳ ಕಾಟ, ಅಡಗಿದ್ದರೂ, ಗೂಗೆಗಳು ವಿಕಾರವಾಗಿ ಅರಚುತ್ತಿದ್ದವು. ನಾಯಿನರಿಗಳಿಗಂತೂ ಸುಗ್ಗಿಯೋ ಸುಗ್ಗಿ!...ಅರ್ಜುನನಂತೂ ಬರಲಿಲ್ಲ! ತನ್ನವರೆನಿಸಿದ್ದ ಈ ನಿರ್ಭಾಗ್ಯರ ಶರೀರಗಳು ಇನ್ನೆಷ್ಟು ದಿನ ಅನಾಥ ಪ್ರೇತಸಂಸ್ಕಾರಕ್ಕಾಗಿ ಹೀಗೇ ಕೊಳೆಯುತ್ತ ಬಿದ್ದಿರಬೇಕು?... ಅಥವಾ, ತಾನೇ ಇನ್ನೇನು ಹೊರಡುವುದರಲ್ಲಿರುವವನಿಗೆ ಅವರ ಗೊಡವೆಯೇಕೆ?.... ಕಾಲಿನ ಬಾಧೆ 'ಝೊಯ್, ಝೋಯ್!' ಎನ್ನುತ್ತಾ ಬೆಳೆಯುತ್ತಲೇ ಇತ್ತು!... ತಾನು ಸೂಚಿಸುವ ವರೆಗೆ ಗರ್ಗರು ಅತ್ತ ಬರಬಾರದೆಂದು ಹೇಳಿದ್ದರೂ, ಬಡ ಬ್ರಾಹ್ಮಣ!... ಮುದುಕ ಬೇರೆ!! ಎಷ್ಟು ದಿನ ಅಲ್ಲಿ ರಾಣಿಯರನ್ನು ಕಾಯುತ್ತಾ ತಾನೂ ಅನ್ನಾಹಾರಗಳಿಲ್ಲದಿರಬೇಕು?... ಯುಗವೇ ಮುಗಿಯಿತು! ಅರ್ಜುನನಿಗಾಗಿ ಕಾಯುವುದು ಸಾಧುವೇ?... ಶ್ರೀ ಕೃಷ್ಣ ಚಿಂತಿಸಿದ!.... ಮನಃಶಾಂತಿ ಬಹುದೂರದ ಮಾತಾಗಿತ್ತು! ಅಂತ್ಯ ಕಾಲದಲ್ಲಿ ಯಾವನ ಸ್ಮರಣೆಯಿಂದ ಶಾಶ್ವತ ಸೌಖ್ಯ ಲಭ್ಯವೋ, ಆ ಅವತಾರಿಗೇ ಅಂದು ಅಶಾಂತಿ ಎಂದರೆ ಮಾನುಷಾತೀತ ಭಾವದಲ್ಲಿ ನಂಬುವವರಾರು?... ಅದು ಆಮೇಲಿನ ಮಾತು!.... ಮೊದಲು ಈ ಮಾನುಷ ಭಾವವನ್ನು ನೀಗಬೇಕು!....

ಶ್ರೀಕೃಷ್ಣ ಮತ್ತೆ ಪೂತನೆಯನ್ನು ನೆನೆದ!... ಎಂಥ ನಿರ್ಭಾಗ್ಯಳು!.... ತನ್ನ ಜೀವನದ ಅವಕಾಶಗಳನ್ನು ತಾನು ಆರಿಸಿಕೊಳ್ಳುವ ದ್ವಾರಗಳನ್ನೇ ಮುಚ್ಚಿ ಇವಳನ್ನು ಹಾಗೆ ಕೊಂದ ಕಂಸ ಎಷ್ಟು ನಿರ್ದಯಿ!.... ಇನ್ನೆಷ್ಟು ಸ್ತ್ರೀಯರನ್ನೂ ಹಾಗೇ ಹಾಳುಮಾಡಿದನೋ?... ಸ್ತ್ರೀಯರ ಗೋಳನ್ನು ಕೇಳುವರಾರು?.... ಅಂಥ ಇತರ ನಿರ್ಭಾಗ್ಯರ ಬಗೆಗೂ ಕೃಷ್ಣನ ಚಿಂತೆ ಹರಿಯಿತು!.... ಸುಭದ್ರೆಯನ್ನು ತಾನು ಉಪಾಯವಾಗಿ ಅರ್ಜುನನಿಗೆ ರಹಸ್ಯದಲ್ಲಿ ಕೊಡದಿದ್ದರೆ, ಅವಳು ಹಾಳು ದುರ್ಯೋಧನನಿಗೆ ಸಿಕ್ಕು ಎಷ್ಟು ಯಾತನೆ ಪಡುತ್ತಿದ್ದಳೋ!.... ರಾಕ್ಷಸ ವಿವಾಹ ಕ್ರಮವನ್ನು ಮಹರ್ಷಿಗಳು ಇಂಥ ಆಪತ್ಕಾಲಕ್ಕೆಂದೇ ಏರ್ಪಡಿಸಿರಬೇಕು!.... ಎಷ್ಟು ದೀರ್ಘಾಲೋಚನೆ!.... ತಾನೂ ರುಕ್ಮಿಣಿಯನ್ನು ಹಾಗೆ ಕೈಹಿಡಿಯದಿದ್ದರೆ, ಅವಳೂ ಶಿಶುಪಾಲನ ಪಾಲಾಗಿ ಏನೇನು ಕಷ್ಟ ಅನುಭವಿಸುತ್ತಿದ್ದಳೋ!.... ನರಕಾಸುರನ ಸೆರೆಯ ಸಹಸ್ರ, ಸಹಸ್ರ ಸ್ತ್ರೀಯರನ್ನು ತಾನು ಬಿಡಿಸದಿದ್ದರೆ, ಕೈಹಿಡಿಯದಿದ್ದರೆ, ಅವರ ಬಾಳು ಎಂತಾಗುತ್ತಿತ್ತೊ?..... ರಾಕ್ಷಸ ಕ್ರಮದ ವಿವಾಹಕ್ಕೆ ಸಂದರ್ಭವುಂಟು!.... ಭೀಷ್ಮ ಹಿಂದೆ ಮುಂದೆ ನೋಡದೆ ಅಂಬೆ, ಅಂಬಾಲಿಕೆ, ಅಂಬಿಕೆಯರನ್ನು ಹಾಗೆ ಅವರಿಗಿಷ್ಟವಿಲ್ಲದಂತೆ ಅಪಹರಿಸಿ ತಂದೇ ಕೌರವವಂಶ ಹಾಳಾಯಿತು!.... ಸ್ವಯಂವರದ ನಾಟಕ ಬೇರೆ! ಹೆಣ್ಣು ಎಂದರೆ ಹರಾಜಿನ ವಸ್ತುವೇ?.... ಓ! 'ಸ್ವಯಂವರ'- 'ತನ್ನಿಷ್ಟದಂತೆ ಕನ್ಯೆ ವರನನ್ನು ತಾನೇ ಆಯ್ದುಕೊಳ್ಳುವ ಅವಕಾಶ'- ಹೆಸರು, ರೀತಿ, ಪದ್ಧತಿ-ಎಷ್ಟು ಚೆನ್ನಾಗಿರಬೇಡ!.... ಆದರೆ ತನ್ನೆದುರು ನಡೆದ ಅವೆಲ್ಲ ವಿಡಂಬನೆಗಳೇ ಆಗಿರಲಿಲ್ಲವೇ?.... ದುಷ್ಟರ ಕೈಲಿ ಯಾವ ಸಂಸ್ಥೆಯೂ-ಸಾಮಾಜಿಕ, ರಾಜಕೀಯ, ಆರ್ಥಿಕ, ಆಧ್ಯಾತ್ಮಿಕ-ಹಾಳು ಕೆಡುವುದೇ ಹೀಗೆ!... ಅಂದು ಕಾಂಪಿಲ್ಯದಲ್ಲಿ ತಾನು ಮುಂಚೆಯೇ ದ್ರುಪದನನ್ನು ಕಾಣದಿದ್ದರೆ, ಪಾಂಡವರು ಪ್ರಚ್ಛನ್ನ ಬ್ರಾಹ್ಮಣರಾಗಿ ಅಲ್ಲಿ ಬಂದು ಸೇರದಿದ್ದರೆ, ಆ ಮುಂಚೆಯೇ

ದ್ರೌಪದಿಯ ಸ್ವಯಂವರ ನಡೆದೇ ಬಿಟ್ಟಿದ್ದರೆ, ಬೇರಾವ ಕಂಸ ಜರಾಸಂಧ ಶಿಶುಪಾಲಾದಿಗಳಂಥವರನ್ನು ಅವಳು ಸೇರಿ, ಜೀವನವನ್ನು ಹೇಗೆ ಹಾಳುಮಾಡಿಕೊಳ್ಳುತ್ತಿದ್ದಳೋ! ....ಪಾಂಡವರಾದರೂ ಅವಳನ್ನು ಸರಿಯಾಗಿ ನಡೆಸಿಕೊಂಡರೇ?.... "ಓ ದ್ರೌಪದೀ!.... ತಂಗೀ ಕೃಷ್ಣೆ!!" ಶ್ರೀಕೃಷ್ಣ ಮನಸಾರೆ ಸ್ಮರಿಸಿದ!

* * * * *

ಕೃಷ್ಣಾದೇವಿ ನಗುನಗುತ್ತಾ ಶ್ರೀಕೃಷ್ಣನ ಮನದ ಪರದೆಯ ಮೇಲೆ ಕಾಣಿಸಿಕೊಂಡಳು!

**ದ್ರೌಪದೀ:** "(ಶ್ರೀಕೃಷ್ಣನ ಆಗಿನ ಸ್ಥಿತಿಯನ್ನು ನೋಡಿದೊಡನೆಯೇ ಅವಳ ನಗೆ ಸ್ಥಗಿತವಾಯಿತು! ಆ ಏಕಾಂತ, ಆ ಸ್ಮಶಾನ ವಾತಾವರಣ, ಆ ಚಿಂತಾಮಗ್ನ ಮುಖ.... ಎಲ್ಲಕ್ಕಿಂತ ಕಾಲಿನಲ್ಲಿ ಸುರಿಯುತ್ತಿದ್ದ ರಕ್ತ, ಅಲ್ಲಿ ಯಶೋದೆ ಕಟ್ಟಿದ್ದ ರೇಶಿಮೆ ಸೆರಗಿನ ಚೂರು.... ಇದನ್ನೆಲ್ಲ ಕಂಡು ಭೀತಳಾಗಿ,.... ಏನೂ ತಿಳಿಯದೆ....) ಅಣ್ಣಾ! ನನ್ನನ್ನು ಕರೆದೆಯಾ?.... ಇದೇನು ಕಾಲಲ್ಲಿ?.... ಹೀಗೇಕೆ ಕುಳಿತಿರುವೆ?.... ಏನಾಯ್ತು? (ಒಂದೇ ಉಸುರಿಗೆ ಪ್ರಶ್ನೆಗಳನ್ನು ಸುರಿಸುತ್ತಾಳೆ)"

**ಶ್ರೀಕೃಷ್ಣ:** "ತಂಗೀ! ಪ್ರಯಾಣ ಹೊರಟಿರುವವನು ಗಾಡಿಗೆ ಕಾಯಲೇಬೇಕಲ್ಲವೇ?....ಯಾವನೋ ಭಕ್ತ ಕಾಲಲ್ಲಿ ಒಂದು ತುಳಸಿಯನ್ನಿಟ್ಟ!.... ಅದರ ಗೌರವ ರಕ್ಷೆಗೆ ನನ್ನ ತಾಯಿ ಯಶೋದೆ ತನ್ನ ಸೆರಗಿನ ಚೂರನ್ನು ಇಟ್ಟು ಅದು ಬಾಡದಂತೆ ಮಂತ್ರ ಹಾಕಿದ್ದಾಳೆ!.... ಅದಿರಲಿ! ನಿನ್ನನ್ನು ನೆನೆಸಿದ್ದು!....... ಹೇಗೆ ಹೇಳಲಿ!.... ನೀನು ನನ್ನನ್ನು ಕ್ಷಮಿಸಿರುವೆಯಾ?.... ಹಾಗೆ ಹೇಳದಿದ್ದರೆ ನಾನು ಅಶಾಂತಿಯಿಂದಲೇ ಗಾಡಿ ಹತ್ತಿ ಹೊರಡಬೇಕಾಗುತ್ತದೆ!...."

**ದ್ರೌಪದಿ:** "ಯಾವ ಗಾಡಿ ಅಣ್ಣಾ!.... ನಾನೇಕೆ ನಿನ್ನನ್ನು ಕ್ಷಮಿಸಬೇಕು?.... ಏನು ಹುಡುಗಾಟ ಇದು?.... ಅದು ತುಳಸಿಯಾದರೆ, ಕೆಂಪಾಗಿ ಏಕೆ ಕಾಣುತ್ತಿದೆ?.... ತಂಗಿಯಲ್ಲಿ ನಿನಗೆ ಪ್ರೀತಿಯಿದ್ದರೆ ಮರೆಮಾಚದೇ ಹೇಳಬೇಡವೇ?.... (ಅಳುತ್ತಾಳೆ)"

**ಶ್ರೀಕೃಷ್ಣ:** "ಮರೆಮಾಚುವುದೇನಿಲ್ಲ!.... ನೋವುಪಟ್ಟವರಿಗೆ ಮತ್ತೆ ನೋವು ಕೊಡುವುದು ಧರ್ಮವಲ್ಲ! ಪ್ರೇಮವಿರುವಲ್ಲಿ ನೋವೂ ತಪ್ಪದೆ ಹಿಂಬಾಲಿಸಿಯೇ ತೀರುತ್ತದೆ!.... ನಾನು ಗಾಡಿಯ ನಿರೀಕ್ಷೆಯಲ್ಲಿದ್ದೇನೆ, ಎಂದೆನಲ್ಲ!.... ತಿಳಿಯಲಿಲ್ಲವೆ?.... ಅದಕ್ಕೊಂದು ನೆಪ! ಅಷ್ಟೆ.... ಅದನ್ನೆಲ್ಲ ಆಮೇಲೆ ಹೇಳುತ್ತೇನೆ!.... ಈಗ ನನ್ನ ನೋವನ್ನು ನೀನು ಕೊಂಚವಾದರೂ ನೀಗಿದರೆ,.... ಹಗುರವಾಗಿ, ಮೂಟೆ ಕಡಿಮೆಯಾಗಿ, ಗಾಡಿ ಹತ್ತುವುದು ಸುಲಭವಾಗುತ್ತದೆ...."

**ದ್ರೌಪದಿ:** "ಯಾವ ಗಾಡಿಯೋ, ಯಾವ ಮೂಟೆಯೋ, ನಾನೊಂದೂ ಕಾಣೆ! ನಿನ್ನ ಭಾಷೆಯೇ ತಿಳಿಯುತ್ತಿಲ್ಲ ಅಣ್ಣಾ!...." (ಯೋಚಿಸುತ್ತಾಳೆ!... ಕ್ರಮೇಣ ಕೊಂಚ ಕೊಂಚವಾಗಿ ಅರ್ಥವಾಗುತ್ತಾ ಮುಖ ಗಂಭೀರವಾಗುತ್ತದೆ!.... ಕೃಷ್ಣನ ಮುಖವನ್ನು ನಿಟ್ಟಿಸಿ ನೋಡುತ್ತಾಳೆ.... ದುಃಖ ಬಿಗಿದುಬರುತ್ತದೆ!.... ಎಂದಿನಂತೆ, ವೀರ ಕ್ಷತ್ರಿಯ ರಮಣಿಯಂತೆ, ಅದನ್ನು ನುಂಗಿಕೊಂಡು, ಏನೂ ಆಗದವಳಂತೆ ನಟಿಸಲು, ಸಹಜವಾಗಿ ಮಾತಾಡಲು ಯತ್ನಿಸುತ್ತಾಳೆ!.... ಅದನ್ನೆಲ್ಲ ಅರ್ಥ ಮಾಡಿಕೊಂಡ ಶ್ರೀಕೃಷ್ಣನೂ ಗಂಭೀರವದನನಾಗಿಯೇ, ಕಣ್ಣೀರು ಒರೆಸಿಕೊಳ್ಳದೆ, ಅವಳನ್ನೇ ನಿಟ್ಟಿಸಿ ನೋಡುತ್ತಾನೆ!.... ಈ ನಿಃಶಬ್ದ ವ್ಯಾಪಾರ ಕೊಂಚ ಹೊತ್ತು ಹಾಗೇ ನಡೆಯುತ್ತದೆ!....)

**ಶ್ರೀಕೃಷ್ಣ:** "ನಿನ್ನ ಪ್ರಶ್ನೆಗೆ ಉತ್ತರ ಸಿಕ್ಕಿದಂತಾಯ್ತು! ನನ್ನದಕ್ಕೆ ಉತ್ತರಿಸಲಾರೆಯಾ?... ಹಾಗೇ ಗಾಡಿ ಹತ್ತಲೇ?.... ತಂಗಿ! ನಾನು ಒಂದೊಂದು ಅವತಾರಗಳಲ್ಲೂ ಬಹು ಕಷ್ಟಪಟ್ಟ ಮಹಿಳೆಯರನ್ನು ನೋಡಿದ್ದೇನೆ.... ಅವರ ಕಷ್ಟ ಕಳೆಯಲು ಯತ್ನಿಸಿದ್ದೇನೆ.... ಆದರೆ ನನ್ನ ಈ ಅವತಾರದಲ್ಲಿ, ನಿನ್ನಷ್ಟು ಕಷ್ಟಪಟ್ಟವಳನ್ನು ಕಂಡಿಲ್ಲ!.... ಆ ಕಷ್ಟವನ್ನು ಬರಗೊಡದಂತೆ ಏನೆಲ್ಲ ಮಾಡಿಯೂ ಕಷ್ಟ ಬಂದೇ ಹೋಯಿತು!.... ಹಳೆಯದನ್ನೆಲ್ಲ ನೆನಪಿಸುತ್ತಿರುವವನ್ನು ಕ್ಷಮಿಸುವೆಯಲ್ಲ!...."

**ದ್ರೌಪದಿ:** "ಅಣ್ಣಾ! ನೋವು ಪಡುವುದು ಭಾರತೀಯ ಸ್ತ್ರೀಯರಿಗೆ ಸಹಜವೆಂಬಂತೆಯೇ ಆಗಿಹೋಗಿದೆ!.... ಆದರೆ ನಿನ್ನಂತೆ ಆ ಕಷ್ಟಜೀವಿಗಳ ನೋವನ್ನು ಹಂಚಿಕೊಳ್ಳುವ ಆರ್ದ್ರ ಹೃದಯರನ್ನು ನಾನೂ ಕಂಡಿಲ್ಲ, ಅಣ್ಣಾ!.... ಇಂಥವನೊಬ್ಬ ಇರುವತನಕ ಕಷ್ಟಗಳಿಗೆ ನಾನಂಜುವವಳಲ್ಲ.... ಹೋಗಲಿ ಬಿಡು!.... ಗಾಡಿ ಹತ್ತುವಾಗ ಅವರ ನೆನಪೇಕೆ?... ಇಲ್ಲೇ ಇರುವವರಿಗಲ್ಲವೆ ಅದು?

**ಶ್ರೀಕೃಷ್ಣ:** "ತಂಗಿ, ಕೃಷ್ಣೆ, ನಾನಾಗಲೀ, ನೀನಾಗಲಿ, ಗಾಡಿ ಹತ್ತಿದೆವೆಂದರೆ, ಯಾವ ಮೂಟೆಯೂ ಹಿಂದೆ ಬರುವಂತಿಲ್ಲ!.... **ಪುಣ್ಯಪಾಪೇ ವಿಧೂಯ....** ಎಂಬ ವೇದವಾಕ್ಯ ನೆನಪಿದೆಯೆ? ಮೂಟೆ ಇರುವ ತನಕ ಗಾಡಿ ಹತ್ತಲು ಅದು ಬಿಡುವುದೂ ಇಲ್ಲ!.... ನೀನು ಅರ್ಜುನನ್ನೇ ವರಿಸುವಂತೆ ನಿನ್ನ ತಂದೆ ಪಣವಿಡಲು ಪ್ರೇರಿಸಿದವನು ನಾನೇ! ಆದರಿಂದ ನಿನಗೆ ಬೇರೆ ಕಷ್ಟಗಳು ತಪ್ಪಿದವು ಎಂದು, ನನ್ನ ಲೆಕ್ಕ ಸರಿಯಾಯಿತೆಂದು ನಾನು ಹಿಗ್ಗುವಷ್ಟರಲ್ಲಿ ನಿನ್ನ ಅತ್ತೆ ಕುಂತಿ, ಆ ಲೆಕ್ಕವನ್ನು ವ್ಯತ್ಯಾಸ ಮಾಡಿಬಿಟ್ಟಳು! ಇನ್ನೂ ನಾಲ್ವರು ಗಂಡಂದಿರನ್ನು ನಿನಗೆ ಹೊರಿಸಿಬಿಟ್ಟಳು!.... ನೀನು ಒಲ್ಲೆ ಎನ್ನದೆ, ಅತ್ತೆಯನ್ನೂ ನಿರಾಕರಿಸದೆ, ಪತಿಗಳನ್ನೂ ಸಂಭಾಳಿಸಿದೆ!.... ಧರ್ಮಪುತ್ರ ನಿನ್ನನ್ನು ಇಟ್ಟು ಜೂಜಾಡಿದ!.... ಓ.... ಎಂಥ ಭಯಂಕರ ಸ್ಥಿತಿ ತಂದಿಟ್ಟ?.... ನಿನ್ನ ಪತಿಯನ್ನು ನಾನು ದೂಷಿಸುತ್ತಿಲ್ಲ, ತಂಗೀ!.... ನೀನು ದಿಟ್ಟತನದಿಂದ ಕಷ್ಟವನ್ನು ನಿಭಾಯಿಸಿದ್ದನ್ನು ಮೆಚ್ಚಿ, ನೆನೆಸಿ ಹೇಳುತ್ತಿದ್ದೇನೆ!...."....

**ದ್ರೌಪದಿ:** ಆ ಭಯಂಕರ ಸ್ವಪ್ನಸದೃಶ ಘೋರ ಸನ್ನಿವೇಶವನ್ನು ನೆನೆಸಿದಳು!.... ನಿಸ್ಸಹಾಯಕರಂತೆ, ಅಸಹಾಯಶೂರ ಪತಿಗಳು ತಲೆ ತಗ್ಗಿಸಿ ಕುಳಿತಿರುವುದೊಂದು ಕಡೆ!! ಹಿಗ್ಗಿನಿಂದ, ಇವಳ ಮಾನಭಂಗಕ್ಕೆ ನಾನಾ ಯತ್ನಗಳಲ್ಲಿರುವ ದುರ್ಯೋಧನಾದಿಗಳೊಂದು ಕಡೆ! ಧರ್ಮದ ಸೋಗಿನಲ್ಲಿ ದುರ್ಯೋಧನನಿಗೆ ಪರೋಕ್ಷ ಉತ್ತೇಜನ ನೀಡುತ್ತಾ ಕುಳಿತ ಭೀಷ್ಮದ್ರೋಣಾದಿಗಳೊಂದು ಕಡೆ! ಕಂಠಶೋಷಣೆ ಮಾಡಿಕೊಳ್ಳುತ್ತಾ ಆ ಜೂಜನ್ನು ತಡೆಯಲಾಗದೆ ನಿರ್ವಿಣ್ಣನಾಗಿ, ಅಲ್ಲಿಂದ ಅಗಲಲೂಲಾರದೆ, ಇರಲೂ ಆಗದೆ ಸಂಕಷ್ಟ ಪಡುತ್ತಿರುವ ವಿದುರ!.... ಓ!.... ಏಕಮೇವ ವಿದುರ ಒಂದು ಕಡೆ!.... ಅಟ್ಟಹಾಸದ ಕರ್ಣದುಃಶಾಸನರೊಂದು ಕಡೆ!.... **ಎಲ್ಲೆಡೆ ಇರುವನೆಂಬ ಸರ್ವಾಂತರಾತ್ಮನೆಂಬ ಖ್ಯಾತಿಯ ಶ್ರೀಕೃಷ್ಣ ಕಾಣಬಾರದ ಎಲ್ಲ ಕಡೆ!!!**.... ದ್ರೌಪದಿ ಚೀರಲಿಲ್ಲ!.... ಕಣ್ಣೊರೆಸಿಕೊಂಡಳು!.... ಅವಳ ಮನಃಪಟಲದಲ್ಲಿ ಸುಳಿದ ಆ ಚಿತ್ರಗಳನ್ನು ಅದೇ ಆನುಪೂರ್ವಿಯಲ್ಲಿ ಶ್ರೀಕೃಷ್ಣನೂ ಕಂಡ!....

**ದ್ರೌಪದಿ:** "ಅಣ್ಣಾ!.... ತಪ್ಪು ನನ್ನದೇ ಆಗಿದ್ದಾಗ, ನಿನ್ನನ್ನೇ ನೀನು ಹಳಿದುಕೊಳ್ಳುವುದೇಕೆ?.... ನಾನು ರಕ್ಷಕರಲ್ಲದವರನ್ನು 'ರಕ್ಷಿಸಿ' ಎಂದು ಕೇಳುತ್ತಾ, ನಿಜರಕ್ಷಕನನ್ನು ನೆನೆಸದೆ, ಕೇಳದೆ, ಕಾಲ ಕಳೆದು ಆ ಘೋರ ಕ್ಷಣವನ್ನು ಬರಮಾಡಿಕೊಂಡೆ!.... ಹೇಗೂ ನೀನು ಕೊನೆಗೆ ರಕ್ಷಿಸಿ ಆಯಿತಲ್ಲ?.... ಚಿಂತೆ ಏಕೆ?"

**ಶ್ರೀಕೃಷ್ಣ:** "ಚಿಂತೆ ಅದಕ್ಕಲ್ಲ!.... ರಕ್ಷಿಸಿದ್ದು ಸರಿ!.... ನಿನಗೆ ಆ ಪರಿಸ್ಥಿತಿ ಬಾರದಂತೆಯೇ ಏರ್ಪಡಿಸಬಹುದಿದ್ದ ನನ್ನ ಚಾತುರ್ಯ ಎಲ್ಲಿ ಹೋಯಿತು?.... ಆಡುವ ಮಕ್ಕಳನ್ನು ನೆಲಛಾವಿಯತ್ತ ಬಿಡುವುದೇಕೆ?.... ಮಕ್ಕಳು ಬಿದ್ದ ಮೇಲೆ, ತಾಯಿಯೂ ಅಲ್ಲಿ ನೆಗೆದು ಎತ್ತುವುದೇಕೆ? ಆಮೇಲೆ ಅಳುವುದೇಕೆ?... ಮಗುವು ಬೆಳೆದು ಎಷ್ಟೇ ದೊಡ್ಡವಳಾದರೂ, ಮುಂದೆ ಎಂದೆಂದೂ ಅಳಿಸಲಾರದ ನೆನಪಲ್ಲವೆ ಅದು?.... ಅಂಥ ನೆನಪಿನೊಡನೆ ಈಗ ಗಾಡಿ ಹತ್ತಬೇಕೆ? ನಿನಗೆ ಸಂಕಟ ಕೊಟ್ಟ ಪಾಪಿಗಳನ್ನು, ಮತ್ತೆ ಜೀವ ತುಂಬಿ, ಜೀವನಕ್ಕೆಳೆದು, ಮತ್ತೆ ಮತ್ತೆ ಘೋರವಾಗಿ ಶಿಕ್ಷಿಸಬೇಕೆಂಬ,.... ನಿನ್ನ ಸಾಲ ಸರಿಯಾಗಿ ತೀರಿಸಲಿಲ್ಲವೆಂಬ.... ಭಾವನೆ ನನಗೆ ಬರುತ್ತಿದೆ, ತಂಗೀ!.... ನಾನಿದನ್ನು ಮರೆಯಲಾರೆ!...."

ದ್ರೌಪದಿ: "ಅಸಲಿನೊಡನೆ ಬಡ್ಡಿಯನ್ನೂ ತೀರಿಸುತ್ತೇನೆ, ಎಂದು ಅಂದು ನನ್ನೆದುರೇ, ಸಂಜಯನ ಕೈಲಿ, ನನ್ನ ದೊಡ್ಡ ಮಾವ ಧೃತರಾಷ್ಟ್ರರಾಯರಿಗೆ ಹೇಳಿಕಳುಹಿಸಿದೆಯಲ್ಲ!.... **ಋಣಂ ಪ್ರವೃದ್ಧಮಿವ ಮೇ, ಹೃದಯನ್ನಾಪಸರ್ಪತಿ!...** ಅಣ್ಣ! ಇಂಥ ಅಭಿಮಾನದ ಒಂದು ಮಾತೂ ನನ್ನ ಪತಿಗಳಿಂದ ಬರಲಿಲ್ಲ!.... ಈ ಅಣ್ಣ ಹಾಗೆ ಹೇಳಿದ್ದು ಮಾತ್ರವಲ್ಲ!.... ಹಾಗೇ ನಡೆದ!

***ದ್ಯೌಃ ಪತೇತ್ ಹಿಮವಾನ್ ಶ್ರೀ ರ್ಯೇತ್ ಪೃಥಿವೀ ಶಕಲೀಭವೇತ್***
***ಶುಷ್ಯೇತ್ ತೋಯನಿಧಿಃ ಕೃಷ್ಣೇ! ನ ಮೇ ಮೋಘಂ ವಚೋ ಭವೇತ್***

ಎಂದು ಪ್ರತಿಜ್ಞೆ ಮಾಡಿದ ಪ್ರಜ್ಞಾವಂತ ಧೀರ ಅಣ್ಣ ನನಗಿರುವತನಕ, ಯಾತರ ಭಯ! ಆ ಪ್ರತಿಜ್ಞೆ ಪೂರ್ತಿಯಾಗಿ ನೀನೂ ಋಣಮುಕ್ತನಾದ ಮೇಲೆ, ನನ್ನ ದುಃಖವೂ ಶಮನವಾದ ಮೇಲೆ, ಇನ್ನೂ ಸರಿಯಾಗಿ ಸಾಲ ತೀರಿಸಲಿಲ್ಲವೆಂದರೆ,.... ಅದು ನಿನ್ನ ತಂಗಿಯ ಮೇಲಣ ನಿರತಿಶಯ ವಾತ್ಸಲ್ಯವೇ ಹೊರತು, ನಿನಗೇಕೆ ಮೂಟೆಯಾಗಬೇಕು?... ಅಣ್ಣ! ಅಂದು ನಿನ್ನನ್ನು ಸ್ತುತಿಸುವಾಗ:

***ಬ್ರಹ್ಮಶಂಕರಶಕ್ರಾದ್ಯೈಃ ದೇವವೃಂದೈಃ ಪುನಃ ಪುನಃ।***
***ಕ್ರೀಡಸೇ ತ್ವಂ ನರವ್ಯಾಘ್ರ! ಬಾಲಃ ಕ್ರೀಡನಕೈರಿವ॥***

ಎಂದೆನಲ್ಲ! ನೆನಪಿದೆಯೆ? ಬ್ರಹ್ಮರುದ್ರೇಂದಾದಿಗಳೂ ನಿನ್ನ ಆಟದ ಗೊಂಬೆಗಳೆಂದ ಮೇಲೆ, ಈ ತಂಗಿಯೂ ಒಂದು ಪುಟ್ಟ ಆಟದ ಸಾಮಗ್ರಿ ಆಗಬೇಡವೇ? ನಿನ್ನ ಮಹಾಯತ್ನ, ಭೂಭಾರಾವತರಣ ಕಾರ್ಯದಲ್ಲಿ, ನನ್ನನ್ನು ನಿಮಿತ್ತೀಕರಿಸಿಕೊಂಡೆಯಲ್ಲ!.... ಅದೇ ನನ್ನ ಭಾಗ್ಯ!.... ಈ ಜ್ಞಾನ, ನನಗೆ ವಸಿಷ್ಠರ ಉಪದೇಶದಿಂದ ಬಂದದ್ದು, ನೆನಪಾದ ಮೇಲೆಯೇ, ನಾನು ನಿನ್ನನ್ನು ಆರ್ತಳಾಗಿ ಕರೆದು 'ಶರಣು' ಎಂದೆ! ಅಲ್ಲಿಯವರೆಗೂ ನೀನೂ ಆಟವಾಡಿದೆ!"

ಶ್ರೀಕೃಷ್ಣ: "ನೀನು ಕರೆದ ವಾಕ್ಯ ಹಾಗಿತ್ತು ತಂಗೀ! ನೆನಪಿಸಲೇ?

***ಗೋವಿನ್ದ! ದ್ವಾರಕಾವಾಸಿನ್!***
***ಕೃಷ್ಣ! ಗೋಪೀಜನಪ್ರಿಯ!***
***ಕೌರವೈಃ ಪರಿಭೂತಾಂ ಮಾಂ, ಕಿಂ ನ ಜಾನಾಸಿ ಕೇಶವ***

ನೋಡು, ಮೊದಲು 'ಗೋವಿಂದಾ' ಎಂದೆ! ನನಗೆ ಪ್ರಿಯವಾದ ಹೆಸರು!.... ಇಂದ್ರ ಇಟ್ಟ ಹೆಸರು! ಅವನನ್ನು ಅಣ್ಣ ಎಂದೊಪ್ಪಿ 'ಉಪೇಂದ್ರ'ನಾದ ಪ್ರಸಂಗ, ಗೋವರ್ಧನವನ್ನೆತ್ತಿದ ಪ್ರಸಂಗ ಅದು. ನಾನು ನಿನ್ನ ರಕ್ಷಣೆಗೆಂದು ಹೊರಟರೆ, ನನ್ನನ್ನು ಗೋವರ್ಧನ ಕ್ಷೇತ್ರಕ್ಕೆ ನೀನೇ ಓಡಿಸಿದೆ! ಕಷ್ಟಪಟ್ಟು ಓಡೋಡಿ ಹತ್ತಿರ ಬಂದರೆ, ಮತ್ತೆ 'ದ್ವಾರಕಾವಾಸಿನ್!' ಎಂದೆ! ನನ್ನ ಮನಸ್ಸು ದ್ವಾರಕೆಯನ್ನು ನೆನೆಯಿತು!.... ಅಲ್ಲೆಲ್ಲಾ ನಿನ್ನನ್ನು ಹುಡುಕಿ ಕಾಣದೆ, ನಿನ್ನ ಬಳಿ ಬರುವಷ್ಟರಲ್ಲಿ ಮತ್ತೆ ಗೋಕುಲಕ್ಕೆ ಕಳುಹುತ್ತಾ 'ಗೋಪೀ ಜನಪ್ರಿಯ!' ಎಂದು ನನ್ನ ಪ್ರಿಯ ಸಖಿಯರನ್ನು ನೆನಪು ಮಾಡಿದೆ! ಎತ್ತಣ ಗೋಕುಲ, ಎತ್ತಣ ದ್ವಾರಕೆ, ಎತ್ತಣ ಗೋವರ್ಧನ!!.... ತಂಗೀ, ಆಪತ್ತಿನಲ್ಲಿದ್ದ ನೀನೂ, ನನ್ನನ್ನೂ ಆಪತ್ತಿಗೆ ಸಿಲುಕಿಸಿ, ಹೀಗೆ ಊರಿಂದೂರಿಗೆ ಓಡಾಡಿಸಬಹುದೇ?.... ತಂಗೀ, ನೀನು ಮುಗ್ಧೆಯಲ್ಲ! ನನ್ನ ತಾಯಿ ಯಶೋದೆಯಂತೆ ಶಾಸ್ತ್ರ ಅರಿಯದವಳಲ್ಲ!.... ನಾನು ಹೃದಯದಲ್ಲೇ ಇರಲಿಲ್ಲವೇ?.... ಒಂದೇ ಮಾತಿನಲ್ಲಿ ಹಾಗೆ ಕರೆದಿರಬೇಡವೇ?...."

ದ್ರೌಪದಿ: "ಓಹೋ!.... ಅಣ್ಣನಿಗೆ 'ವಾಕ್ಯಾರ್ಥ' ಕೇಳುವ ವಿನೋದವೋ?.... ಕೇಳಣ್ಣ! ನನಗೆ ತಿಳಿದದ್ದು ಹೇಳುತ್ತೇನೆ.... ನಾನು ಕವಯಿತ್ರೀ ಅಲ್ಲ! ಪಂಡಿತಳೂ ಅಲ್ಲ!.... ನನಗೆ ಆಗ ಎನಿಸಿದ ಭಾವದಲ್ಲಿ ನಿನ್ನನ್ನು ಅಂತರ್ಯಾಮಿಯೆಂದೇ, ತೀರ ಸಮೀಪದವನೆಂದೇ ಕರೆದೆನಲ್ಲ! ನನ್ನೊಡನೆ ವಂಚನೆಯೇ? 'ಗೋವಿಂದ' ಎಂದೆ! ಹೌದು! ಗೋವು ಎಂದರೆ ಇಂದ್ರಿಯ ಎಂಬರ್ಥ ಉಂಟೆಂದು ಬಾಲ್ಯದ ನನ್ನ ಗುರುಗಳು ಹೇಳಿದ್ದರು. ಸರ್ವೇಂದ್ರಿಯಗಳಿಗೂ ಚಾಲಕನಾದ ನಿನ್ನನ್ನು

(ಇಂದ್ರಿಯಾಣಾಂ ವಿಂದಃ =ಲಬ್ಧಾ), 'ನೀನು ನನಗೆ ಹತ್ತಿರವಿಲ್ಲವೇ?' ಎಂದು ಇಂದ್ರಿಯ ಪ್ರಧಾನವಾದ ಮನಸ್ಸಿನಲ್ಲೇ ನೆನೆದೆನಲ್ಲ, ತಪ್ಪೆ!"

**ಶ್ರೀಕೃಷ್ಣ:** "ಭೇಷ್! ತಂಗೀ!.... ನೀನು ಪಂಡಿತಳಲ್ಲವೆಂದರೆ ನಂಬಿಕೆ ಬರುವುದೇ?.... ಇದು ಸರಿ ಎನ್ನುತ್ತೇನೆ !.... ಆದರೆ 'ದ್ವಾರಕಾವಾಸಿನ್' ಎನ್ನುತ್ತ ನನ್ನನ್ನು ದೂರಕ್ಕೆ ದಬ್ಬಿದೆಯಲ್ಲ, ಅದು ಹೇಗೆ ಸರಿ?"

**ದ್ರೌಪದಿ:** "(ನಗುತ್ತಾ), ವಾಕ್ಯಾರ್ಥ ಮುಂದುವರೆಯಬೇಕೋ?.... ಕೇಳು.... ಅದರ ಭಾವನೆ ಹೀಗೆ: ಒಂದೇ ರಾತ್ರಿಯಲ್ಲಿ ನಿನ್ನವರನ್ನು ಆಪತ್ತಿನಿಂದ ಉದ್ಧರಿಸಲು ಸಮುದ್ರ ಮಧ್ಯೆ ಊರನ್ನು ನಿರ್ಮಿಸಿ, ಅಲ್ಲಿಗೆ ಮಧುರಾನಗರಿಯ ಸರ್ವರನ್ನೂ ಸಾಗಿಸಿದ ನಿನಗೆ, ಹಾಗೇ ಇಲ್ಲಿ ಆಪತ್ತಿನಲ್ಲಿ ಸಿಲುಕಿದ ನನ್ನೊಬ್ಬಳ ರಕ್ಷಣೆ ಎಷ್ಟು ಮಾತ್ರ ಎಂಬ ಧ್ವನಿಯಲ್ಲಿ, ಭಾವದಲ್ಲಿ ಹಾಗೆ ಕರೆದೆ! ತಪ್ಪೆ!!"

**ಶ್ರೀಕೃಷ್ಣ:** "(ಕಣ್ಣುಗಳಲ್ಲಿ ಆನಂದಾಶ್ರು ಸುರಿಸುತ್ತಾ!).... ನೋಡಿದೆಯಾ, ತಂಗಿ! ಇದೆಲ್ಲ ತಿಳಿಯದ ಗೊಲ್ಲರ ಹುಡುಗ ನಾನು! ವ್ಯಾಕರಣ ನಿರುಕ್ತ ಅಲಂಕಾರ, ಧ್ವನಿ, ಭಾವ, ರಸ, ಒಂದನ್ನು ಯಾರೂ ಉಪದೇಶಿಸದೆ, ನಾನು ಕಲಿಯದೆ, ನನ್ನನ್ನು ಸರ್ವಜ್ಞ ಎಂದರೆ ಬೈಗಳವಾಗದೆ?"

**ದ್ರೌಪದಿ:** "ಅದೆಲ್ಲ ಸುಳ್ಳು ಇಲ್ಲಿ ಬೇಡ!.... **ಸರ್ವೇ ವೇದಾ ಯತ್ಪದಮಾಮನನ್ತಿ...** ಎಂದವರಾರು? **ವೇದೈಶ್ಚಸರ್ವೈಃ ಅಹಮೇವ ವೇದ್ಯಃ** ಎಂದವರಾರು?... ನನ್ನ ಪತಿ ಅರ್ಜುನರಾಯರು ನಿನ್ನ ಗುಟ್ಟಿನ ಉಪದೇಶವನ್ನೆಲ್ಲ ನನಗೆ ಹೇಳಿಯಾಗಿದೆ! ಅವರು ಮರೆತರೂ ನಾನು ನೆನೆಪಿಟ್ಟಿದ್ದೇನೆ!.... ವೇದವೇದ್ಯನಿಗೆ, ವೇದವಿತ್, ವೇದಾಂತಕೃತ್ ಎಂದು ವರ್ಣಿಸಿಕೊಂಡವನಿಗೆ ಈ ವೇದಾಂಗಗಳೂ ಶಬ್ದಶಾಸ್ತ್ರಾಲಂಕಾರಾದಿಗಳೂ ಗೊತ್ತಿಲ್ಲವೆಂದರೇನು?.... ನೀನು ರಸ, ಆ ಗಮ್ಮಕ್ಕೆ ಇವೆಲ್ಲ ಗಮಕಗಳು, ಅಣ್ಣ!.... ರಸೋ ವೈ ಸಃ ಎಂಬುದನ್ನು ಕೇಳಿದವಳು ನಾನು!.... ಮುಂದಿನ ಪ್ರಶ್ನೆ ಕೇಳು. 'ಕೃಷ್ಣ!' ಎಂದೇಕೆ ಕರೆದೆನೆಂದಲ್ಲವೇ?"

**ಶ್ರೀಕೃಷ್ಣ:** "ಓಹೋ! ಜಗಳಕ್ಕೆ ತಯಾರಾಗಿಯೇ ಬಂದಿರುವಂತಿದೆ!!.... ಹೂಂ... ಹೇಳು ತಂಗೀ! ನಿನ್ನ ರಕ್ಷಣೆಗೆಂದು ನೀನೇ ಕರೆದ ಮೇಲೆ ಹೊರಟು ಬಂದ ನಾನು ಕಪ್ಪು ಬಣ್ಣದವನೋ, ಕೆಂಪು ಬಣ್ಣದವನೋ, ಆ ಬಣ್ಣದ ಮೇಲೇಕೆ ನಿನ್ನ ಜ್ಞಾನ! ನಿನ್ನ ಬಣ್ಣವೇ ಕಪ್ಪಿದ್ದಾಗ, ನೀನೇ ಕೃಷ್ಣಾ ಎನಿಸಿದಾಗ, ನನ್ನನ್ನು ಹಾಗೆ ಹೀಯಾಳಿಸಬಹುದೇ?"

**ದ್ರೌಪದಿ:** "ಅಣ್ಣ! ಹಾಗಾದರೆ ನಿನ್ನ ಹೆಸರಿಟ್ಟ ಗರ್ಗಾಚಾರ್ಯರು ಇದನ್ನೇ ಉದ್ದೇಶಿಸಿದ್ದರೆ? ನಿನ್ನ ತಾಯಿ, ನಿನ್ನ ಅಣ್ಣ, ಬಂಧುಗಳೂ, ನನ್ನ ಪತಿಗಳೂ ಹಾಗೆ ಕರೆದಾಗಲ್ಲ ನಿನಗೆ ಸಿಟ್ಟೇ ಬರುತ್ತಿತ್ತೆ?.... 'ಸ್ಮೃತಮಾತ್ರ ಏವ ಸರ್ವದೋಷ ಕರ್ಷಣಃ'- 'ನೆನೆಸಿದೊಡನೆಯೇ, ನೆನೆದವನ ಸರ್ವದೋಷಗಳನ್ನೂ ಸೆಳೆದು, ಅಪಹಾರ ಮಾಡುವವನು' ಎಂಬ ನಿನ್ನ ನಾಮನಿರ್ವಚನ ನೆನಪಿಗೆ ಬಂತು!.... ನನ್ನ ದೋಷ ಮನ್ನಿಸೆಂದರೆ, ನಿನ್ನ ದೋಷ ಹೇಳಿದಂತಾಯಿತೇ?"

**ಶ್ರೀಕೃಷ್ಣ:** "(ಆನಂದ ತಡೆಯಲಾಗದೆ, ಹಿಗ್ಗಿ).... ತಂಗೀ, ಇಂದಿನ ವಾಕ್ಯಾರ್ಥದಲ್ಲಿ ನನಗೇ ಸೋಲಾಗುವಂತಿದೆ! ಆಗಲಿ, ಭಕ್ತರ ಕೈಲಿ ಸದಾ ಸೋಲುವವನಲ್ಲವೇ ನಾನು?.... ಈ ಕೊನೆಯದಕ್ಕೆ ಉತ್ತರಿಸಿಬಿಡು.... ನೋಡೋಣ!.... ನಾನೆಲ್ಲೋ ಚಿಕ್ಕ ಪ್ರಾಯದಲ್ಲಿ ಹಳ್ಳಿಯ ಹುಡುಗಿಯರೊಡನೆ ಪ್ರಣಯ ಪ್ರಸಂಗಗಳಲ್ಲಿ ಸಿಕ್ಕಿಬಿದ್ದಿದ್ದರೆ, ಅದನ್ನೆಲ್ಲ ನಿನ್ನ ಆಪತ್ತಿನಲ್ಲಿ ನನಗೆ ನೆನಪಿಸಿ, ಕೋಪ ಬರುವಂತೆ ' ಗೋಪೀಜನಪ್ರಿಯ!' ಎಂದು ಕರೆಯುವುದೇ? ಇದು ನಿನಗೆ ಭೂಷಣವೇ?.... ನಿನ್ನ ಪತಿಗಳಿಗೆ ನಾನು ಪ್ರಿಯನಿರಲಿಲ್ಲವೇ? ಹೋಗಲಿ, ನಿನಗೇ ಪ್ರಿಯನಿರಲಿಲ್ಲವೇ? ಹಾಗೆ ಕರೆಯಬಾರದಿತ್ತೆ?"

**ದ್ರೌಪದಿ:** "ಮತ್ತೆ, ವಾಕ್ಯಾರ್ಥಚಪಲ!"

**ಶ್ರೀಕೃಷ್ಣ:** "ತಂಗೀ! ನಿಜ ಹೇಳಲೇ! ಭಕ್ತಿಯ ಲವಲೇಶವೂ ಇಲ್ಲದ ಪ್ರಚಂಡ ಪಂಡಿತರು ದೊಡ್ಡ ದೊಡ್ಡ ಸಭೆಗಳಲ್ಲಿ ವೇದವಾಕ್ಯಗಳನ್ನು ಎತ್ತೆತ್ತಲೋ ಎಳೆದಾಡಿ, ತಮ್ಮ ವಾಗ್ಝರಿಯನ್ನು

ಹರಿಯಬಿಡುವ ಶುಷ್ಕ ವಾಕ್ಯಾರ್ಥ ಸಭೆಗಳಲ್ಲಿ ಕುಳಿತು ಕೇಳೀ ಕೇಳೀ ಬೇಸತ್ತಿದ್ದೇನೆ? ಮೂಟೆಗಟ್ಟಲ್ಲ ಏನದು, ಗಾಡಿ ಹತ್ತುವ ಮುನ್ನ, ಒಂದು ಒಳ್ಳೆಯ ವಾಕ್ಯಾರ್ಥವನ್ನು ಪ್ರೀತಿಯ ತಂಗಿಯ ಬಾಯಲ್ಲಿ ಕೇಳಲು ಆಶಿಸಿದರೆ, ಅದು ಚಾಪಲ್ಯವೇ? ಬಾಯಾರಿದವನು 'ನೀರು ತಾ' ಎಂದರೆ 'ನೀರಿನ ಚಪಲ' ಎನ್ನಬಹುದೇ?"

**ದ್ರೌಪದಿ:** "ಕೇಳಣ್ಣ! ಗೋಪೀ ಜನರು ನಿನ್ನನ್ನೊಲಿಸಲು ಏನು ಸಾಧನೆ ಮಾಡಿದ್ದರು? ಸ್ನಾನ ನಿಯಮವಾಗಲಿ, ಸಂಧ್ಯಾದಿ ನಿಯತಿಗಳಾಗಲಿ, ವ್ರತ, ಹೋಮ, ಯಾಗಾದಿಗಳಾಗಲಿ, ಯೋಗ ಮಾರ್ಗವಾಗಲಿ, ಏನೂ ಅರಿಯದವರನ್ನೇ ಪ್ರೇಮಿಸಿದ ನೀನು, ಅಂದು, ಆಪತ್ತಿನಲ್ಲಿದ್ದ ನನ್ನಿಂದ ಯಾವ ಸಾಧನೆಯನ್ನು ಬಯಸಿ, ಬರಲು ಹಿಂದೆ ಮುಂದೆ ನೋಡಿದೆ?- ಎಂಬುದು ನನ್ನ ನೋವಿನ ಧ್ವನಿಯಾಗಿತ್ತು! ಅವರಿಗೊಲಿದವನು, ನನಗೊಲಿಯಬಾರದೇ? ಎಂಬುದು ನನ್ನ ಭಾವವಿತ್ತು! ಅಥವಾ ಕೆಲವು ಕುಹಕೀ ಪಂಡಿತರು ಸ್ತ್ರೀಯರಲ್ಲಿ ದೋಷಗಳ ಪಟ್ಟಿಯನ್ನೇ ಮಾಡಿರುವರಲ್ಲ. ಅದು ನೆನಪಾಗಿ ಬರಲಿಲ್ಲವೋ? ಎಂಬಂತಿದ್ದೆ?"

**ಶ್ರೀಕೃಷ್ಣ:** "ಯಾವುದು ಆ ಪಟ್ಟಿ? ಶ್ಲೋಕ ಹೇಳು?"

**ದ್ರೌಪದಿ:** ನನ್ನ ಪರೀಕ್ಷೆ ಪೂರ್ಣವಾಗಲಿ, ಬಿಡು

***ಅನೃತಂ ಸಾಹಸಂ ಮಾಯಾ ಮೂರ್ಖತ್ವಂ ಅತಿಲೋಭತಾ।***
***ಅಶೌಚಂ ನಿರ್ದಯತ್ವಂ ಚ ಸ್ತ್ರೀಣಾಂ ದೋಷಾಃ ಸ್ವಭಾವಜಾಃ॥***

ಸುಳ್ಳು ಹೇಳುವುದು, ಆಗದುದಕ್ಕೇ ಪ್ರಯತ್ನಿಸುವುದು, ವಂಚನೆ, ಮೊಂಡುತನ, ಸ್ವಾರ್ಥ, ತ್ರಿಕರಣ ಶುದ್ಧಿಯಿಲ್ಲದಿರುವುದು, ಒರಟುತನ, ದಯಾ ಶೂನ್ಯತೆ-ಇವೇ ಸ್ತ್ರೀಯರ ಸಹಜ ದೋಷಗಳಂತೆ!.... ಅದು ಸರಿಯೆಂದೇ ಇಟ್ಟುಕೋ! ಗೋಪಿಯರು ಸ್ತ್ರೀಯರೇ ತಾನೇ? ಅವರಲ್ಲಿಲ್ಲದ ಯಾವ ಹೆಚ್ಚಿನ ದೋಷವನ್ನು ನನ್ನಲ್ಲಿ ಕಂಡೆ, ಅಣ್ಣಾ! ಯಾತಕ್ಕಾಗಿ ಉಪೇಕ್ಷೆ? ಎಂಬ ಭಾವದಲ್ಲಿ ಕರೆದೆ! ತಪ್ಪೆ?"

**ಶ್ರೀಕೃಷ್ಣ:** "ತಂಗೀ, ನನ್ನ ಕಣ್ಣು ತೆರೆದೆ! ಒಂದೆರಡನ್ನಲ್ಲ! 'ಪಿಶ್ವತಶ್ಚಕ್ಷುಃ' ಎಂಬ ಖ್ಯಾತಿಯ ನನ್ನ ಎಲ್ಲ ಕಂಗಳನ್ನೂ ತೆರೆದೆ, ತಾಯಿ!.... ಕೃಷ್ಣೆ!.... ಇನ್ನು ಮೇಲೆ ಯಾರು ಆಪತ್ತಿನಲ್ಲಿ ಏನೆಂದು ನನ್ನನ್ನು ಕರೆದರೂ ಚಿಂತಿಸುವುದೇ ಇಲ್ಲ, ನನ್ನಾಣೆ, ನಿನ್ನಾಣೆ! ನಿನ್ನ ಆಪತ್ತು ಯಾರಿಗೂ ಬರದಿರಲಿ!.... ಆ ಇನ್ನೊಂದು ನಿನ್ನ ಪ್ರಾರ್ಥನೆಯ ಅರ್ಥ ಈಗ ನನಗೆ ಚೆನ್ನಾಗಿ ಆಯಿತು!...."

**ದ್ರೌಪದಿ:** "ಯಾವುದು?"

**ಶ್ರೀಕೃಷ್ಣ:** "ನಿನಗೇ ಮರೆಯಿತೇ!.... ಅಥವಾ ನನ್ನ ಬಾಯಲ್ಲೇ ಕೇಳಲು ಆಸೆಯೋ?...."

**ದ್ರೌಪದಿ:** "ಹಾಗೇ ಇಟ್ಟುಕೋ!.... ಹೇಳು, ನೋಡೋಣ!!"

**ಶ್ರೀಕೃಷ್ಣ:** "ಓಹೋ! ನನ್ನ ನೆನಪಿನ ಶಕ್ತಿಯ ಪರೀಕ್ಷೆ, ಅಲ್ಲವೇ! ಇಕೋ, ನೋಡು!

***ಶಂಖಚಕ್ರಗದಾ ಪಾಣೇ! ದ್ವಾರಕಾನಿಲಯಾ! ಅಚ್ಯುತ!॥***
***ಗೋವಿಂದ! ಪುಂಡರೀಕಾಕ್ಷ! ರಕ್ಷಮಾಂ ಶರಣಾಗತಾಂ॥***

ಸರಿ ತಾನೇ?"

**ದ್ರೌಪದಿ:** "ಅಬ್ಬ! ಇಷ್ಟು ಅಚ್ಚುಕಟ್ಟು ನೆನಪಿನವನಿಗೆ ಹೇಳುವುದೇನು?.... ಈಗ ಹೇಳು ಇದನ್ನು ಹೇಗೆ ಅರ್ಥ ಮಾಡಿಕೊಂಡೆ?"

**ಶ್ರೀಕೃಷ್ಣ:** "ನನ್ನ ಕೈಯಲ್ಲಿ ವಾಕ್ಯಾರ್ಥ ಹೇಳಿಸುವ ಉದ್ದೇಶವೋ?..."

**ದ್ರೌಪದಿ:** "ನೀನಾವ ಅವತಾರದಲ್ಲೂ ವಾಕ್ಯಾರ್ಥ ಮಾಡಲಿಲ್ಲವೆಂದೇ ನಿನ್ನ ಬಗೆಗೆ ಎಲ್ಲ ವೇದವಾಕ್ಯಗಳೂ ನಾನಾ ರೀತಿಯಲ್ಲಿ ವಿಳೆದಾಡಲ್ಪಡುತ್ತಿವೆ!.... ಇದೊಂದಕ್ಕೆ ಮಾಡಿಬಿಡು!"

ಶ್ರೀಕೃಷ್ಣ: "ಮೊದಲು 'ಶಂಖಚಕ್ರಗದಾಪಾಣೇ' ಎಂದೆಯಲ್ಲ! ಅದು ನನಗೆ 'ಪ್ರಭು! ನೀನು ನಿರಾಯುಧನಲ್ಲ! ನನ್ನ ರಕ್ಷಣೆಗೆ ವಿಳಂಬವೇಕೆ?' ಎಂಬ ಧ್ವನಿ ಕೊಟ್ಟಿತ್ತು!.... ಎರಡನೆಯದಾಗಿ 'ದ್ವಾರಕಾನಿಲಯ' ಎಂದೆಯಲ್ಲ!.... ಅದು ನನಗೆ 'ಸ್ವಾಮೀ! ನೀನು ನಿರ್ವಾಸಿತನೇನಲ್ಲ!.... ಯಾರೂ ನಿನ್ನನ್ನು ಊರು ಬಿಟ್ಟು ನೆಲೆ ನಿಲ್ಲದಂತೆ ಓಡಿಸಲಿಲ್ಲ! ಸ್ವೇಚ್ಛೆಯಿಂದಲೇ ಊರಿಲ್ಲದಲ್ಲೂ ಊರು ನಿರ್ಮಿಸಿದವನು; ನನಗ ನಿಲ್ಲಲು ನೆಲೆ ಕಲ್ಪಿಸಬೇಡವೇ? ಈ ದುರ್ಯೋಧನ ಸಭೆಯಲ್ಲಿ ನಿರಾಶ್ರಿತಳಿಗೆ ಜಾಗ ತೋರಿಸಲಾರೆಯಾ?' ಎಂಬ ಧ್ವನಿ ಕೊಟ್ಟಿತ್ತು!"

**ದ್ರೌಪದಿ:** "(ಆ ಭಾವಗಳನ್ನು ನೆನೆದು, ಅಂದಿನ ಭಯವನ್ನೇ ಮರುಕಳಿಸಿದ ನೆನಪಿನಿಂದ ಖಿನ್ನೆಯಾಗಿ ಅಳುತ್ತಾ), ಪ್ರಭು!.... ನನಗೆ ಪತಿಗಳೂ ಬೇಡ, ರಾಜ್ಯವೂ ಬೇಡ, ಏನೂ ಬೇಡ, ನಿನ್ನ ವಾಗಮೃತವನ್ನೇ ಕೇಳುತ್ತಿರಬೇಕೆನಿಸಿದೆ.... ಹೇಳು ಹೇಳು, ಅಣ್ಣಾ!"

**ಶ್ರೀಕೃಷ್ಣ:** "ಆಮೇಲೆ 'ಅಚ್ಯುತ' ಎಂದೆ! ಅದು, 'ನಾನೇ ಶಾಶ್ವತನಲ್ಲ, ನಿನ್ನನ್ನು ಹೇಗೆ ರಕ್ಷಿಸಲಿ? ಎನ್ನಬೇಡ, ತಂದೆ! ನೀನೇ ಶಾಶ್ವತ, ನಾನಲ್ಲ! ಎಂಬ ದೈನ್ಯದ ಮೊರೆಯನ್ನು ಕೇಳಗೊಟ್ಟಿತು!.... ಅನಂತರ 'ಗೋವಿಂದ' ಎಂದೆ. ಈಗಲಿ, ನೀನೆಂದಂತೆ, ಅದು 'ನನ್ನ ಕಷ್ಟ ತಿಳಿಯದವನಲ್ಲ.... ಇಂದ್ರಿಯಗಳಲ್ಲೇ ಇರುವೆ!' ಎಂಬರ್ಥ ನೀಡಿತು. ಆಮೇಲೆ 'ಪುಂಡರೀಕಾಕ್ಷ' ಎಂದೇ!.... ಓ!"

**ದ್ರೌಪದಿ:** "ಅದು ಬರೀ ನಿನ್ನ ಕಂಗಳ ಸೊಬಗಿನ ಹೊಗಳಿಕೆ ಎಂದು ಭಾವಿಸಿದೆಯಾ?"

**ಶ್ರೀಕೃಷ್ಣ:** "ಹೇಗಾದೀತು, ತಂಗಿ? ಅದು ನನ್ನ ಸರ್ವೇಶ್ವರತ್ವವಾಚಕ ಎಂಬ, ನನ್ನ ಹೃದಯವನ್ನೇ ಮುಟ್ಟುವ ವಾಚಕ ಎಂದು ವೇದವೇದಾಂತಗಳು ವೇದಾಸ್ತಿಗಳೂ ಹೇಳಿದ್ದು ತಿಳಿಯದೆಯೇ, ನಾನು 'ವೇದೈಶ್ಚ ಸರ್ವೈ ರಹಮೇವ ವೇದ್ಯಃ' ಎಂದೆನೇ?"

**ದ್ರೌಪದಿ:** "ಅಣ್ಣಾ! ಒಂದು ಕಣ್ಣಲ್ಲಿ ಸೂರ್ಯನನ್ನೂ ಇನ್ನೊಂದರಲ್ಲಿ ಚಂದ್ರನನ್ನೂ, ನಿಗ್ರಹ, ಅನುಗ್ರಹ ಶಕ್ತಿಗಳನ್ನೂ, ತಾಪಶಕ್ತಿಯನ್ನೂ, ತಾಪಹರತ್ವವನ್ನೂ ಏಕಕಾಲಕ್ಕೆ ಹೊಂದಿರುವ ಏಕಮೇವ, ದೇವತಾ ಸಾರ್ವಭೌಮ ನೀನೆಂದಲ್ಲವೇ? ಆ ಬಿರುದು ನಿನಗೆ? ಇದರ ಮೇಲೆ ಉಪನ್ಯಾಸ ಕೇಳುವ ವೇಳೆ ನಿನಗುಂಟೇ?"

**ಶ್ರೀಕೃಷ್ಣ:** "ತಂಗಿ, ಗಾಢ ನೆನಪಿಸಿದೆ!.... ಇನ್ನು 'ಅನುಗ್ರಹ ಶಕ್ತಿಯಿಲ್ಲದವನಲ್ಲವೆಂದ ಮೇಲೆ ನನ್ನನ್ನು ರಕ್ಷಿಸಲು ವಿಳಂಬವೇಕೆ?' ಎಂಬ ನಿನ್ನ ಧ್ವನಿ ನನಗೆ ಕೇಳಿಸಿತ್ತು! 'ರಕ್ಷ ಮಾಂ' ಎಂದೆ! ನಿನ್ನ ಪ್ರಪನ್ನತ್ವ ಹೇಳಿಕೊಂಡೆ, ಅದನ್ನು ಬಾಯಿಬಿಟ್ಟೇ 'ಶರಣಾಗತಾಂ' ಎಂದೆ. ಇಂಥ ಶರಣಾಗತಿ ಮಾಡಿದ ಮೇಲೆ, ತಡೆದೆನೇ? ಓಡೋಡಿ ಬಂದೆನೇ?...."

**ದ್ರೌಪದಿ:** "ನಿನ್ನನ್ನಾಕ್ಷೇಪಿಸಿದವರಾರು?...."

**ಶ್ರೀಕೃಷ್ಣ:** "ನನ್ನ ಹೃದಯವೇ ನನ್ನನ್ನು ಹಳಿಯಿತು!.... ನ್ಯಾಯವಾಗಿ ನಾನೂ ಆ ಸಭೆಯಲ್ಲಿ ಪ್ರತ್ಯಕ್ಷವಾಗಿದ್ದಿರಬೇಕು! ಆದರೆ ಅಲ್ಲಿಗೆ ನಿನ್ನ ಪತಿಗಳೂ ಕರೆಯಲಿಲ್ಲ! ಧೃತರಾಷ್ಟ್ರನೂ, ಆತನ ಮಕ್ಕಳೂ ಕರೆಯುವ ಸಾಧ್ಯತೆಯೂ ಇಲ್ಲವೆಂದು ಪರಿತಪಿಸಿ, ಬೇರೆಲ್ಲೋ ಇದ್ದೆ! 'ಹತ್ತಿರವೇ ಇದ್ದಿದ್ದರೆ!' ಎಂದು ಹೃದಯ ಪರಿತಪಿಸಿತು...."

**ದ್ರೌಪದಿ:** "ಅಂತೂ, ಎಲ್ಲಿದ್ದರೂ, ಅಕ್ಷಯ ವಸ್ತ್ರವಿತ್ತು ಅನುಗ್ರಹಿಸಿದೆಯಲ್ಲ! ಇನ್ನೇನು ಕೊರತೆ!"

**ಶ್ರೀಕೃಷ್ಣ:** "ನಾನೆಲ್ಲಿ ಅನುಗ್ರಹಿಸಿದೆ?.... ನನ್ನ ಹೆಸರುಗಳನ್ನು ನೀನು ಕರೆದೆ! ಆ ಶ್ರೀನಾಮಗಳು ತಮ್ಮ ಕೆಲಸ ಮಾಡಿದವು! ನಾನಾಗಿ ನಿನಗೆ ಏನೂ ಮಾಡಲಿಲ್ಲ! ನಾನು ಮಾಡಬೇಕೆಂಬಷ್ಟರಲ್ಲಿ ಸಮಸ್ಯೆ ಉಳಿಯಲಿಲ್ಲವೆಂದ ಮೇಲೆ, ನಾನೇನು ಮಾಡಿದೆ? ಮಾಡದ ಕೊರತೆ ತೀರುವುದೆಂತು?"

**ದ್ರೌಪದಿ:** "ಇನ್ನೇನು ಅನುಗ್ರಹ ಮಾಡಬೇಕೆಂದಿದ್ದೆ ಅಣ್ಣಾ!"

**ಶ್ರೀಕೃಷ್ಣ:** "ಆಗದುದನ್ನೆಲ್ಲ ಹೇಳಿ, ಹೊಟ್ಟೆಉರಿ ಪಡುವುದೊಂದೇ ನನ್ನ ಬಾಳಾಯ್ತು!... ನಿನ್ನ ಮಕ್ಕಳನ್ನಾದರೂ ಕಾಯ್ದೆನೇ!.... ಹಾಳು ಅಶ್ವತ್ಥಾಮ, ಕಳ್ಳಕೊಲೆಗಡುಕನಾಗಿ ಕಾರ್ಗತ್ತಲೆಯಲ್ಲಿ ಕೊಂದುಹಾಕಿದ!.... (ಕೃಷ್ಣ ಕೋಪದಿಂದ ಬುಸುಗುಡುತ್ತಾನೆ!)"

**ದ್ರೌಪದಿ:** "ಅಣ್ಣಾ! **'ಅನಿತ್ಯಂ ಅಸುಖಂ ಲೋಕಂ'** ಎಂದೆಯಲ್ಲ! ಅದು ನನಗೂ ಅನ್ವಯ ತಾನೇ!.... ಹೋಗಲಿ ಬಿಡು! ಗಂಡಂದಿರಿದ್ದು ರಕ್ಷಿಸಿ ನೋಡಿ ಆಯ್ತು! ಇನ್ನು ಮಕ್ಕಳಿಂದ ಆ ಚಾಪಲ್ಯ ನನಗಿರಬೇಕಿತ್ತೆ?.... ಮೋಹಗಳನ್ನು ನೀನು ನೀಗುವವನಲ್ಲವೇ?.... ನೀನು ಮಾಡಿದ್ದೆಲ್ಲ ಅನುಗ್ರಹವೇ ಆಯ್ತು"

**ಶ್ರೀಕೃಷ್ಣ:** "ಅನುಗ್ರಹ ಪಡೆದವರಿಗೆ, ಅದಿನ್ನೆಷ್ಟು ಪಟ್ಟು ಹೆಚ್ಚಾಗಿದ್ದಿರಲು ಶಕ್ಯವೆಂಬ ಕಲ್ಪನೆ ಇರುವುದು ಶಕ್ಯವಿಲ್ಲ ತಂಗಿ! ಅದು ಈ ಮರ್ತ್ಯ ಲೋಕದ ಮಿತಿ! ಅನುಗ್ರಹ ಮಾಡುವವನಿಗೆ ಮಾತ್ರ ಅದರ ಅಪಾರತೆ, ಗಾಢತೆ, ಅನಂತತೆ ತಿಳಿದೀತು! ಮರ್ತ್ಯ ಲೋಕದಾಚೆಯ ನನಗೆ ಅದು ಮರೆಯಲಾಗದೆ ಕಣ್ಣಿಗೆ ಕಟ್ಟಿರುವಾಗ, ಮರೆಯುವದೆಂತು, ತಂಗೀ!.... ನಿನ್ನನ್ನು ಸರಿಯಾಗಿ ನಾನು ಅನುಗ್ರಹಿಸಲಿಲ್ಲ! ನಿನಗೆ ಆಪತ್ತು ಬರುವ ಮುಂಚೆಯೇ ಸಕಾಲದಲ್ಲಿ ಅನುಗ್ರಹಿಸಲಿಲ್ಲ!".... ಶ್ರೀಕೃಷ್ಣನಿಗೆ ಕಾಲಿನ ನೋವು ಹೆಚ್ಚಾಯಿತು!.... ದ್ರೌಪದಿ ಅದೃಶ್ಯಳಾದಳು!....

* * * * *

ರಾತ್ರಿಯೆಲ್ಲ ಶ್ರೀಕೃಷ್ಣನಿಗೆ ದ್ರೌಪದಿಯ ಸ್ಮರಣೆಯೇ ಆಗಿತ್ತು! ಆ ನೋವಿನ ಸಾಂದ್ರತೆಯನ್ನು ಯಾರು ವರ್ಣಿಸಿಯಾರು?.... ಅದನ್ನು ಯಾವ ವೇದಾಂತಿ ಅರ್ಥೈಸಿಯಾನು?.... ಯಾವ ಕವಿಸಹೃದಯ ಊಹಿಸಿಯಾನು?.... ಇನ್ನೊಬ್ಬ ಭಗವಂತನಿರುವ ಶಕ್ಯತೆ ಇದ್ದರೆ, ಅವನಿಗೆ ಮಾತ್ರ ಅದು ಶಕ್ಯವೆಂದೇ ಹೇಳಬಹುದಲ್ಲವೇ?.... "ಕೃಷ್ಣೇ... ಕೃಷ್ಣೇ!.... ತಂಗೀ!.... ನೀನು ನನ್ನಲ್ಲಿಟ್ಟ ಪ್ರೀತಿಗೆ, ಭಕ್ತಿಗೆ.... ನಾನು ನಿನ್ನನ್ನು ಸರಿಯಾಗಿ ನೋಡಿಕೊಳ್ಳಲಾಗಲಿಲ್ಲ"..... ಎನ್ನುತ್ತಾ ಕೃಷ್ಣ ರಾತ್ರಿಯ ಹಲವು ಭಾಗವನ್ನು ನೂಕಿದ....

ರಾತ್ರಿ ಕಳೆಯುತ್ತಾ ಬಂತು! ಸೂರ್ಯೋದಯದ ಸೂಚನೆಗಳು ಆಗಸದಲ್ಲಿ ಕಾಣಲಾರಂಭಿಸಿದವು.

ಅವತಾರಿಯ ದಿವ್ಯ ಶರೀರದಲ್ಲಿನ ವ್ಯಾಪಾರಗಳು ಅವನೇ ಏರ್ಪಡಿಸಿದ ಕಟ್ಟಳೆಯಲ್ಲಿ ಒಂದೊಂದಾಗಿ ನಿಲ್ಲುತ್ತ ಬಂದವು!

"ಪರಂಬ್ರಹ್ಮ", "ಪರ ತತ್ವಂ", "ಪರೋಜ್ಯೋತಿಃ", "ಪರಂ ಆತ್ಮಾ", ಎನಿಸಿದ ಆ ಅಕೃತಕ ಜ್ಯೋತಿಯು ಇಹಲೋಕವನ್ನು ತ್ಯಜಿಸಿ, ಪರಂ-ಧಾಮಕ್ಕೆ ತೆರಳುವ ಕಾಲ, ಆ ಜ್ಯೋತಿಯ ಸಂಕಲ್ಪದಿಂದಲೇ ಬಂದು ಪ್ರಾಪ್ತವಾಯಿತು!

"ಅರ್ಜುನಾ! ನೀನು ಬರಲಿಲ್ಲ! ನಾನು ಕೊನೆಯದಾಗಿ ನಿನ್ನನ್ನು ಕಾಣಬಯಸಿದ್ದೆ! "ಇಷ್ಟೋಽಸಿ ಮೇ".... ಆದವನೇ?.... ಏಕೋ ಬರಲಿಲ್ಲ!....

ಅರ್ಜುನ ಇನ್ನೂ ಬರಲಿಲ್ಲ! ಮತ್ತೆ ಶ್ರೀಕೃಷ್ಣ 'ತಂಗಿ'ಯನ್ನು ನೆನೆದ! "ದ್ರೌಪದಿ! ಕೃಷ್ಣೇ! ಪುಣ್ಯವತಿ!... ಮಹಾಭಾಗಳೇ! ನನ್ನನ್ನು ಕ್ಷಮಿಸು..." ಎನ್ನುತ್ತಾ ಶ್ರೀಕೃಷ್ಣ ಕೊನೆಯುಸಿರೆಳೆದ!!

* * * * *

ಒಂದು ಕ್ಷಣ ಸೂರ್ಯ ಬಹು ಪ್ರಕಾಶಮಾನವಾಗಿ ಮಿಂಚಿ ಮೇಲೆದ್ದ! ದೇವತೆಗಳೆಲ್ಲ ಪುಷ್ಪವೃಷ್ಟಿಗೈದರು! ನೆಲಕ್ಕೊರಗಿದ್ದ ಆ ಸುಂದರ ಕೃಷ್ಣ ಮೂರ್ತಿಯ ಪಾದಗಳಿಂದ ಮುಡಿಯವರೆಗೆ ನಾನಾ ವರ್ಣದ ಹೂಗಳು ಶರೀರದ ಮೇಲೆ ಬೀಳುತ್ತಾ, ಅದೊಂದು ಪುಷ್ಪಶಯನವೆನಿಸಿತು!

ಚತುರ್ಭುಜನೂ, ನೀಲಮೇಘಶ್ಯಾಮನೂ, ಪೀತಾಂಬರಧಾರಿಯೂ, ಶಂಖಚಕ್ರಾದಿ ಆಯುಧ ಸಮೇತನೂ, ಕೋಟಿಕೋಟಿ ಸೂರ್ಯಪ್ರಕಾಶನೂ ಆದ ದಿವ್ಯ ಪುರುಷನೊಬ್ಬ ಆ ಶ್ರೀಕೃಷ್ಣ ವಿಗ್ರಹದಿಂದ ಮೇಲೇಳುತ್ತಾ, ಅಭಯ ಹಸ್ತ ಚಾಚುತ್ತಾ, ಆಗಸದಲ್ಲಿ ಅಂತರ್ಧಾನನಾದ! ವಿಮಾನಗಳಲ್ಲಿ ದೇವತೆಗಳೂ ಗಂಧರ್ವ ಅಪ್ಸರೆಯರೂ ಮಹರ್ಷಿಗಳೂ ಹಿಂಬಾಲಿಸಿದರು!

ಲೋಕಕ್ಕೆ ಆ ಜ್ಯೋತಿ ಮರೆಯಾಯ್ತು! ಮೇಲೆದ್ದ ಸೂರ್ಯ ಅಂದು ಗ್ರಹಣ ಬಡಿದವನಂತೆ ಪ್ರಕಾಶಹೀನನಾಗಿದ್ದ! ಆಕಾಶದಲ್ಲಿ ಮೋಡಗಳು ಮುಸುಗಿದವು. ಬಿರುಗಾಳಿಯೊಂದು ಎದ್ದು ಧೂಳನ್ನು ಎತ್ತಲೂ ಎರಚಿತ್ತು!!

* * * * *

ರಾಣೀವಾಸದವರು ಕೆಟ್ಟ ಕನಸನ್ನು ಕಂಡವರಂತೆ ಚೀರಿ ಮೂರ್ಛಿತರಾದರು!.... ಸ್ವಯಂ ಗರ್ಗಾಚಾರ್ಯರೇ, ಬ್ರಾಹ್ಮಣ ವಸತಿಯಿಂದ ಬಂದು, ಆ ಮಹಾಸ್ಮಶಾನದಲ್ಲಿ ಶ್ರೀಕೃಷ್ಣ ಇದ್ದ ಸ್ಥಳವನ್ನು ಹುಡುಕಿದರು!

ಹೂಗಳ ರಾಶಿಯ ಸ್ಥಳಕ್ಕೆ, ಅಲ್ಲಲ್ಲಿ ಹುಡುಕಾಡುತ್ತಾ ಬಂದರು. ನಿಧಾನವಾಗಿ ಹೂಗಳನ್ನು ಸರಿಸಿ ನೋಡಿದರು! ಕಣ್ಣು ಮುಚ್ಚಿ, ಮತ್ತೆ ತೆರೆದರು!... ಮುಚ್ಚಿದ ಅರವಿಂದ ನೇತ್ರಗಳು!... ಕೊಂಚವೂ ಸುಕ್ಕು ಹಿಡಿಯದ ಸುಂದರ ದೇಹ! ಕಪ್ಪು ಮಾಸದ ಕೇಶರಾಶಿ! ಅನುಗ್ರಹ ಹಸ್ತ! ನಿದ್ರಿಸುವ ಶೈಲಿಯ ಸುಂದರ ಶಯನ!.... ಪಾದಗಳನ್ನು ನೋಡಿದರು!... ಯಾವ ಗಾಯದ ಗುರುತೂ ಅಲ್ಲಿರಲಿಲ್ಲ!.... ಯಶೋದೆ ಕಟ್ಟಿದ ಪೀತಾಂಬರದ ಚೂರು ಹಾಗೇ ಇತ್ತು! ವಿನೋದಕ್ಕೆ ಕೃಷ್ಣ ಹೇಳಿದ್ದ 'ದಾಸವಾಳ', 'ಕಣಗಿಲೇ', 'ತುಳಸಿ'ಗಳು ಸಾಂದ್ರವಾಗಿ ಆ ಪಾದವನ್ನಲಂಕರಿಸಿದ್ದವು!.... ದುಃಖ ತಡೆದು, ಗರ್ಗರು ಮೇಲೆದ್ದು, ರಾಣಿಯರಿಗೆ ಏನು ಹೇಳಬೇಕೆಂದು ತೋರದೆ ಯೋಚಿಸುತ್ತಾ ನಿಂತರು!

.... ದೂರದಲ್ಲಿ ಖುರಪುಟಗಳ ಶಬ್ದ ಕೇಳಿಸಿತು! ದ್ವಾರಕೆಯ ಶೈಲಿಯಲ್ಲಿ ನಿರ್ಮಿತವಾದ ಬಂಗಾರದ ರಥ.... ಹತ್ತಿರ ಬರುತ್ತಾ, ದಾರುಕ ಸಾರಥಿ ಎಂದು ವಿದಿತವಾಯ್ತು..."ರಥಿ ಯಾರು?" ಎಂದು ಕಂಗಳಿಗೆ ಅಂಗೈ ಅವುಚಿ, ದೂರಕ್ಕೆ ನೋಡಿದರು!

ರಥ ಹತ್ತಿರ ಹತ್ತಿರ ಬರುತ್ತಿತ್ತು! ದಣಿದಿದ್ದ ಕುದುರೆಗಳೂ ಶಕ್ತಿ ಮೀರಿ ಓಡಿ ಬರುತ್ತಿದ್ದವು!.... ರಥ ನಿಂತಿತು!.... ಅರ್ಜುನ ಕೆಳಗಿಳಿದ!

"ಅರ್ಜುನ! ಬಂದೆಯಾ?.... ಎಲ್ಲ ಮುಗಿಯಿತು! ಕೃಷ್ಣನೆಂಬ ದ್ಯುಮಣಿ ಅಸ್ತಂಗತವಾಯಿತಪ್ಪ! ನೀನು ನಿರ್ಭಾಗ್ಯ!" ಎನ್ನುತ್ತಾ ಗರ್ಗರು ಅತ್ತು, ಪುಷ್ಪರಾಶಿಯನ್ನು ತೋರಿಸಿದರು!

* * * * *

# ೧೫. ಅತ್ತ, ಹಸ್ತಿನಾವತಿಯಲ್ಲಿ!

ಯಾದವರು ದೂರ್ವಾಸನ ಶಾಪಗ್ರಸ್ತರಾದ ದಿನವೇ ಮೊದಲ್ಗೊಂಡು ಹಸ್ತಿನಾವತಿಯಲ್ಲಿಯೂ ಮಹೋತ್ಪಾತಗಳು ಕಾಣಿಸಿಕೊಳ್ಳಲಾರಂಭಿಸಿದ್ದವು! ದ್ವಾರಕೆಯಿಂದ ಶ್ರೀಕೃಷ್ಣನ ಕುಶಲವಾರ್ತೆ ತಿಳಿದು ಬಹಳ ತಿಂಗಳುಗಳೂ ಆಗಿಹೋಗಿದ್ದವು! ಧರ್ಮಜನ ರಾಜ್ಯಭಾರ ಕ್ರಮದಲ್ಲಿ ಯಾವ ಲೋಪವೂ ಇರಲಿಲ್ಲವಾದರೂ, ಒಂದು ದಿನ ದಿಢೀರನೆ ಅವನ ಆಳುವ ಉತ್ಸಾಹ ಕುಸಿಯಿತು!

"ನನಗೇನಾಗಿದೆ?" ಎಂದು ಯುಧಿಷ್ಠಿರ ಪ್ರಶ್ನಿಸಿಕೊಂಡ! "ಎಂದಿನಂತೆ ಎಲ್ಲ ನಡೆಯುತ್ತಿದೆ! ನನ್ನ ದೈನಂದಿನ ಅನುಷ್ಠಾನಗಳಲ್ಲಾಗಲಿ, ರಾಜ್ಯಭಾರ ಕ್ರಮದಲ್ಲಾಗಲಿ, ನನ್ನ ತಮ್ಮಂದಿರ ನಡವಳಿಕೆಗಳಲ್ಲಾಗಲಿ, ಮಂತ್ರಿಪುರೋಹಿತರ ಶೀಲಚಾರಿತ್ರ್ಯಗಳಲ್ಲಾಗಲಿ, ಏನೂ ಕುಂದುಕೊರತೆಯಿಲ್ಲವಲ್ಲ!" ಎಂದು ಚಿಂತಿಸಿದ.

ಗೂಢಚಾರರನ್ನು ಕರೆದು "ನನ್ನ ಬಗೆಗೆ, ತಮ್ಮಂದಿರ ಬಗೆಗೆ, ರಾಣೀವಾಸದವರ ಬಗೆಗೆ, ಗುರುಜನರ ಬಗೆಗೆ ಜನ ಏನು ಮಾತಾಡುತ್ತಿದ್ದಾರೆ?... ಜನಜೀವನದಲ್ಲಿ ಏನಾದರೂ ವಿಶೇಷ ಬದಲಾವಣೆ ಇದೆಯೇ? ಅಲ್ಲಲ್ಲಿ ಕಂಡು ಕೇಳಿಬರುವ ವಿಶೇಷ ಸಮಾಚಾರಗಳೇನು? ಮರೆಮಾಚದೆ ಎಲ್ಲ ಹೇಳಿ" ಎನ್ನುತ್ತಾ, ಸಮಾಚಾರ ಕೇಳುವ ಮೊದಲೇ, ಬೆಲೆಬಾಳುವ ಮುತ್ತಿನ ಹಾರಗಳನ್ನು ಚಾರರಿಗಿತ್ತ!

ಭೂಷಣಗಳನ್ನು ಪಡೆದುಕೊಂಡ ಚಾರರು ಒಬ್ಬರ ಮುಖವನ್ನೊಬ್ಬರು ನೋಡಲಾರಂಭಿಸಿದರು! ಯಾರೂ ಬಾಯಿಬಿಡಲಿಲ್ಲ! ಅವರಿಗೆ ಮೈ ಬೆವರಲಾರಂಭಿಸಿತ್ತು!...

ಧರ್ಮಜ ಆ ಗೂಢಚಾರರಲ್ಲಿ ಹಿರಿಯನಾದ ಭದ್ರಸೇನನೆಂಬುವನ ಮುಖನೋಡಿ ಗಂಭೀರವಾಗಿ ಕೇಳಿದ!

"ಏನಿರಯ್ಯಾ!... ಹೀಗೆ ಮುಖ ಮುಖ ನೋಡುತ್ತಿದ್ದರೇನರ್ಥ? ಎಂಥ ಘೋರವಾರ್ತೆಯಾದರೂ ಚಿಂತೆಯಿಲ್ಲ! ಅರುಹಬೇಕಾದ್ದು ನಿಮ್ಮ ಕರ್ತವ್ಯ! ಜೀವನದ ಭಯ ಬೇಡ! ಇದೋ ಅಭಯಕೊಟ್ಟಿದ್ದೇನೆ!... ಧೈರ್ಯವಾಗಿ ಹೇಳಿ!" ಎಂದು ಸಮಾಶ್ವಾಸನೆ ನೀಡಿದ.

ಭದ್ರಸೇನ ದೀರ್ಘವಾಗಿ ಸಾಷ್ಟಾಂಗ ಹಾಕಿ, ಧರ್ಮಪುತ್ರನ ಪಾದತಲದಲ್ಲಿ ಕುಳಿತು, ಬಿನ್ನೈಸಲಾರಂಭಿಸಿದ!... ಆ ವೇಳೆಗೆ ಸಭೆಗೆ ಉಳಿದ ಪಾಂಡವರ ಆಗಮನವೂ ಆಯಿತು!... ಧರ್ಮಜ "ಒಳ್ಳೆಯದೇ ಆಯಿತು! ತಮ್ಮಂದಿರಿಗೆ ತಿಳಿಯಬಾರದ ಗುಟ್ಟೇನಲ್ಲ, ಇದು! ಮಹಾರಾಣಿಯನ್ನೂ ಇತ್ತ ಬೇಗ ಬರುವಂತೆ ನಾನು ಹೇಳಿಕಳುಹಿದ್ದಾಗಿ ಹೇಳಿ ಬರಮಾಡು" ಎಂದು ಪ್ರತೀಹಾರಿಗೆ ಆಣತಿಯಿತ್ತ! ಕೊಂಚ ಹೊತ್ತಿನಲ್ಲೇ ಪಾಂಚಾಲಿಯೂ ಬಂದು ಸೇರಿದಳು.

ಪ್ರಾತಃಕಾಲಕ್ಕೆ ಪೂರ್ವದಲ್ಲಿ, ಉಷೋದಯಕ್ಕೂ ಪೂರ್ವದಲ್ಲಿ ಸೇರಿದ್ದ ಸಭೆ, ಅದು! ವಾಡಿಕೆಯಂತೆ ಪಂಚಪಾಂಡವರೂ ಸಕಾಲಕ್ಕೆ ಎದ್ದು ಆ ಮಂತ್ರಾಲೋಚನಾಗೃಹದಲ್ಲಿ ಸೇರುತ್ತಿದ್ದು, ಗೂಢಚಾರರು ದಿನದಿನದ ಸಮಾಚಾರಗಳನ್ನು ಒಪ್ಪಿಸುವ ಕಾಲ ಅದಾಗಿತ್ತು! ಅಂದು ದ್ರೌಪದೀ ದೇವಿಯ ಸಮಾಗಮ ಮಾತ್ರ ಆ ಸಭೆಯ ವಿಶೇಷವಾಗಿತ್ತು!

ಪಾಂಡವರಲ್ಲಿ ಆ ವರ್ಷ ದ್ರೌಪದಿಯೊಡನೆ ಬಾಳುತ್ತಿದ್ದವನು ಅರ್ಜುನ! ಅಂದು ಆ ಸಭೆಗೆ ಕೊನೆಯಲ್ಲಿ ಬಂದವನೂ ಅರ್ಜುನ!... ದ್ರೌಪದಿ ಅವನನ್ನು ಹಿಂಬಾಲಿಸಿದ್ದಳು!...

ಅದೇಕೋ ಆ ಬೆಳಿಗ್ಗೆ ಸಕಾಲಕ್ಕೆ ಎಚ್ಚರವಾಗಿರಲಿಲ್ಲ!... ಅವನು ಗುಡಾಕೇಶ, (ಇಂದ್ರಿಯಗಳನ್ನೂ, ನಿದ್ರೆಯನ್ನೂ, ಗೆದ್ದವನು) ಎಂಬ ಬಿರುದನ್ನು ಅನ್ವರ್ಥವಾಗಿ ಹೊಂದಿದ್ದ

ಮಹಾಜಿತೇಂದ್ರಿಯನೆಂದು ಆ ವರೆಗೆ ಪ್ರಸಿದ್ಧಿ ಪಡೆದಿದ್ದವನು!... ಉಳಿದ ತಮ್ಮಂದಿರು, (ಭೀಮ ಮೊದಲು) ಬಂದು ಸೇರಿದ್ದರು!... ಧರ್ಮಜ ಬಹುವಿಸ್ಮಿತನಾಗಿ ಅರ್ಜುನನನ್ನು ದುರುಗುಟ್ಟಿ ಕೊಂಡು ನೋಡಿದ!... ಎಂದೂ ಇಲ್ಲದಿದ್ದ ಒಂದು ಅವಲಕ್ಷಣ ಅಂದು ಅವನಲ್ಲಿ ಕಾಣ ಬರುತ್ತಿತ್ತು!... ರಾತ್ರಿ ಶಯನಗೃಹದಲ್ಲಿ ನಿದ್ರಿಸುವ ಮೊದಲು ಅರ್ಜುನ, ತಾಂಬೂಲವನ್ನು ಮೆಲ್ಲುವ ಪದ್ಧತಿ ಇದ್ದಿತಷ್ಟೆ!... ತಡವಾಗಿ ಎದ್ದವನೇ, ಬಾಯನ್ನು ತೊಳೆಯದೆ, ಹಾಗೆಯೇ ಬಂದಿದ್ದ! ಎರಡೂ ಕಡೆಯ ಕಟವಾಯಿಗಳಲ್ಲಿ ತಾಂಬೂಲರಸ ಹರಿದು, ಹೆಪ್ಪುಗಟ್ಟಿ, ಕೆಂಪು ಕೋರೆಯ ಹಲ್ಲುಗಳಂತೆ ಕಾಣುತ್ತಾ, ಅರ್ಜುನ ಅವನ್ನು ಒರೆಸಿಕೊಳ್ಳಲೂ ಮರೆತಿದ್ದ!

ಧರ್ಮಜ ಚಿಂತಿಸಿ, ಅವಾಕ್ಕಾದ! "ಕಲಿಪುರುಷ ನನ್ನ ಆವರಣವನ್ನು ಹೊಕ್ಕನೆಂದು ಕಾಣುತ್ತದೆ!... ಇನ್ನೇನು ಗತಿ?.... ಶ್ರೀಕೃಷ್ಣನ ಅಪ್ಪಣೆ ಪಡೆದು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವ ಕಾಲ ಬಂದಿತು!!... ಅದಾಗುವಷ್ಟರಲ್ಲಿ ಬೇರೇನು ಅನರ್ಥಕಾದಿದೆಯೋ!" ಎಂದುಕೊಳ್ಳುತ್ತ, ಮತ್ತೆ ಅರ್ಜುನನ ಮುಖವನ್ನು ನೋಡಿ, ಏನೋ ರಾಜಾಜ್ಞೆ ಇದೆಯೆಂಬಂತೆ ಸೂಚಿಸಿದ.

ಆ ಮುಖ ಮುದ್ರೆಯಿಂದಲೇ, ತನ್ನಲ್ಲಿ ಏನೋ ದೋಷವಿರಬೇಕೆಂದು ಭಾವಿಸಿದ ಅರ್ಜುನ ತಡಮಾಡದೇ ಮೇಲೆದ್ದು ವಂದಿಸಿ ನಿರ್ಗಮಿಸಿದ! ಪಾಂಚಾಲಿಯೂ ಧರ್ಮಜನ ಮುಖ ನೋಡಿ ಅರ್ಜುನನ ಮುಖವನ್ನೂ ಗಮನಿಸಿ, ಭಯಪಟ್ಟು "ಅಚಾತುರ್ಯವಾಯಿತು!" ಎಂದಂದೆ, ಅರ್ಜುನನನ್ನು ಹಿಂಬಾಲಿಸಿದಳು!... ಪಾಂಚಾಲಿ ತನ್ನನ್ನನುಸರಿಸಿದ್ದನ್ನು ನೋಡಿ, ಅರ್ಜುನ ಹಿಂದಿರುಗಿದ!! ಪಾಂಚಾಲಿ ಅವನ ಕಟವಾಯಿಗಳನ್ನು ಗಮನಿಸಿ, "ಅಯ್ಯೋ!" ಎಂದುಕೊಂಡವಳೇ, ಅರ್ಜುನನನ್ನು ಬೇಗ, ಸಮೀಪದ ಅಲಂಕಾರಗೃಹಕ್ಕೆ ಕರೆದೊಯ್ದು, ಕಂಚಿನ ಉತ್ತಮ ಕನ್ನಡಿಯನ್ನು ತರಿಸಿ ಅರ್ಜುನನ ಮುಖಕ್ಕೆ ಹಿಡಿದಳು!

ಅರ್ಜುನನಿಗೆ ತಡೆಯಲಾರದಷ್ಟು ನಗುಬಂದಿತು!.. "ಏನು ಮರೆವು! ಎಷ್ಟು ವಿಕಟವಾಗಿ ಕಾಣುತ್ತೇನ!!... ಛೀ!... ಏಕೆ ಹೀಗಾಯಿತು?" ಎಂದವನೇ ಬಂಗಾರದ ತಂಬಿಗೆಯಲ್ಲಿ ಬಿಸಿ ನೀರನ್ನು ತರಿಸಿ ಅಲ್ಲೇ ಚೆನ್ನಾಗಿ ಬಾಯಿತೊಳೆದು, ಮುಖವನ್ನೂ ತೊಳೆದು. ಮತ್ತೆ ತಿಲಕವನ್ನಿಟ್ಟುಕೊಂಡು, ಸಭೆಯತ್ತ ಹೊರಟ!

ಪಾಂಚಾಲಿ, ಮೆಲ್ಲನೆ ಅವನನ್ನು ಸಮೀಪಿಸಿ, ತೋಳು ಹಿಡಿದು, ಮಾತಾಡಿಸುತ್ತಾಳೆ.

ಪಾಂಚಾಲಿ: "ಪ್ರಭು! ಇದು ಮರೆವಿನ ವಿಷಯ ಮಾತ್ರವಲ್ಲ!.... ಕೇವಲ ನಗೆಯಾಟದ ಪ್ರಸಂಗವೂ ಅಲ್ಲ! ಮೂರೆಗಳ ಕ್ರೂರದೃಷ್ಟಿ ಇಂದು ನಿಮ್ಮ ಮೇಲೆ ಬಿದ್ದ ರೀತಿ ಭಯಾನಕವಾಗಿತ್ತು!... ಏಕೆ ಹೀಗಾಯಿತೆಂದು ಗಂಭೀರವಾಗಿ ಚಿಂತಿಸಬೇಕಾದ ಕಾಲ ಇದು."

ಅರ್ಜುನ: "ಪ್ರಿಯೆ!... ಇದು ಈ ಮುಂಚೆ ಹೀಗೆಂದೂ ಆಗಿರಲಿಲ್ಲವೆಂಬುದು ನಿಜ!... ಆದರೆ ಸಾಮಾನ್ಯ ಬುದ್ಧಿಯಿಂದ ಕೊಂಚ ಯೋಚಿಸು!... ಎಲೆಅಡಿಕೆ ಮೆಲ್ಲುವವನಿಗೆ, ತಾಂಬೂಲರಸ, ಜೊಲ್ಲಿನೊಡನೆ ಕಟವಾಯಿಯಲ್ಲಿ ಪ್ರವಹಿಸುವುದು ಸಹಜ! ಬೇರೆ ಯಾರೋ ಎಲೆಅಡಿಕೆ ಜಗಿದು, ಅದು ನನ್ನ ಕಟವಾಯಿಯಲ್ಲಿ ಹರಿದಿದ್ದರಲ್ಲವೆ, ಆಶ್ಚರ್ಯ!!.... ಬಾಯಿ ತೊಳೆಯಲು ಮರೆತೆ, ಅಷ್ಟೆ! ವಯಸ್ಸಾಗುತ್ತಾ ಮರೆವು ಅನಿವಾರ್ಯ! ಅಣ್ಣಂದಿರ ಸಿಟ್ಟೇಕೆ? ತಪ್ಪಾಯಿತೆಂದು, ಗೂಢಚಾರರು ಹೊರಟೊಡನೆ ಒಪ್ಪಿ ನಮಸ್ಕರಿಸಿಬಿಡುತ್ತೇನೆ! ಗಂಭೀರ ಚಿಂತನೆಗೆ ಏನಿದೆ?"

ಪಾಂಚಾಲಿ: "(ಭಯವಿಸ್ಮಯಮಿಶ್ರಿತಧ್ವನಿಯಲ್ಲಿ) ಹಾಗಲ್ಲ ಪ್ರಭು!... ನಿಯಮದಂತೆ ನಡೆಯುವ ಜೀವನ ರೀತಿಯಲ್ಲಿ... ಧರ್ಮಪುತ್ರರ ಆವಾಸದಲ್ಲಿ!... ಸಣ್ಣದೇ ಆಗಲಿ, ಲೋಪ ಹೇಗೆ ಬಂದಿತು?... ಉಂಡಮೇಲೆ, ತಾಂಬೂಲಚರ್ವಣ, ಶಾಸ್ತ್ರೀಯ ನಿಯಮ! ... ಅದಾದ ಒಡನೆಯೇ ಬಾಯಿತೊಳೆದೇ ಮಲಗಬೇಕಾದ್ದೂ ಶಾಸ್ತ್ರೀಯ ನಿಯಮವೇ!... ನೀವು ಮರೆತಿರಿ, ಸರಿ!... ನಾನೇಕೆ ನೆನಪಿಸಲಿಲ್ಲ?... ನನ್ನ ಬುದ್ಧಿ ಎಲ್ಲಿ ಹೋಯಿತು?... ಇಬ್ಬರ ಏಕಕಾಲದ ಮರೆವೆಂದರೆ ಭಯವಾಗುವುದಿಲ್ಲವೆ?...

ಸ್ವಲ್ಪ ತಡೆಯಿರಿ!... ತಾಂಬೂಲ ಹಾಕಿಕೊಂಡೊಡನೆಯೇ ಏನೇನಾಯಿತು?... ಕ್ರಮವಾಗಿ ನೆನಪಿಸಿಕೊಳ್ಳಿ, ನಾನೂ ಯತ್ನಿಸುತ್ತೇನೆ...."

ಎನ್ನುತ್ತಾ ದ್ರೌಪದಿ ಚಿಂತಾಕ್ರಾಂತಳಾದಳು!... ಕ್ರಮೇಣ ಮುಖ ವ್ಯಗ್ರವಾಗಿ, ನಾಚಿ, ತಲೆತಗ್ಗಿಸಿ, ಕಂಗಳಲ್ಲಿ ಅಶ್ರುಮಿಡಿಯುತ್ತಾ ನಿಂತಳು!!... ಅರ್ಜುನನೂ ಚಿಂತಿಸಿ, ನಡೆದುದನ್ನು ನೆನೆಸಿ ಲಜ್ಜಿಸಿದ!.... ಎಲೆ ಅಡಿಕೆ ಹಾಕಿಕೊಂಡೊಡನೆ, ಚಿಂತನೆಗೆ ಅವಕಾಶವೇ ಕೊಡದೆ, ದ್ರೌಪದಿಯನ್ನು ತಬ್ಬಿಕೊಂಡು ಶಯನಾಗಾರಕ್ಕೆ ಬರಸೆಳೆದು ಕರೆದೊಯ್ದು, ಸತಿಪತಿಗಳು ಹಾಸಿಗೆಯಲ್ಲಿ ಉರುಳಾಡುವಂತೆ, ಅಂದು ಅರ್ಜುನನನ್ನು ವಿಚಿತ್ರ ಕಾಮಶಕ್ತಿಯೊಂದು ವಶಪಡಿಸಿಕೊಂಡಿತ್ತು!... ಜಿತೇಂದ್ರಿಯನಿಗೆ, ಗುಡಾಕೇಶನಿಗೆ ಅದೂ ಈ ಇಳಿವಯಸ್ಸಿನಲ್ಲಿ, ಅದೂ ಸಂತಾನಾರ್ಥವಾಗಿ ಅಲ್ಲದೆ, ಅದರಿತ್ತೆಂದರೆ ಏನರ್ಥ?... ಮೊಮ್ಮಗ ಪ್ರಾಪ್ತ ವಯಸ್ಕನಾಗಿ, ರಾಜ್ಯಭಾರ ವಹಿಸಿಕೊಳ್ಳುವ ವಯಸ್ಸಿನಲ್ಲಿರುವಾಗ, ಅವನಿಗೇ ಮಗ ಹುಟ್ಟುವ ವಯಸ್ಸಾಗಿರುವಾಗ, ಅರ್ಜುನನಿಗೆ!... ಅವನಿಗೆ ಹೋಗಲಿ!... ಅವನ ಜೊತೆಯಲ್ಲಿ ಸಹಕರಿಸಿದ ದ್ರೌಪದೀ ದೇವಿಗೆ ಸಹ!!... ಕಾಮದೇವ ಹಾಗೆ ಆಡರಿಕೊಳ್ಳುವುದೇ!... ಛೇ!... ಎಂಥ ಮಾನಗೇಡಿ ಅವಕಾಶ!!

ದ್ರೌಪದಿ ತನ್ನ ಸೀರೆ ನೋಡಿಕೊಳ್ಳುತ್ತಿದ್ದಳು!... ಅರ್ಜುನನೂ ಉಟ್ಟಿದ್ದ ಪಂಚೆಯನ್ನು ನೋಡಿಕೊಂಡು ಚಕಿತನಾದ!... ಇಬ್ಬರ ಕಂಗಳೂ ದೃಷ್ಟಿಯಲ್ಲಿ ಕೂಡಿದವು!!!

"ದೇವಿ!... ಅಯ್ಯೋ! ಕೆಟ್ಟೆ!!" ಎಂದು ಅರ್ಜುನ ಕೂಗಿದ!

"ಸ್ವಾಮೀ!... ಕಲಿಪುರುಷ, ನಮ್ಮ ಅರಮನೆಯನ್ನು ಹೊಕ್ಕ!!... ಏನು ಗತಿ?" ಎಂದು ಪಾಂಚಾಲಿಯೂ ಉದ್ಗರಿಸಿ, ಉದ್ವೇಗದಿಂದ ಇಬ್ಬರೂ ಸ್ನಾನಗೃಹದತ್ತ ಧಾವಿಸಿದರು!...

* * * * *

ಅತ್ತ ಧರ್ಮಜನ ಗೂಢಚಾರರೊಡನೆ ಸಮಾಲೋಚನಾ ಸಭೆ ಮುಂದುವರೆದಿತ್ತು!... ಭದ್ರಸೇನ ಹೇಳುತ್ತಿದ್ದ! "ಪ್ರಭು! ಜೂಜಾಡುವುದು ಜೀವನದ ದಿನನಿತ್ಯದ ರೀತಿಯೇ ಆಗಿಹೋಗಿದೆ!... ಒಡ್ಡಬಾರದ ಪಣಗಳನ್ನೆಲ್ಲ ಕಿತವರು ಒಡ್ಡುತ್ತಿದ್ದಾರೆ!... ಹೇಗೆ ಹೇಳಲಿ?... ಕುಡಿಯುವುದಂತೂ ಸರಿಯೇ!... ತಮ್ಮ ಹೆಸರನ್ನೂ ಇದರಲ್ಲಿ ಎಳೆತರುತ್ತಿದ್ದಾರೆ... ಹೇಳಲು ತುಂಬ ನೀಚತನ ಎನಿಸುತ್ತದೆ! ಹೇಗೆ ಹೇಳಲಿ, ಪ್ರಭು?"...

ಧರ್ಮಪುತ್ರ ಚಿಂತಿಸಿದ! ಜೂಜು, ಪಾನ, ಮೈಥುನ (ಸ್ತ್ರೀ ಚಾಪಲ್ಯ), ಹಿಂಸೆ, ಇವು ನಾಲ್ಕೂ ಕಲಿಪುರುಷನ ಸ್ಥಿರವಾಸ ಸ್ಥಾನಗಳೆಂದು ಅವನು ನಂಬಿದ್ದ! ಅದರಿಂದ ಬಂದ ಸುಳ್ಳಾಡುವ ಚಟ, ಮದೋನ್ಮತ್ತತೆ, ಕಾಮಕ್ರೀಡಾಸಕ್ತಿ, ದ್ವೇಷಾಸೂಯೆಗಳು, ವೈರಬುದ್ಧಿ ಈ ಐದೂ ಕಲಿಪುರುಷನು ತನ್ನ ಸಾಮ್ರಾಜ್ಯ ಹರಡುವ ಸಾಧನಗಳೆಂಬುದನ್ನು ಅವನು ಚೆನ್ನಾಗಿ ಬಲ್ಲ!..."ಈಗ ಕಾಲ ಕೃತಯುಗವೇನೂ ಅಲ್ಲ;... ತ್ರೇತೆಯೂ ಎಂದೋ ಮುಗಿದು, ದ್ವಾಪರವೂ ಮುಗಿದಿದೆಯೋ, ಮುಗಿಯುತ್ತಿದೆಯೋ?... ಕಲಿ ಬಂದೇ ಬಿಟ್ಟಿತೋ ಹೇಗೆ?.... ಪಂಚಾಂಗದವರ ಲೆಕ್ಕವೇ ತಪ್ಪಾಗಿದೆಯೇನು?... ದ್ವಾಪರ ಸಂಧಿಯಂತೂ ಮುಗಿದಿರಬೇಕು!.... ತಪಸ್ಸು, ಶೌಚ, ದಯಾ, ಸತ್ಯ-ಇವು ನಾಲ್ಕೂ ಧರ್ಮದೇವತೆಯ ನಾಲ್ಕು ಪಾದಗಳು!... ಈ ನಾಲ್ಕರಲ್ಲಿ ಯಾವುದೇ ಇಲ್ಲದೆ ಆ ದೇವತೆ ನಿಲ್ಲುವುದೆಂತು?... ತಾನು ಧರ್ಮಪುತ್ರನೆನಿಸಿದ್ದರೂ ಕಲಿಯಲ್ಲೂ ಕೃತವನ್ನು ಪ್ರವರ್ತಿಸಬಲ್ಲ ಶಕ್ತಿಯುಂಟೇ?... ತಾನೇನು ಯುಗಪುರುಷನೇ?... ಶಕಪುರುಷನೇ?... ತನ್ನ ಹೆಸರಿನಲ್ಲಿ ಯುಧಿಷ್ಠಿರ ಶಕೆ ಏರ್ಪಟ್ಟಿದ್ದು ಬರೀ ಒಣಸಂಪ್ರದಾಯವಾಯಿತೇ?... ಇಳಿಮುಖದ ಯುಗಗಳ ಪರಿವರ್ತನೆಯಲ್ಲೂ ಸತ್ಯಾದಿಗಳನ್ನು ರಕ್ಷಿಸುವುದು ಶಕ್ಯವೇ?... ಇಲ್ಲವಾದರೆ ತಾನು ಈ ಭೂಲೋಕದಲ್ಲಿ ಇನ್ನೇನು ಮಾಡಲು ಉಳಿದಿದ್ದಾನೆ?... ಹಸ್ತಿನಾವತಿಯ ಸಿಂಹಾಸನಕ್ಕೆ ತಾನು ಅಂಟಿಕೊಂಡಿರುವುದು ಅಲಂಕಾರಕ್ಕಾಗಿಯೇ?... ಆಗ ದುರ್ಯೋಧನನಿಗೂ ತನಗೂ ಏನು ವ್ಯತ್ಯಾಸವಾಯಿತು?...

ಜೂಜನ್ನೂ, ಕುಟಿಲತನವನ್ನೂ, ಹಿಂಸಾ ವಿಚಾರವನ್ನೂ ಬೆಳೆಸಿದವನು ದುರ್ಯೋಧನ!... ತಾನಲ್ಲ! ಎರಡು ದಶಕಗಳಿಗೂ ಮಿಕ್ಕ ಆ ದುರ್ಯೋಧನನ ದುರಾಡಳಿತದ ಎಲ್ಲ ದುರ್ಮುಖಗಳನ್ನೂ ತಾನು ಈ ಮುವ್ವತ್ತಾರು ಸಂವತ್ಸರಗಳಲ್ಲಿ ಮೂಲೋತ್ಪಾಟನ ಮಾಡಲಾಗಿದೆಯೇ?... ಅವನಲ್ಲಿ ಸ್ತ್ರೀ ಚಪಲ ಇರಲಿಲ್ಲವೇ?.... ತನ್ನ ಧರ್ಮಪತ್ನಿ ಪಾಂಚಾಲಿಯನ್ನು ಆ ಜೂಜಿನಲ್ಲಿ, ಸುಮಾರು ಐವತ್ತು ವರ್ಷಗಳ ಹಿಂದೆ, ಪಣವನ್ನಾಗಿ ಒಡ್ಡುವಂತೆ ಪ್ರೇರಿಸಿದ ಹಿನ್ನೆಲೆ ಏನಿರಬೇಕು?... ಸಭೆಯಲ್ಲಿ ಅವಳಿಗೆ ಏನೋ ತೋರಿಸಿದನಲ್ಲ!..."

ಧರ್ಮಜ ಆ ಇಡೀ ಪ್ರಸಂಗವನ್ನು ನೆನೆದ!... ಮೈ ಬೆವರಿತು!!... ಮನಸ್ಸು 'ಝಿಲ್' ಎಂದಿತು!!... ಗೂಢಚಾರನ ಅಂದಿನ ಮಾತಿನಲ್ಲಿ ವಿಶೇಷಾರ್ಥವೇನೋ ಹೊಳೆಯಿತು!... ಮತ್ತೆ ಅವನನ್ನು ಸಂಬೋಧಿಸಿ ಕೇಳುತ್ತಾನೆ!

ಧರ್ಮಜ: "ಅಯ್ಯಾ! ಭದ್ರಸೇನ!... ಒಡ್ಡಬಾರದ ಪಣ ಎಂದೆಯಲ್ಲ!... ವಿಶೇಷವೇನು?... ನನ್ನ ಹೆಸರನ್ನು ಅಲ್ಲಿ ಎಳೆತಂದ ರೀತಿ ಏನು?... ನಿರ್ಭಯವಾಗಿ ಹೇಳು!..."

ಭದ್ರಸೇನ: "ಪ್ರಭು!... ತಾವು ಹಿಂದೆ ಒಡ್ಡಿದ್ದ, ಒಡ್ಡಬಾರದ ಪಣವನ್ನೇ ಒಡ್ಡುತ್ತಿದ್ದಾರೆ!... ಅವರಿಂದಲೇ ತಮ್ಮ ಹೆಸರನ್ನು ಎಳೆದು ತರುತ್ತಿದ್ದಾರೆ!... ಹೇಗೆ ಹೇಳಲಿ!" ಭದ್ರಸೇನ ಮುಖಮುಚ್ಚಿ ಅತ್ತ!

ಚಿತ್ರಸೇನನೆಂಬ ಇನ್ನೊಬ್ಬ ಚಾರ ಆ ಮಾತನ್ನು ಹೀಗೆ ಮುಂದುವರೆಸುತ್ತಾನೆ...

ಚಿತ್ರಸೇನ: "ಪ್ರಭು! ಅಧಿಕ ಪ್ರಸಂಗವೆನಿಸಿದರೆ ಮನ್ನಿಸಬೇಕು!... 'ಯಕ್ಷರಾತ್ರಿ' ಎಂಬ ವೈದಿಕ ಕಾಲದ ಹಬ್ಬದ ಬಗೆಗೆ ತಾವು ಕೇಳಿರಬೇಕು!... ದೀಪಾವಳಿಯ ಮೊದಲದಿನ, ಮನೆಯಲ್ಲಿ ತುಂಬಿದ ಅತಿಥಿಗಳು, ಆ ಅಪರೂಪ ಸೇರುವಿಕೆಯನ್ನು, ಹಾಡು, ನೃತ್ಯ, ವಾದ್ಯ, ಆಟಪಾಠಗಳಿಂದ ಕಳೆದು ನಲಿಯುತ್ತಾ ಮರುದಿನ ದೀಪವಸ್ತ್ರದ ಹಬ್ಬ ಆಚರಿಸುತ್ತಿದ್ದರಷ್ಟೆ!... ಭಗವಾನ್ ಕೃಷ್ಣ ಒಡೆಯರು ನರಕಾಸುರನನ್ನು ಕೊಂದ ದಿನದಿಂದ ಅದು ನೇಮನಿಷ್ಠೆಯ ರಾತ್ರಿಯಾಗಿ ನರಕ ಚತುರ್ದಶಿ ಎಂಬ ಹೆಸರಿನಿಂದ ಆಚರಿಸಲ್ಪಡುತ್ತಿದ್ದು, ಆ ಹಾಡು ದನಿ ನೃತ್ಯಾದಿಗಳು ಬದಿಗಿರಿಸಲ್ಪಡುವ ಲಕ್ಷಣಗಳು ಕಾಣತೊಡಗಿದ್ದವು! ದುರ್ಯೋಧನ ಮಹಾರಾಜರು ಆ 'ಯಕ್ಷರಾತ್ರಿಯ' ಹಳೆಯ ಆಚರಣೆಯ ರೀತಿಯನ್ನು ಮತ್ತೆ ಪ್ರಚಾರಕ್ಕೆ ತಂದರು!... ತಾವು, ಪ್ರಭು!... ತಪ್ಪೆಣಿಸಬಾರದು!... ಮಹಾಪ್ರಭು!... ತಾವು ಕಾಡಲ್ಲಿ ಹುಟ್ಟಿ ಬೆಳೆದವರು!... ನೇರವಾಗಿ ದಿಢೀರನೆ ಹಸ್ತಿನಾವತಿಯಲ್ಲಿ ಕಾಣಿಸಿ ಕೊಂಡಿರಿ! ಮತ್ತೆ ಕಾಡು ಸೇರಿದಿರಿ. ಮತ್ತೆ ರಾಜಸೂಯವಾಗಿ, ಕೊಂಚವೇ ದಿನ ಚಕ್ರವರ್ತಿಯಾಗಿದ್ದು ಮತ್ತೆ ಕಾಡು ಸೇರಿದಿರಿ!... ಆಗೆಲ್ಲ ಏನು ನಡೆಯುತ್ತಿತ್ತು, ಹಸ್ತಿನಾವತಿಯ ಗಣ್ಯರ ಸಭೆಗಳಲ್ಲಿ, ಮನೆಗಳಲ್ಲಿ, ಗೋಷ್ಠಿಗಳಲ್ಲಿ!... ತಾವೂ ಕೇಳಲಿಲ್ಲ, ನಾವೂ ಹೇಳಲಿಲ್ಲ! ತಮ್ಮ ಆಳ್ವಿಕೆಯಲ್ಲಿ ಭಯದಿಂದ ಈವರೆಗೆ ನಿಂತುಹೋಗಿದ್ದ ಆ ಹಳೆಯ ದುರಾಚಾರಗಳೆಲ್ಲ ಮತ್ತೆ ತಲೆ ಎತ್ತಿವೆ!... ಹೇಗೆ ಹೇಳಲಿ?..."

ಧರ್ಮಜ: "(ಏನನ್ನೋ ನೆನೆಸಿ ಮನಸ್ಸು ಕುಸಿದರೂ, ಧೈರ್ಯ ತಂದುಕೊಂಡು ಕೇಳುತ್ತಾ) ಅದೇನು ಯಕ್ಷರಾತ್ರಿಯ ದುರಾಚಾರ ಮತ್ತೆ ಪ್ರಚಾರದಲ್ಲಿರುವುದು, ಹೇಳಬಾರದೇ?... ದೊರೆಗೆ ತಿಳಿಯದೇ ನಿಗ್ರಹಿಸುವುದೆಂತು?..."

ಶೂರಸೇನನೆಂಬ ಇನ್ನೊಬ್ಬ ಚಾರ ಈಗ ಮುಂದೆ ಬಂದು ಹೀಗೆನ್ನುತ್ತಾನೆ!

ಶೂರಸೇನ: "ಮಹಾಪ್ರಭು! ಚಿತ್ತೈಸಬೇಕು!... ಯಕ್ಷರಾತ್ರಿ ಎಂಬುದು ಈಗ ಕೇವಲ ದೀಪಾವಳಿಯ ಮೊದಲ ದಿನವಲ್ಲ! ಹಳೆಯ ಅರ್ಥಪೂರ್ಣ ಆಚರಣೆಗಳೂ ಈಗಿಲ್ಲ! ದಿನದಿನದ ರಾತ್ರಿಗಳಲ್ಲಿ ಧನಿಕರ, ಪ್ರತಿಷ್ಠಿತರ, ಅರಮನೆಯ ಅಧಿಕಾರಿಗಳ ಮನೆಗಳಲ್ಲಿ ಗಂಡುಹೆಣ್ಣುಗಳು ಸೇರುತ್ತಾರೆ!... ಉಂಡು ಕುಡಿಯುತ್ತಾರೆ!.... ಆಮೇಲೆ ಜೂಜಾಟ ಆರಂಭವಾಗುತ್ತದೆ!... ಆಡುವ ಪುರುಷರು ತಂತಮ್ಮ ಪತ್ನಿಯರನ್ನು ಪಣವಾಗಿಡುತ್ತಾರೆ!... ಸೋತವನ ಪತ್ನಿಯನ್ನು ಗೆದ್ದವನು,

ಬಹಿರಂಗವಾಗಿ, ಬತ್ತಲೆಯಾಗಿಸಿ, ಅಲ್ಲಿಂದಲ್ಲೇ ಅನುಭವಿಸುತ್ತಾನೆ!!... ಉಳಿದವರು ಸ್ತ್ರೀಪುರುಷರು ಕೇಕೆ ಹಾಕಿ ನಕ್ಕು ಕುಣಿದಾಡುತ್ತಾರೆ!... ಮತ್ತೆ ಅಂಥದೇ ಆಟ ಬೆಳ್ಳಂಬೆಳಗೂ ನಡೆಯುತ್ತದೆ!... ಯಾರಿಗೂ ನಾಚಿಕೆ ಎನಿಸುವುದಿಲ್ಲ!... ತಪ್ಪೆನಿಸುವುದೇ ಇಲ್ಲ!... ಎಲ್ಲರಿಗೂ ಏನಾದರೊಂದು ಸಿಕ್ಕೇ ಸಿಗುತ್ತದೆಯಲ್ಲ ಎಂಬ ಅಶ್ಲೀಲ ತೃಪ್ತಿ!.... ದುರ್ಯೋಧನರಾಯರ ರಾಜ್ಯಭಾರ ರೀತಿ ಜನಪ್ರಿಯವಾದ ಕಾರಣ ಇದೇ!... ತಮಗಾಗಿ ಭಯಪಟ್ಟು ಕೊಂಚ ಕಾಲ ನಿಲ್ಲಿಸಿದ್ದರೋ ಅಥವಾ ತೀರ ಗುಟ್ಟಿನಲ್ಲಿ ನಡೆಸುತ್ತಿದ್ದರೋ!... ಈಗ ಯಾರಿಗೂ ಯಾರೂ ಭಯಪಡುವ ಕಾಲ ಹೋಯಿತು!...”

ಧರ್ಮಜನ ತಲೆ ಗಿರ್ರೆಂದು ತಿರುಗಲಾರಂಭಿಸಿತ್ತು!... ಎಂಥ ಕಾಲ?... ಇದಕ್ಕೆ ದೊರೆ ಏಕೆ ಬೇಕು?... ‘ರಾಜಾ ಕಾಲಸ್ಯ ಕಾರಣಂ’ ಎಂಬುದು ಹುಸಿಯಾಯಿತೇ?... ತಲೆ ಎತ್ತಿ ಮತ್ತೆ ಪ್ರಶ್ನಿಸುತ್ತಾನೆ!

ಧರ್ಮಜ: “ಇಲ್ಲೆಲ್ಲ ನನ್ನ ಹೆಸರನ್ನು ಎಳೆತಂದ ಪ್ರಸಂಗವೇನು? ಹೇಗೆ?”

ಶೂರಸೇನ: “ಪ್ರಭು! ಏಕೋ ಎಲ್ಲವನ್ನು ನಮ್ಮ ಬಾಯಲ್ಲೇ ಹೇಳಿಸುತ್ತಿದ್ದೀರಿ! ನಮ್ಮ ನಾಲಿಗೆ ಹುಳ ಬರುತ್ತದೆ!... ಹೇಗೆ ಹೇಳಲಿ?... ತಾವು ಅಂದೇನು ಮಾಡೋಣವಾಯ್ತು?... ಯೋಚಿಸಿ! ತಮಗಿಷ್ಟವಿತ್ತೋ ಇಲ್ಲವೋ, ತಾವು ಮಹಾರಾಣಿಯವರನ್ನು ಒಡ್ಡುವಂತೆ ಆಯಿತು! ಪ್ರಭು!... ಜನ ಇದನ್ನಾಡುತ್ತಿದ್ದಾರೆ!... ಹಿಂದಿನ ಅರಸರು, ಅವರ ಸ್ನೇಹಿತರ ಪದ್ಧತಿಯಂತೆ, ಅವರು ತಮ್ಮ ರಾಣಿಯರನ್ನು ಅಲ್ಲೇ ಸಭೆಯಲ್ಲೇ ಬಯಸಿದ್ದರು!... ತಮ್ಮ ತಮ್ಮಂದಿರು, ಭೀಮಸೇನ ಒದ್ದಿಯವರು ದುರ್ಯೋಧನರಾಯರ ಆ ‘ಅದ’ನ್ನು - ಸಭೆಯಲ್ಲಿ ರಾಣಿಯರಿಗೆ ತೋರಿಸಿದ್ದನ್ನು-ಗದಾಯುದ್ಧದಲ್ಲಿ ಜಜ್ಜಿ ಕೊಂದರು!.... ತಮಗೇ ಇದೆಲ್ಲ ಗೊತ್ತಿದೆ, ಪ್ರಭು!... ಇದೇ ದಿನದಿನದ ಯಕ್ಷರಾತ್ರಿ!... ರಾತ್ರಿ ಇಡೀ ನಡೆಯುವ ಈ ‘ನೀರು ತುಂಬುವ’ ಹಬ್ಬ!... ಇದನ್ನು ನರಕಾಸುರನ ಸ್ಮರಣೆಗೆ ನಮ್ಮ ಕೃಷ್ಣರಾಯ ದೊರೆಗಳು ಏರ್ಪಡಿಸಿ, ಪುಣ್ಯತೀರ್ಥವಾಗಿಸಲು ಯತ್ನಿಸಿದರು! ನರಕನನ್ನು ನೆನೆಯದೇ ‘ದೀಪ’ ಇಲ್ಲ ಎಂದರು ಅವರು! ನರಕನನ್ನು ನೆನೆದೇ, ನರಕಕ್ಕಿಳಿದೇ ದೀಪವನ್ನು ಆರಿಸುತ್ತಿದ್ದಾರ ಇಂದಿನವರು!... ಅಲ್ಲೊಬ್ಬ ಇಲ್ಲೊಬ್ಬ ಹಿರಿಯರು, ಅವಿವೇಕೀ ಯುವಕರನ್ನು ಗದರಿಸಿದರೆ, ‘ದೊರಗಳೇ ಐವತ್ತು ವರ್ಷಗಳ ಹಿಂದೆ, ಹೆಂಡತಿಯನ್ನೊಡ್ಡಿ ಆಡಲಿಲ್ಲವೇ?... ಭಾನುಮತಿ ಸಿಕ್ಕಿದ್ದರೆ ಬಿಡುತ್ತಿದ್ದರೆ? ದ್ರೌಪದಮ್ಮನವರು ಸಿಕ್ಕಿಬಿದ್ದದ್ದರಿಂದ ಯುದ್ಧ ಮಾಡಿ, ಗೆದ್ದವರನ್ನೆಲ್ಲ ಕೊಂದರು! ಆಟದ ರೀತಿ ಗೊತ್ತಿರದ ಗೊಡ್ಡರು!.. ನಾವು ಸೋತರೆ ನಮ್ಮ ಹೆಂಡಂದಿರನ್ನು ಬಿಟ್ಟು ಕೊಡುವುದಿಲ್ಲವೇ?... ಹೇಗೂ ಅವರಿಗೆ ಐವರು ಇದ್ದೇ ಇದ್ದಾರೆ! ಇನ್ನೊಂದೆರಡಾದರೆ ನಷ್ಟವೇನು?...’ ಎನ್ನುತ್ತಾ, ಕರ್ಣ ಶಕುನಿ ದುಶ್ಶಾಸನ ದುರ್ಯೋಧನರಾಯರುಗಳನ್ನು ಆಟದ ರೀತಿಬಲ್ಲ ಸೊಗಸುಗಾರರೆಂದು ಕೊಂಡಾಡುತ್ತಾ, ತಮ್ಮನ್ನು ಗೊಡ್ಡು ಧರ್ಮದ, ರಸಿಕರಲ್ಲದ, ಜನರ ವಿಲಾಸಸುಖಗಳನ್ನು ಸಹಿಸದ ಕ್ರೂರಿ ಅರಸರು ಎನ್ನುತ್ತಿದ್ದಾರೆ! ಪ್ರಭು! ಇದೆಲ್ಲ ವರ್ಣನೆಗಳೂ ನಮ್ಮ ಕಲ್ಪನೆಯಲ್ಲ! ಇವು ನಮ್ಮ ಶಬ್ದಗಳೂ ಅಲ್ಲ!... ಹೇಳಲು ಅಂಜಿದೆವು... ತಾವು ಅಭಯಕೊಟ್ಟದ್ದರಿಂದ ಹೇಳಿದ್ದೇವೆ... ಮಹಾರಾಜರಾದ ತಾವೇ, ಈ ರಾತ್ರಿ ನಮ್ಮ ಯಾರೊಬ್ಬರೊಡಗೂಡಿಯಾದರೂ ಬಂದು, ಗೂಢಚರ್ಯೆಮಾಡಿ, ಖಾತರಿ ಮಾಡಿಕೊಳ್ಳಬಹುದು!”

* * * * *

ಆ ದಿನವೆಲ್ಲ ಧರ್ಮಜ ಮಂಕು ಬಡಿದು, ಭೂತಾವಿಷ್ಟನಂತೆ ಯಾವ ಕಾರ್ಯವನ್ನೂ ಲಕ್ಷಿಸದೆ ಏಕಾಂತದಲ್ಲಿದ್ದು ಚಿಂತಿಸಿದ. ಅವನ ಮಾನಸದಲ್ಲಿ ಶಕುನಿ-ದುರ್ಯೋಧನರು ಪ್ರತ್ಯಕ್ಷರಾದರು! ದ್ವಾಪರಪುರುಷ, ಕಲಿಪುರುಷರ ನಿಜವೇಷ, ನಿಜಸ್ವರೂಪದಲ್ಲಿದ್ದ ಅವರನ್ನು ಯುಧಿಷ್ಠಿರ, ಮೊದಲು ಗುರುತಿಸಲು ಆಗಲಿಲ್ಲ.

ಕಲಿ: "ಯುಧಿಷ್ಠಿರ, ಕಾಲ ನನ್ನದು! ಕಾಲ ಪ್ರವಾಹದ ವಿರುದ್ಧ ಈಜುವವರ ಗತಿ ಏನಾಗುತ್ತದೆ ಎಂಬುದನು ರುಚಿ ನೋಡಿದೆಯಲ್ಲವೆ?... ಇನ್ನಾದರೂ ಪ್ರವಾಹದೊಳಗೆ ಬಾ!"

ಯುಧಿಷ್ಠಿರ: "ನೀನಾರು! ಹೀಗೆ ನನಗೆ ಅಪ್ಪಣೆ ಮಾಡಲು ನಿನಗೆಷ್ಟು ಧೈರ್ಯ!... ಈ ನಿನ್ನ ಕೂಡ ನಿಂತಿರುವವರಾರು?"

ಕಲಿ: "(ತನ್ನನ್ನು ದುರ್ಯೋಧನ ರೂಪ, ವೇಷಗಳಲ್ಲೂ, ಜೊತೆಯ ದ್ವಾಪರ ಪುರುಷನನ್ನು ಶಕುನಿಯ ವೇಷ, ಭೂಷಣ, ರೂಪಗಳಲ್ಲೂ ತೋರಿಸುತ್ತಾ, ನಗುತ್ತಾನೆ!)... ತಿಳಿಯಲಿಲ್ಲವೇ?.... ನಾನೇ ಕಲಿ ಪುರುಷ; ನನಗೆ ಪ್ರವೃತ್ತಿಯನ್ನುಂಟು ಮಾಡಿಕೊಟ್ಟು, ಅಧಿಕಾರ ಹಸ್ತಾಂತರ ಮಾಡಿದ ಇವನೇ, ನೋಡು, ದ್ವಾಪರ ಪುರುಷ! -ಶಕುನಿ, ನನ್ನ ಮಾವಾ!"

ಯುಧಿಷ್ಠಿರ: "(ಸಿಟ್ಟಿನಿಂದ) ತೊಲಗಿ ಆಚೆಗೆ! ಸತ್ತು ಮುಗಿದುಹೋದ ನಿಮಗಿಲ್ಲಿ ಏನು ಕೆಲಸ! ಇಲ್ಲಿ ಒಳಬಿಟ್ಟವರಾರು?"

ಕಲಿ: "ಹ್ಹಾಂ! ಸಿಟ್ಟಾಗಬೇಡ! ನಾವು ಸತ್ತಿಲ್ಲ!... ರೂಪಾಂತರ ಹೊಂದಿದ್ದೇವ ಮಾತ್ರ! ನಾವು ಒಳಬರುವುದಕ್ಕೂ ಹೊರಹೋಗುವುದಕ್ಕೂ ಯಾರ ಅಪ್ಪಣೆಯೂ ಬೇಡ!... ಹೊರನಡೆಯಬೇಕಾದವನು ಈಗ ನಾನು ಅಲ್ಲ!... ನೀನು!! ಹಾಳು. ಕಾಲದ ವಿರುದ್ಧ ಈಜಿ ಏನು ಸಾಧಿಸಿದೆ?... ಇದರಲ್ಲಿ ಇನ್ನೂ ಸಂಶಯವೇ?.. ನಿನ್ನ ಗೂಢಚಾರ ಹೇಳಿದ್ದೆಲ್ಲ ನಿಜ!... ಪರೀಕ್ಷಿಸಿ ನೋಡುವೆಯಂತೆ!.... ನನ್ನ ಪ್ರವಾಹಕ್ಕೆ ಅಡ್ಡಬರಬೇಡ!... ಹೊರಡು, ಹೊರಡು!..."

ಯುಧಿಷ್ಠಿರ: "ಚಕ್ರವರ್ತಿ ನಾನು! ನನಗೇ ಅಪ್ಪಣೆ ಮಾಡುವೆಯಾ!... ತೊಲಗಿಲ್ಲಿಂದ! ಒಳಗೆ ಹೇಗೆ ಬಂದೆ?"

ಕಲಿ: "ನೀನು 'ರಾಜಾ ಕಾಲಸ್ಯ ಕಾರಣಂ!' ಎಂದೆಯಲ್ಲ! ನೋಡು. ಅದು ನನ್ನ ಸ್ಮರಣೆಯ ಮಂತ್ರ!! ಅದಕ್ಕೇ ಬಂದೆ!... ನಾನು ನಿನ್ನೊಳಗೆ ಹೊಕ್ಕು ಐವತ್ತು ವರ್ಷಗಳೇ ಆದವು!... ಓ!... ಸಿಟ್ಟು ಮಾಡಬೇಡ, ಕೇಳು!.... ನಿನ್ನ ಪತ್ನಿಯನ್ನು ಜೂಜಿನ ಪಣವಾಗಿಡಲು ಪ್ರೇರಿಸಿದವನು ನನ್ನ ಅಣ್ಣ, ಈ ದ್ವಾಪರಪುರುಷ! ನೀನಿಟ್ಟು, ನನಗೆ ಪ್ರವೇಶಕೊಟ್ಟೆ!... ಮುಗಿಯಿತು! ಧರ್ಮಪುತ್ರ ಹೆಂಡತಿಯನ್ನಿಡುವುದು ನನಗೆ ಬೇಕಿತ್ತು! ನಿನ್ನ ವಿರುದ್ಧ ಹೊರಟವನ ಕೈಲೇ ಇಂಥ ನನಗನುಕೂಲ ವ್ಯಾಪರ ಮಾಡಿಸುವುದಕ್ಕಿಂತ ನನಗೆ ಬೇರೆ ಶಿಫಾರಸು ಬೇಕೇ?... ಉಳಿದ ಸಣ್ಣಪುಟ್ಟ ಕುಳಗಳಿಗೆ ನಿನ್ನ ಮಾದರಿ, ಮಾರ್ಗದರ್ಶನ, ನನಗೆ ಬೇಕಿತ್ತು! ಆ ಮಾದರಿಯನ್ನು ನೀನು ಕೊಟ್ಟು ನನಗ ಉಪಕರಿಸಿದೆ!... ನಾನು ಮೊದಲು ಹಿಡಿಯುವುದೇ ಸಮಾಜ ಭೂಷಣರನ್ನು, ಸಮಾಜ ಧುರೀಣರನ್ನು, ಹಿರಿಯರನ್ನು!... ಕುರಿಗಳು ಆಮೇಲೆ ಇವರನ್ನು ತಾವೇ ಹಿಂಬಾಲಿಸುತ್ತಾರೆ!...."

ಯುಧಿಷ್ಠಿರ: "ಇಲ್ಲ ಇಲ್ಲ! ನಾನಿದನ್ನು ನಂಬಲಾರೆ! ನನ್ನ ಸ್ವಂತ ಇಷ್ಟದಂತೆಯೇ ನಾನಾ ಜೂಜಾಡಿದೆ!... ನನ್ನ ಹೆಂಡತಿಯನ್ನಿಟ್ಟೆ!... ನಿನ್ನ ಪ್ರೇರಣೆ ಎಲ್ಲಿ ಬಂತು?... ನನ್ನ ಪ್ರತಿಜ್ಞೆ ಹಾಗಿತ್ತು! ನನ್ನ ಹೊಣೆಗಾರಿಕೆಯಲ್ಲಿ ನಿನ್ನ ಯಶಸ್ಸನ್ನು ಕಾಣಬೇಡ, ಜಂಬ ಕೊಚ್ಚಿಕೊಳ್ಳಬೇಡ!"

ಕಲಿ: "ಹೂಂ! 'ಸ್ವಂತ ಇಷ್ಟ!' ಹೌದೇ!... 'ನಿನ್ನ ಪ್ರತಿಜ್ಞೆ!'... ಥು!... 'ನಿನ್ನ ಹೊಣೆಗಾರಿಕೆ'!... ನೀನೀ ಶಬ್ದಗಳನ್ನಾಡುತ್ತಿರುವುದೇ ಈಗ ನನ್ನ ಪ್ರೇರಣೆಯಿಂದ!... ತಿಳಿಯದೆ ಮಾತಾಡಬೇಡ!... ಅವಿವೇಕಿಯ ಆತ್ಮವಂಚನೆಗೆ ಈ ಮೂರುಶಬ್ದಗಳು ಸಾಲವೆ? ನಿನಗೆ ಪ್ರಮಾಣಿಸಿ ತೋರಿಸುತ್ತೇನೆ ನೋಡು!... ದ್ವಾಪರ ಪುರುಷ, ನಿನ್ನಲ್ಲಿನ್ನೂ ಒಂದು ಪಣ ಉಳಿದಿದೆ ಎಂದಷ್ಟೇ ಸೂಚಿಸಿದ!.... ನಿನ್ನ ಹೆಂಡತಿ ಎಂದ!... ನೀನು ಬೀಳುತ್ತೀಯೆ ಈ ಹೂಡಿಕೆಗೆ, ಎಂದು ಅವನಿಗೆ ಗೊತ್ತು!... ನೀನು ಬಿದ್ದೆ!... ನೋಡು!... ನಿನ್ನ ಹೆಂಡತಿಯನ್ನು ನೀನು ಮೊದಲಿಟ್ಟು ಸೋತು ನಿನ್ನನ್ನು ಸೋತೆಯೋ ಅಥವಾ ನಿನ್ನನ್ನಿಟ್ಟು ಆಮೇಲೆ ಸೋತು, ಆಮೇಲೆ ನಿನ್ನ ಹೆಂಡತಿಯನ್ನೋ?... ಎಂಬ ಗೋಜಲು ಪ್ರಶ್ನೆ ಎದ್ದಿತಲ್ಲ!... ಎಬ್ಬಿಸಿದವರಾರು?... ಪರಿಹಾರವೇನು?... ಹೆಂಡತಿ ಯಾವಾಗಲೂ ಗಂಡನ

ಅತ್ತವ ಅರ್ಧಭಾಗವೇ ಎಂಬ ಪ್ರತಿನ್ಯಾಯವನ್ನು ಭೀಷ್ಮ ಸೂಚಿಸಿ, ನೀನು ನಿನ್ನನ್ನು ಸೋತುಕೊಂಡಾದ ಮೇಲೂ ನಿನ್ನ ಹೆಂಡತಿಯನ್ನಿಡಲು ನಿನ್ನ ಹಕ್ಕುಂಟೆಂಬರ್ಥದಲ್ಲಿ ಮಾತಾಡಿ ನಿನಗೆ ಸಮರ್ಥನೆ ಕೊಟ್ಟನಲ್ಲ!... ಅದನ್ನು ಹೇಳಿಸಿದವರಾರು?... ಅದು ಸರಿಯೇ? ತಪ್ಪೆ?"

ಯುಧಿಷ್ಠಿರ ಬೆವರುತ್ತಾನೆ! ಈಗೇಕೆ ಈ ಚರ್ಚೆ ಎನಿಸಿದರೂ, ಕುತೂಹಲ ಕಾಡಲಾರಂಭಿಸುತ್ತದೆ!...

ಯುಧಿಷ್ಠಿರ: "ಭೀಷ್ಮನೂ ನಿನ್ನ ಗೊಂಬೆಯಾಗಿ ಬಿಟ್ಟನೇ?"

ಕಲಿ: "ಸಂದೇಹವುಂಟೇ?... ಆಗಲೇ ಹೇಳಿದೆನಲ್ಲ! ನಾನು ಮೊದಲು ಹಿಡಿಯುವುದೇ ಪ್ರತಿಷ್ಠಿತರನ್ನು!... ದ್ರೋಣ, ಕರ್ಣ, ಶಲ್ಯ, ಕೃಪ, ಅಶ್ವತ್ಥಾಮ-ಎಲ್ಲರೂ ನನ್ನ ಅಧೀನರೇ ಆದರು! ಅವರೆಲ್ಲ ನನ್ನತ್ತ ಇಲ್ಲದಿದ್ದರೆ, ನಾನು ಹಾಗೆ ಒಗ್ಗೂಡಿಸದಿದ್ದರೆ, ನಿನ್ನ ಹೊಟ್ಟೆಯುರಿಯುತ್ತಿತ್ತೆ? ನಿನ್ನ ಹೆಂಡತಿಯ ಮಾನದ ಅವಮಾನದ ಪ್ರಶ್ನೆ ಏಳುತ್ತಿತ್ತೆ? ಯಾವುದೇ ಪ್ರಮಾಣದಲ್ಲಿ 'ಧರ್ಮ' ಎನ್ನುವವರ, ಅದರ ಸೋಗು ಹಾಕಿದವರ, ನನಗಡ್ಡಿ ಬರುವವರ ಈ ಪ್ರತಿಪಕ್ಷವನ್ನಲ್ಲವೆ ನಾನು ಮೊದಲು ಗುಡಿಸಿ ಹಾಕಬೇಕಾದದ್ದು?... ಆಮೇಲಲ್ಲವೆ ನನ್ನ ಪ್ರವಾಹ ನಿರರ್ಗಳ, ನಿರಂತರ?... ಈಗ ನಿನ್ನ ಸರದಿ!... ಆಗ ನೀನು ನನಗೆ ಬಗ್ಗದ ಮರವಾಗಿರಲು ಆ ಕೃಷ್ಣ ನಿನಗೆ ಆಧಾರ ವಾಗಿದ್ದ!..."

ಯುಧಿಷ್ಠಿರ: "ಈಗಲೂ ಆ ಕೃಷ್ಣನೇ ನನಗ ಆಧಾರವಾಗಿದ್ದಾನಷ್ಟೆ! ಮುಂದೆಯೂ ಅವನೇ!..."

ಕಲಿ: "ಮುಂದೆ" ಎನ್ನುವೆ?... ನೋಡಿದೆಯಾ ನಿನ್ನ ಅಹಂಕಾರ!!... ಇನ್ನೂ ರಾಜ್ಯವಾಳಲು ನಿನಗೆಷ್ಟು ಆಸ!!... ನೀನಲ್ಲವೆ, ದುರ್ಯೋಧನನಾಗಿದ್ದ ನನ್ನನ್ನು ಕೊಂದು 'ರಾಜ್ಯ ಬೇಡ, ಸನ್ಯಾಸಿಯಾಗುತ್ತೇನೆ' ಎಂದವನು? 'ಮುಂದೆ', 'ಮುಂದೆ'! ಇನ್ನೆಲ್ಲಿಯ ಮುಂದ? ಈಗೆಂಬುದೇ ಇಲ್ಲದವನಿಗೆ ಆ ಮುಂದೆ ಉಂಟೆ?"

ಯುಧಿಷ್ಠಿರ: "ಈಗ ಕೃಷ್ಣನೇ ನನಗೆ ಆಧಾರವೆಂದರೆ ನನಗಲ್ಲಿಯ ಅಹಂಕಾರ?... ಇದು ಸುಳ್ಳ?"

ಕಲಿ: "ನನಗೆ ನನ್ನ ನಿಯಮಗಳನ್ನು ಏರ್ಪಡಿಸಿ, ಈ ಯುಗಾಧಿಪತ್ಯವನ್ನು ಕೊಟ್ಟವನೇ ಆ ನಿನ್ನ ಕೃಷ್ಣ! ಅವನು ಸಕಲ ಕಾಲ ಸ್ವರೂಪ! ನಾನು ಅವನಧೀನನಾದ, ಅವರ ಭಾಗವಾದ ಒಂದು ಯುಗದ ಅಧಿಪತಿ, ಯುಗಪುರುಷ!... ಈಗ ಹಳೆಯ ಯುಗ ಮುಗಿಯಿತು!... ದ್ವಾಪರ ಪುರುಷ ಅಧಿಕಾರವನ್ನು ನನಗೆ ಹಸ್ತಾಂತರ ಮಾಡಿ ಆಯ್ತು! ಅವನು ಹಾಳಬಿಟ್ಟ! ಗೆದ್ದವನು ನಾನು!... ತಿಳಿಯಲಿಲ್ಲವೆ?... ನನ್ನ ಅಧಿಪತ್ಯವನ್ನು ಊರ್ಜಿತಮಾಡಿ, ನನ್ನ ಮೇಲಿನ ಅಧಿಕಾರಿ, ಆ ನಿನ್ನ ಕೃಷ್ಣ ಲೋಕಬಿಟ್ಟು ಹೊರಟಾಗಿದೆ!.... ಸಿಟ್ಟುಬೇಡ!... ಸುಮ್ಮನೆ ಕೇಳು!!... ನಿನ್ನ ಆಟ, ಪ್ರತಿಭಟನೆ, ಏನೂ ಇನ್ನು ನಡೆಯುವುದಿಲ್ಲ... ಸುಮ್ಮನೆ ಹೊರಡು!"

ಯುಧಿಷ್ಠಿರ: "ನೀನು ಮೋಸಗಾರ! ನಿನ್ನ ಯಾವ ಮಾತನ್ನೂ ನಂಬುವುದಿಲ್ಲ! ಕೃಷ್ಣನ ವಿರುದ್ಧ ನಿಂತ ನೀನು ಅವನ ಅಧೀನ ಎಂದು ಈಗೆನ್ನುತ್ತಿರುವೆ! ನೀನು ಏನನ್ನಾದರೂ ಹೇಳುವೆ!... ಆಗಲೇದ ಜೂಜಾಟದ ಮುಂಚೆಯೇ ಹಾಗೇಕೆ ಎನ್ನಲಿಲ್ಲ?... ನೀನು ಕಪಟಿ! ಕುಹಕಿ!..."

ಕಲಿ: "ಮೋಸ ಮಾಡುವುದೇ ನನಗೆ ಕೃಷ್ಣ ಕೊಟ್ಟ ಸ್ವಭಾವ! ಅದನ್ನು ಈಗ ನಾನು ಹೀಗೆನ್ನುತ್ತಿರುವುದೇ ನಿಜ! ಸೂತ್ರಧಾರ ಕೊಟ್ಟ ಪಾತ್ರ ಕೆಟ್ಟದ್ದೇ ಇರಬಹುದು! ಅದು ಚೆನ್ನಾಗಿಯೇ ನಡೆಸಲ್ಪಟ್ಟರೆ, ಕಲಾವಿದನ ಕಲೆ ಉತ್ತಮವಾಗಿತ್ತೆನ್ನಲಾರೆಯಾ?... ಕಲೆ ಕೆಟ್ಟದ್ದಿರುವುದಿಲ್ಲ! ನಟನೆ ಕೆಟ್ಟದ್ದಿರುವುದಿಲ್ಲ!... ಪಾತ್ರ ಕೆಟ್ಟದ್ದಿರಬಹುದು!... ನಾನು ಕೃಷ್ಣವಶವೇ ವಿನಾ ವಿರುದ್ಧವಲ್ಲ!..."

ಯುಧಿಷ್ಠಿರನಿಗೆ ತುಂಬಾ ಗೊಂದಲವಾಗುತ್ತದೆ!... ಕಲಿಯ ಮಾತು ಅರ್ಥಮರ್ಥ ತಿಳಿಯುತ್ತದೆ!... ನಾಲಿಗೆ ಒಣಗಿ, ಮೈಬೆವರಿ ತಲೆಗೆ ಚಕ್ರ ಬರುತ್ತದೆ!... "ಹೌದು, ಎಲ್ಲವೂ ಕಾಲವಶ!... ಆ ಅರ್ಥದಲ್ಲಿ ಕಲಿಯೂ ಕಾಲವಶವೇ, ಕೃಷ್ಣ ವಶವೇ!... ಭೀಷ್ಮ, ದ್ರೋಣ, ಕರ್ಣ...

ಎಲ್ಲರನ್ನೂ ಕೃಷ್ಣ, ಕಲಿಪರರನ್ನಾಗಿಸಿಯೇ ತನ್ನ ಕಾರ್ಯಸಾಧಿಸಿಕೊಂಡ"ನೆಂದು ವ್ಯಾಸರು ಹೇಳಿದ್ದು ನೆನಪಾಗಿ, ಕಲಿಯ ಮಾತುಗಳ ಸತ್ಯ ಹೃದಯಕ್ಕೆ ನಾಟಿತು!... ಇವರೆಲ್ಲ ಕೃಷ್ಣಪರರಾದರ, ತಾನೂ ತಮ್ಮಂದಿರೂ ಪಾಂಚಾಲಿಯೂ ಮಾತ್ರ ಕೃಷ್ಣಪರರಲ್ಲವೇ?... ಏನು ಕಲಿಯ ಮಾತುಗಳ ಅರ್ಥ?... ಕೃಷ್ಣ ಇತ್ತ ನಿಂತನೇಕೆ?... ಅರ್ಜುನನ ಸಾರಥ್ಯ ವಹಿಸಿದನೇಕೆ?... ಎರಡೂ ಕಡೆಯವರೂ ಕೃಷ್ಣ ಪರರೆಂದರೆ ಹೇಗೆ ಸಂಗತ?... ನೋಡೋಣ! ಈ ಪ್ರಶ್ನೆ ಪರಿಹಾರ ಕಂಡರೆ ಉತ್ತರ ಸಿಕ್ಕೀತು!'...

ಯುಧಿಷ್ಠಿರ: "ನೀನೆನ್ನುವುದರ ಸತ್ಯಾಸತ್ಯತೆಯನ್ನು ನಾನು ನಂಬಬೇಕಾದರೆ, ಈ ಗೋಜಲಿಗೆ ಉತ್ತರ ಹೇಳು, ನೋಡೋಣ! ನಾನು ನನ್ನ ಸೋತಮೇಲೆ ದ್ರೌಪದಿಯನ್ನಿಟ್ಟು ಸೋತೆನಲ್ಲ, ಅದು ಸರಿಯೆ? ತಪ್ಪೆ...? ಭೀಷ್ಮ ಎಂದದ್ದರ ಅರ್ಥವೇನು? ಏಕೆ ಹಾಗೆಂದ?"

ಕಲಿ: "(ನಗುತ್ತಾ), ಹಾಗೆ ಬಾ! ಅದು ನನ್ನ ದಾರಿ! ಈ ಪ್ರಶ್ನೆಗೆ ನಿನಗೆ ಉತ್ತರ ಸಿಗಲಿಲ್ಲವೆಂಬುದೇ ನಾನು ನಿನ್ನೊಳ ಹೊಕ್ಕದ್ದರ ಸಾಕ್ಷಿ! ಹೇಗೆನ್ನುವೆಯಾ?... ನೀನು ಧರ್ಮಪುತ್ರ! ಹೌದೋ?... ನಿನ್ನ ಧರ್ಮಮತಿಗೆ ಇದು ಎಟುಕಲಿಲ್ಲವೆಂದರೆ, ಆ ಧರ್ಮಬುದ್ಧಿಗೆ ಏನೋ ಮಂಕು ಕವಿದಂತಾಗಲಿಲ್ಲವೇ?... ಆ ಮಂಕು ಎರಚಿದವರಾರು?... ಭೀಷ್ಮ ಎಂದದ್ದು ಅರ್ಥಸರಿ!... ಅಂದಮೇಲೆ ಇನ್ನರ್ಥ ತಪ್ಪೆಂದಾಗಲಿಲ್ಲವೆ?... ಅದು ಯಾರ ಕೈವಾಡ?... ಪ್ರಮಾಣವಾಯಿತೇ?"

ಯುಧಿಷ್ಠಿರ: "(ತವಕದಿಂದ) ಗೋಜಲಿಗೆ ಪರಿಹಾರ ಹೇಗೆ?"

ಕಲಿ: "ಹೀಗೆ! ಹೆಂಡತಿಯು ಎಲ್ಲಾ ಅವಸ್ಥೆಗಳಲ್ಲೂ ಪತಿಯ ಅರ್ಧಭಾಗವೇ ಆಗಿ ಅವನ ವಶವೆಂಬುದು ವೇದದ ಸಂದೇಶ! ಕಲಿಪುರುಷ ಅದನ್ನು ಪ್ರಶ್ನಿಸುವುದಿಲ್ಲ!... ಆದರೆ ಈ ನಿನ್ನ ಪತ್ನಿ ನಿನಗೆ ಮಾತ್ರವಲ್ಲದೆ, ಇನ್ನೂ ನಾಲ್ವರಿಗೂ ಪತ್ನಿಯಾಗಿದ್ದಳು! ನೀನು ನಿನ್ನನ್ನೇ ಒಡ್ಡುವ ಮೊದಲೂ ಆಮೇಲೆಯೂ ಅದೇ ಸತ್ಯವೆಂದಿಟ್ಟುಕೋ! ಇನ್ನೊಬ್ಬರ ಪತ್ನಿಯನ್ನು ಜೂಜಿನಲ್ಲಿ ಒಡ್ಡುವುದಕ್ಕೆ ನಿನಗೆ ಏನು ಅಧಿಕಾರವಿದ್ದಿತು? ನಿನ್ನೊಬ್ಬಳ ಹೆಂಡತಿಯಷ್ಟೇ ಆಗಿದ್ದರೆ ಭೀಷ್ಮ ಹೇಳಿದ್ದು ಸರಿ ಏನು! ಅದೇ ಭೀಷ್ಮನ ಮಾತು ಸರಿಯಾಗಿದ್ದರೆ, ನೀನು ಸೋತುಕೊಂಡ ಮೇಲೆ, ಇನ್ನೂ ಭೀಮಾರ್ಜುನ ನಕುಲ-ಸಹದೇವರ ಪತ್ನೀ ಭಾಗಗಳನ್ನು ಒಡ್ಡಲು ನಿನಗೇನು ಅಧಿಕಾರ ಇತ್ತು?... ಹೇಗೂ ನೀನು ದ್ರೌಪದಿಯನ್ನಿಟ್ಟದ್ದೇ ಗೋಜಲಾಯಿತು!"

ಯುಧಿಷ್ಠಿರನಿಗೆ ಕಣ್ಣು ಕತ್ತಲಾಯಿತು!... ವಿದುರನ ಮಾತುಗಳು ಸಿಡಿಲಿನಂತೆ ಕಿವಿಯಲ್ಲಿ ಮೊಳಗಲಾರಂಭಿಸಿದವು..."ನ ಕೃಷ್ಣಾ ದಾಸಿತ್ವಂ ಅರ್ಹತಿ"... 'ಹೌದು! ಇದೇಕೆ ನನಗೆ ಹೊಳೆಯಲಿಲ್ಲ?... ನಾನೇಕೆ ಹಾಗೆ ಮಾಡಿದೆ?'

ಕಲಿ: "(ಅವನ ಚಿಂತನೆಯ ಜಾಡನ್ನೇ ಹಿಡಿದು ಹೇಳುತ್ತಾನೆ.) ನೀನು ಹಾಗೆ ಮಾಡಿದ್ದೇ ನನ್ನ ಪ್ರವೇಶ ನಿನ್ನಲ್ಲಿ ಆದಮೇಲೆ! ನಾನು ನಿನ್ನ ಬುದ್ಧಿಯಲ್ಲೇ ವಾಸ್ತವ್ಯ ಮಾಡಿಬಿಟ್ಟಿದ್ದೆ...

***ಯಸ್ಮೈ ದೇವಾಃ ಪ್ರಯಚ್ಛನ್ತಿ ಪುರುಷಾಯ ಪರಾಭವಂ।***
***ಬುದ್ಧಿಂ ತಸ್ಯಾಪಕರ್ಷನ್ತಿ ಸೋऽವಾಚೀನಾನಿ ಪಶ್ಯತಿ॥***
***ಬುದ್ಧೌ ಕಲುಷಭೂತಾಯಾಂ ವಿನಾಶೇ ಸಮುಪಸ್ಥಿತೇ।***
***ಅನಯೋ ನಯಸಂಕಾಶೋ ಹೃದಯಾನ್ನಾಪಸರ್ಪತಿ॥***
***ಅನರ್ಥಾನ್ಯರ್ಥರೂಪೇಣ ಅರ್ಥಶ್ಚಾನರ್ಥರೂಪಿಣಃ।***
***ಉತ್ತಿಷ್ಠನ್ತಿ ವಿನಾಶಾಯ ನೂನಂ ತಚ್ಚಾಸ್ಯ ರೋಚತೇ॥***
***ನ ಕಾಲೋ ದಂಡಮುದ್ಯಮ್ಯ ಶಿರಃ ಕೃನ್ತತಿ ಕಸ್ಯಚಿತ್।***
***ಕಾಲಸ್ಯ ಬಲಮೇತಾವತ್ ವಿಪರೀತಾರ್ಥದರ್ಶನಂ॥***

ಎಂದು ಸಂಜಯ ಹೇಳಿದ್ದು ನೆನಪಿದೆಯೇ? ಅರ್ಥ ಹೇಳುವುದರ ಅವಶ್ಯವಿರಲಾರದು, ನೀನು ಪಂಡಿತನಲ್ಲವೇ! ದೇವತೆಗಳು ಯಾರಿಗಾದರೂ ವಿನಾಶವನ್ನು, ಸೋಲನ್ನು ಕೊಡಬೇಕಾದರ, ಮೊದಲು

ಅವನ ಬುದ್ಧಿಯನ್ನು ಕಸಿಯುತ್ತಾರಂತೆ! ಆಗ ಕಾಣಬಾರದ್ದೆಲ್ಲ ಕಾಣಲಾರಂಭಿಸುತ್ತದೆ! ವಿನಾಶ ಹತ್ತಿರ ಬರುತ್ತಾ, ಬುದ್ಧಿ ಕೊಳಕಾಗಿ, ಅನ್ಯಾಯವು ನ್ಯಾಯವೆನುವಲ್ಲೂ, ನ್ಯಾಯವೇ ಅನ್ಯಾಯವೆಂಬಂತೆಯೂ ತೋರುವ. ಹೃದಯವನ್ನು ಬಿಟ್ಟಗಲದೆ ಕೂತು ಬಿಡುತ್ತದೆ! ಅನರ್ಥವು ನಿನಗೆ ಅರ್ಥರೂಪದಲ್ಲಿ ಬಂದು ಕಾಣಲಿಲ್ಲವೆ ಧರ್ಮಪುತ್ರ?... ಅರ್ಥವೇ ನಿನ್ನ ಅನರ್ಥವಾಗಿ ಕಾಣಲಿಲ್ಲವೇ? ನಿನಗೆ ಜೂಜು ಬೇಕಿತ್ತು ಹೇಗೆ?... ನಾನು ಕಾಲಪುರುಷನ ದಂಡನಾಯಕ! ನಾನು ಕೈಯಲ್ಲಿ ದೊಣ್ಣೆ ಹಿಡಿದು ಯಾರ ತಲೆಯನ್ನೂ ಒಡೆಯುವುದಿಲ್ಲ!... ಸುಮ್ಮನೆ ಯದ್ವಾತದ್ವಾ ದರ್ಶನ ಮಾಡಿಸಿ ಬಿಡುತ್ತೇನೆ!... ಇ... ಇದುವರ ತನಕ ಇದಕ್ಕೆ ನೀನೇ ಶ್ರೇಷ್ಠ ಉದಾಹರಣೆ!"... ಕಲಿ ಹೊರಡಲು ಯತ್ನಿಸುತ್ತಾನೆ!... ಧರ್ಮಪುತ್ರ ತಡೆಯುತ್ತಾನೆ!

ಯುಧಿಷ್ಠಿರ: "ಇನ್ನೊಂದು ಕೊನೆಯ ಪ್ರಶ್ನೆಗೆ ಉತ್ತರಿಸು! ನಿನ್ನ ಮಾತುಗಳಲ್ಲಿ ಸ್ಪಷ್ಟ ಇರುತ್ತದೆ!... ನೀನು ಕಾಲಪುರುಷ ಕೃಷ್ಣನ ಪರಮಾತ್ಮನ ಆಗಿದ್ದರೆ, ಕಲಿಯುಗ ಆಗಿದ್ದರೆ, ಆಗ ದುರ್ಯೋಧನನ ರಾಕ್ಷಸೀ ವರ್ತನೆಗಳಿಗೆ ಯಾರು ಹೊಣೆ?"

ಕಲಿ: "ನಾನು ದುರ್ಯೋಧನನನ್ನು ಉಪಯೋಗಿಸಿಕೊಂಡ ಮಾತ್ರ!... ಅವನಲ್ಲಿದ್ದ ಆ ರಾಕ್ಷಸೀ ಅಂಶಕ್ಕೆ ನಾನೇ ಆಗಿದೆ!.. ಅದರ ಗೊಡವೆ ನನ್ನದಲ್ಲ!..."

ಯುಧಿಷ್ಠಿರ: "ಶ್ರೀಕೃಷ್ಣ ಲೋಕ ಬಿಟ್ಟಾಯಿತು ಎಂದೆಯಲ್ಲ! ಏನರ್ಥ?"

ಕಲಿ: "ನಾನು ಗೂಢಚಾರನೂ ಅಲ್ಲ, ಜ್ಯೋತಿಷಿಯೂ ಅಲ್ಲ! ದ್ವಾರಕೆಯಿಂದ ಬರುವ ನಿನ್ನ ಗೂಢಚಾರರನ್ನು ನಾಳೆ ಕೇಳಿ ತಿಳಿದುಕೋ! ಭವಿಷ್ಯವನ್ನು ನಿನ್ನ ಜೋಯಿಸರನ್ನು ಕೇಳು! ನನ್ನ ಭವಿಷ್ಯ ನಾನೇ ಹೇಳಲಾರೆ!... ಈ ಎಚ್ಚರಿಕೆಯನ್ನು ಆಲಿಸು!... ವರ್ತಮಾನದ ಕರ್ತವ್ಯಗಳನ್ನು ಪಾಲಿಸದೆ ಯಾವ ಮೂಢರು ಬರಿಯ ಆಗದ ಭವಿಷ್ಯಕ್ಕೆ ಗಂಟು ಬೀಳುತ್ತಾರೋ, ಅವರಲ್ಲೇ ನಾನು ಮೊದಲು ಪ್ರವೇಶಿಸುವುದು!! ಅಂಥ ಪ್ರಾಚೀನ ಆಶ್ವಾಸನೆಗಳನ್ನೇ ಕೊಡುವ ಜೋಯಿಸರಲ್ಲೂ ನಾನಿರುತ್ತೇನೆ... ಒಂದು ರಾಷ್ಟ್ರದಲ್ಲಿ ಜನರು ನಿರುದ್ಯೋಗಿಗಳೇ ಆಗಿ, ಬರೀ ಭವಿಷ್ಯ ಕೇಳುವ ಚಟದಲ್ಲಿ ಮುಳುಗಿದ್ದರೆ, ಆ ರಾಷ್ಟ್ರ ನನ್ನ ವಶವಾಯಿತೆಂದೇ ತಿಳಿ! ಇದು ನಿನ್ನ ರಾಷ್ಟ್ರದಲ್ಲಿ ಎಷ್ಟು ನಿಜವೆಂಬುದನ್ನು ಖಾತರಿ ಮಾಡಿಕೋ... ಹೊರಡು. ಮೂಟೆಕಟ್ಟು... ನನಗೆ ದಾರಿಬಿಡು..." ಎನ್ನುತ್ತಾ ಕಲಿ ಪುರುಷ ಹೊರಟ! ದ್ವಾಪರ ಅವನನ್ನನುಸರಿಸಿದ!

* * * * *

ಧರ್ಮಜ ಯಾತನೆಯಿಂದ ಬಿಡುಗಡೆ ಹೊಂದಿದವನಂತೆ ಎಚ್ಚೆತ್ತ!... ಆ ದಿನವೆಲ್ಲ ಯಾವ ತಮ್ಮಂದಿರಿಗೂ ಭೇಟಿ ಕೊಟ್ಟಿರಲಿಲ್ಲ!

"ಗೂಢಚಾರರು ಮಾಹಿತಿ ನೀಡಿದಾಗ ಪಾಂಚಾಲಿ ಅಲ್ಲಿರದುದೇ ಸರಿಯಾಯ್ತು! ಇಲ್ಲವಾದರೆ ಎದೆಯೊಡೆದು ಸಾಯುತ್ತಿದ್ದಳು!" ಎಂದುಕೊಂಡ!

ಕಲಿಪುರುಷನ ಆಗಮನ, ಗತಕಾಲದ ಘಟನೆಗಳ ಬಗ್ಗೆ ಅವನು ನೀಡಿದ ವಿಶ್ಲೇಷಣೆ, ಅವನು ತನ್ನ ಸ್ವರೂಪವನ್ನು ಪರಿಚಯಿಸಿಕೊಂಡ ರೀತಿ, ಅವನ ಕಾರ್ಯವೈಖರಿ-ಎಲ್ಲಾ ಯುಧಿಷ್ಠಿರನಿಗೆ ತಲೆಗೆ ಕಟ್ಟಿತ್ತು!

ಉಳಿದದ್ದು, ತಾನೇ ಗೂಢಚಾರನಾಗಿ, ನಗರವನ್ನು ರಾತ್ರಿ ಸುತ್ತಿ ಬಂದು, ತನ್ನ ಕಣ್ಣಿಂದಲೇ ಸತ್ಯ ಕಾಣಬೇಕಾದುದು! ಅಲ್ಲಿಗೆ ಗೂಢಚಾರರ ಮಾತಿನ ಸತ್ಯಾಸತ್ಯತೆಯೂ ತಿಳಿಯುವುದಲ್ಲದೆ, ಕಲಿಪುರುಷ ಹೇಳಿದ್ದರ ಸತ್ಯತೆಯೂ ಪರೀಕ್ಷಿತವಾಗುತ್ತದ!...

* * * * *

ಅಂದೆಲ್ಲ ಅರ್ಜುನ, ಕ್ಷಮಾಯಾಚನೆಗೆ ಯುಧಿಷ್ಠಿರನ ಅಂತಃಪುರದ ಬಾಗಿಲಲ್ಲಿ ಹಗಲೆಲ್ಲ ಂದು, ಕಾದು, "ದೊರೆಗಳಿಗೆ ಸಮಯವಿಲ್ಲ" ಎಂಬ ಅಪೂರ್ವ ಉತ್ತರವನ್ನು ಕೇಳಿ ನೊಂದು ಾಪಸ್ಸಾಗಿದ್ದ!

ದ್ರೌಪದೀ ದೇವಿಗೂ ಅದೇ ಗತಿಯಾಗಿತ್ತು!... ಉಳಿದ ತಮ್ಮಂದಿರಿಗೂ ಸಹ!!

ಸರಿರಾತ್ರಿಯಲ್ಲಿ ಭೀಮಸೇನ ಬಂದು ದರ್ಶನಾರ್ಥಿಯಾಗಿ ಧರ್ಮಪುತ್ರನ ಬಾಗಿಲಲ್ಲಿ ನಿಂತ!

ಪ್ರತೀಹಾರಿ ಒಳಗೆಹೋಗಿ ದೊರೆಯ ಆಜ್ಞೆಯಂತೆ "ಒಳಗೆಹೋಗಬಹುದು" ಎನ್ನುತ್ತಾ ಾಗಿಲು ತೆರೆದ. ನಿರಾಭರಣನಾಗಿ, ನಿರಾಯುಧನಾಗಿ, ಯಾವ ರಾಜ ಚಿಹ್ನೆಗಳನ್ನೂ ಅಲಂಕರಿಸದೆ, ಯುಧಿಷ್ಠಿರ ಸಾದಾ ಆಸನದಲ್ಲಿ ಪದ್ಮಾಸನದಲ್ಲಿ ಕುಳಿತು ಏನನ್ನೋ ಚಿಂತಿಸುತ್ತಿದ್ದ!... ಮೂಲೆಯಲ್ಲಿನ ರತ್ನದೀಪಗಳು ಮೆಲ್ಲನೆ ಹಿತವಾಗಿ ಬೆಳಕನ್ನು ಬೀರುತ್ತಿದ್ದವು. ರಾತ್ರಿ ಪಹರೆಯ ದ್ವಾರ ರಕ್ಷಕರಲ್ಲದೆ, ಚೇಟಿಯರು ಕಂಭದ ಮರೆಗಳಲ್ಲಿ ನಿಂತು ರಾಜಾಜ್ಞೆಯನ್ನು ಎದುರು ನೋಡುತ್ತಾ ತಾಸುಗಟ್ಟಳೆ ನಿಂತು, ಕಾಲುಗಳು ನೋಯಲಾರಂಭಿಸಿದ್ದವು!

ಭೀಮ ಬಂದು ನಮಸ್ಕರಿಸಿ ಅಣ್ಣನ ಪಾದತಲದಲ್ಲಿ ಕುಳಿತ! ಅವನನ್ನು ನೋಡುತ್ತಲೇ ಧರ್ಮಜ ಕಣ್ಣೀರು ಸುರಿಸಲಾರಂಭಿಸಿದ! ಭೀಮನನ್ನು ಅಪ್ಪಿಕೊಂಡು, ತನ್ನ ಹೃದಯವನ್ನು ಹಗುರ ಮಾಡಿಕೊಂಡ!... ತನ್ನ ಬಲತೋಳನ್ನು ಭೀಮನ ಮುಂದೆ ನೀಡಿದ!

ಏನೂ ತಿಳಿಯದೆ, ಭೀಮ "ಏಕೆ?" ಎಂಬಂತೆ ನೋಡಿದ! "ಜೂಜಾಡಿ, ಪಾಂಚಾಲಿಯನ್ನು ಪರಿಭವಪಡಿಸಿ, ನಿಮ್ಮೆಲ್ಲರಿಗೆ ಕಷ್ಟತಂದು ಜೂಜಾಡಿದ ಈ ತೋಳನ್ನು ಸುಡು, ಭೀಮ! ಅಂದು ನೀನಾಡಿದ್ದನ್ನು ಅರ್ಜುನ ತಡೆದ! ಈಗ ಸುಟ್ಟಲ್ಲದೆ ನನಗೆ ನೆಮ್ಮದಿ ಇಲ್ಲ!!" -ಅಳುತ್ತಾನೆ!

ಭೀಮ: "ಈಗೇಕೆ ಇದೆಲ್ಲ!"

ಯುಧಿಷ್ಠಿರ, ತನಗೆ ಕಲಿಪುರುಷ ಹೇಳಿದ್ದನ್ನೆಲ್ಲ ತಿಳಿಸಿ, ಅರ್ಜುನ ಸಭೆಗೆ ಬಂದ ರೀತಿಯಲ್ಲಿ ಮತ್ತೆ ಕಲಿ ಪ್ರವೇಶವಾದುದನ್ನು, ನೊಂದು ಹೇಳಿಕೊಳ್ಳುತ್ತಾನೆ.

"ಈ ರಾತ್ರಿ ಮುಗಿಯುತ್ತಾ ಬಂತು! ನಾಳೆ ರಾತ್ರಿ ಗೂಢಚರ್ಯೆಗೆ ನಗರದ ಪೂರ್ವ ಉತ್ತರ ಭಾಗಗಳಲ್ಲಿ ನಾನೇ ಹೋಗಿ ಬರುತ್ತೇನೆ.... ದಕ್ಷಿಣ ಪಶ್ಚಿಮಗಳತ್ತ ಸ್ವಯಂ ನೀನೇ ಹೋಗಿ ಬಂದು ನನಗೆ ವರದಿಸಲ್ಲಿಸು!... ದ್ವಾರಕೆಯಲ್ಲೇನೋ ಅನರ್ಥವಾಗಿರುವಂತೆ ತೋರುತ್ತದೆ!... ಅರ್ಜುನನಿಗೆ ಇದೊಂದು ಯಾತ್ರೆಯಾಗಿ ಪ್ರಾಯಶ್ಚಿತ್ತವೂ ಆಗಲಿ! ನಾಳೆ ಬೆಳಿಗ್ಗೆ ಅವನ ರಥ, ದ್ವಾರಕಾಯಾತ್ರೆಗೆ ಸಿದ್ಧವಾಗಿರಲಿ!... ಅವನು ಬಂದ ನಂತರ ನಾವು ಪರೀಕ್ಷಿತನಿಗೆ ರಾಜ್ಯಕೊಟ್ಟು ವಾನಪ್ರಸ್ಥ ಹೊರಡಬೇಕು...."

ಭೀಮ: "ಇನ್ನೊಂದು ವಿಷಯ ಹೇಳಲು ಬಂದೆ!... ಚಾರರು ಹೇಳಿದರೂ ನಂಬದೆ, ನಾನೇ ಹೋಗಿ ಕಂಡುಬಂದೆ!"

ಯುಧಿಷ್ಠಿರ: "ಏನದು?"

ಭೀಮ: "ಅರಮನೆಯ ಪೂಜಾಗಾರದಲ್ಲಿ, ಲೋಹದ ದೇವತಾಮೂರ್ತಿಗಳು ಒಂದೇ ಸಮ ಬೆವರುತ್ತಿವೆ!! ಕೈಗೆತ್ತಿಕೊಂಡು ಅಭಿಷೇಕಮಾಡಲು ಹೊರಟರೆ ಅಳುತ್ತವೆ!!!... ಕೆಳಗಿಟ್ಟರೆ ಸಂಚರಿಸುತ್ತವೆ!!" (ದೇವತಾನಿ ರುದನ್ತೀವ ಸ್ವಿದ್ಯನ್ತಿ ಹ್ಯುಚ್ಚಲನ್ತಿ ಹಿ.)

ಯುಧಿಷ್ಠಿರ ಬೆಚ್ಚಿದ!... ಕಣ್ಣು ಕತ್ತಲಾಯಿತು! "ಏನು ಭೀಮ! ನಿನಗೆಲ್ಲಾದರೂ ತಲೆ ಕೆಟ್ಟಿತೋ? ಈ ಉತ್ಪಾತಗಳು ನಿಜವೇ?" ಎಂದ. ಭೀಮ ಹೇಳಿದ: "ನೀನೇ ಬಂದು ನೋಡು."

* * * * *

# ೧೬. ಯುಧಿಷ್ಠಿರನ ನಿಶ್ಚಯ!

ಸ್ವಯಂ ಯುಧಿಷ್ಠಿರನೇ ತನ್ನ ಕಣ್ಣು ನಂಬದೆ, ಪೂಜಾಗಾರಕ್ಕೆ ಹೋಗಿ ನೋಡಿದ!... ಏನಾದರೂ ಗ್ರಹಚಾರವೇ? ಯಾರದಾದರೂ ಆಭಿಚಾರಿಕಕೃತ್ಯವೇ!... ಮಂತ್ರತಂತ್ರಜ್ಞರನ್ನು ಕರೆಸಿ, ತೋರಿಸಿ, ವಿಚಾರಿಸಿದ... ಅವರೂ ಕೈಲಾದುದನ್ನೆಲ್ಲ ಮಾಡಿ ನೋಡಿ, "ಇದು ಮಾನವಕೃತ ಮೋಡಿ ಅಲ್ಲ"ವೆಂದೂ ಇದರಲ್ಲಿ ದೈವಕೋಪವಿರಬೇಕೆಂದೂ ಸೂಚಿಸಿ, ತಮ್ಮ ನಿರೂಪಾಯತೆಯನ್ನು ವ್ಯಕ್ತಪಡಿಸಿದರು.

ಯುಧಿಷ್ಠಿರನಿಗೆ ಏನು ಮಾಡಬೇಕೆಂದೇ ತೋರಲಿಲ್ಲ!... ತಮ್ಮಂದಿರ ಸಭೆಯನ್ನು ಕೂಡಿಸಿದ. ರಾತ್ರಿ ಗೂಢಚಾರರು ಹೇಳಿದ್ದು ಒಂದು ಕಡೆ ಹೃದಯ ಕೊರೆಯುತ್ತಿದ್ದರೆ, ಈ ಉತ್ಪಾತದರ್ಶನ ಇನ್ನೊಂದು ಕಡೆ ಹೃದಯವನ್ನು ತೂತೇ ಮಾಡಿತ್ತು.

ಧೌಮ್ಯರು ಇದು ತಮ್ಮ ಬುದ್ಧಿಗೆ ಮೀರಿದ್ದೆಂದೂ, ಹಿಂದೆ ಪಾಂಡವರ ವನವಾಸಕ್ಕೆ ಮೊದಲೂ ನಂತರ ಯುದ್ಧಪೂರ್ವದಲ್ಲೂ ನಡೆದಂತೆಯೇ ಆಗಿರುವುದರಿಂದ ವೇದವ್ಯಾಸರನ್ನು ಕರೆಸುವುದೇ ವಾಸಿಯೆಂದೂ ಸೂಚಿಸಿದರು. ಧರ್ಮಜ ವ್ಯಾಸರನ್ನು ಭಕ್ತಿಯಿಂದ ಧ್ಯಾನಿಸಿದ. ವ್ಯಾಸರು ಬಂದು ಪಾಂಡವರನ್ನು ಅನುಗ್ರಹಿಸಿ, ದರ್ಭಾಸನದಲ್ಲಿ ಕುಳಿತರು.

** * **

ಶ್ರೀವ್ಯಾಸರು: "ಪುತ್ರ! ಏನು, ನನ್ನನ್ನು ನೆನೆಸಿ, ಕರೆದ ಕಾರಣ?"

ಧರ್ಮಜ: "ಗುರುವೇ! ಮತ್ತೆ ಅಶುಭಗಳು ಕಾಣಬರುತ್ತಿವೆ! ಕಾರಣ ತಿಳಿಯದು. ತತ್ಕಾಲದಲ್ಲಿ ನನ್ನ ಕರ್ತವ್ಯವನ್ನು ಉಪದೇಶಿಸಬೇಕು. ಅಂದು ರಾಜ್ಯವೇ ಬೇಡವೆಂದವನಿಗೆ, ತಾವು ಸಮಾಧಾನ ಹೇಳಿ, ಅಶ್ವಮೇಧ ಮಾಡಿಸಿ, ಶಾಂತಿ ತಂದು, ಪಟ್ಟದಲ್ಲಿ ಕೂರಿಸಿದಿರಿ! ನಾನು ಯಥಾಶಕ್ತಿ ಧರ್ಮಾಚರಣೆ ಮಾಡಿದ್ದೇನೆ. ನನಗೆ ಅರಣ್ಯವಾಸಕ್ಕೆ ಕಾಲ ಬಂದಿರಬಹುದೇ? ಜನ ನನ್ನನ್ನು ಆಡಿಕೊಳ್ಳುತ್ತಿದ್ದಾರಂತೆ! ವಿಧೇಯ ಪ್ರಜೆಗಳಿಗೆ ಈ ಪ್ರವೃತ್ತಿ ಏಕೆ? ದುರಾಚಾರಗಳು ಏಕೆ ಬೆಳೆಯುತ್ತಿವೆ? ಪ್ರಜೆಗಳನ್ನು ದಂಡಿಸಿ ದಾರಿಗೆ ತರುವುದು ಇನ್ನು ನನ್ನಿಂದಾದೀತೇ? ಅಥವಾ ಅವರ ದಾರಿಗೆ ಅವರನ್ನು ಬಿಟ್ಟು ನಾನು ವಾನಪ್ರಸ್ಥನಾಗಬೇಕೆ?"

ಶ್ರೀವ್ಯಾಸರು: "(ಬಹುಕಾಲ ಧ್ಯಾನಪರರಾಗಿದ್ದು ಉತ್ತರಿಸುತ್ತಾರೆ) ಯುಧಿಷ್ಠಿರ! ಕಾಲವು ಬದಲಾಗುತ್ತಿದೆ! ಕಲಿಯುಗ ಪ್ರವರ್ತಿತವಾಗಿರುವ ಲಕ್ಷಣಗಳು ಇವು! ಶ್ರೀಕೃಷ್ಣ ಭಗವಂತನು ತನ್ನ ಪ್ರಭಾವದಿಂದ ಅದನ್ನು ಇಷ್ಟು ದಿನವೂ ತಡೆಹಿಡಿದಿದ್ದ! ಅತ್ತ ದ್ವಾರಕೆಯಲ್ಲೂ ಎಲ್ಲಾ ಚೆನ್ನಾಗಿಲ್ಲ.... ಹೊಸದೊಂದು ನಿರ್ಲಜ್ಜ, ನಿರ್ಭೀತ, ಮೌಲ್ಯ ದೂರ ಸಮಾಜ, ಹೊಸ ಪೀಳಿಗೆ ತಲೆ ಎತ್ತುತ್ತಿದೆ!... ಅದಕ್ಕೆ ನೀನೂ ನಾನೂ ಬೇಕಿಲ್ಲ!... ನನ್ನ ನಿನ್ನ ದಾರಿಗೂ ಅದಕ್ಕೂ ಬಲುದೂರ! ಬಲುದೂರ!"

ಧರ್ಮಜ: "ದ್ವಾರಕೆಯಲ್ಲೇನಾಗಿದೆ? ಶ್ರೀಕೃಷ್ಣನಿಗೇನಾಗಿದೆ? ಭೂತಕಾಲದ ವಿಷಯದಂತೇಕೆ ಅದನ್ನು ತಾವು ಹೇಳುತ್ತಿರುವಿರಿ? ಪೂಜ್ಯರು ದಯಮಾಡಿ ಏನನ್ನೂ ಮುಚ್ಚಿಡದೆ ಅರುಹಬೇಕು! ಶ್ರೀಕೃಷ್ಣನ ವಿಷಯ ಹಾಗೆ ನೆನ್ನೆಯಿಂದ ಈಚೆಗೆ ನಾನು ಕೇಳುತ್ತಿರುವುದು ಇದು ಎರಡನೆಯ ಬಾರಿ!"

ವ್ಯಾಸರು: "ಮೊದಲ ಸಲ ಹೇಳಿದವರಾರು?"

ಧರ್ಮಜ: "ಕಲಿ ಪುರುಷ"

ವ್ಯಾಸರು: "ಓ! ನೋಡಿದೆಯ!... ನಾನು ಹೇಳುವುದು ಇನ್ನೇನಿದೆ?"

ಧರ್ಮಜ: "ಹಾಗೆಂದರೆ?"

ವ್ಯಾಸರು: "ಕಲಿಪುರುಷ ನಿರ್ಭಯವಾಗಿ ನಿನ್ನ ಬಳಿ ಬರುತ್ತಾನೆ, ಮಾತಾಡುತ್ತಾನೆ, ನಿನಗೆ ಹೇಳಬೇಕಾದುದನ್ನೆಲ್ಲ ಹೇಳುತ್ತಾನೆಂದರೆ ಅರ್ಥವಾಗಲಿಲ್ಲವೇ? ನಿನ್ನ ಧರ್ಮಶಕ್ತಿ ಕುಸಿಯುತ್ತಿದೆ, ಅವನ ಕಾಲ ಬಂದಿದೆ, ಎಂದರ್ಥ!"

ಧರ್ಮಜ: "ದ್ವಾರಕೆಯಲ್ಲಿ...?"

ವ್ಯಾಸರು: "ಸಮಾಚಾರ ಬಂದೀತು!... ತಡೆ!... ದ್ವಾರಕೆಯೇನು, ಹಸ್ತಿನಾವತಿಯೇನು? ಅಲ್ಲಿ ಮೊದಲು, ಇಲ್ಲಿ ನಂತರ ಇದ್ದುದು! ಕಾಲಪ್ರವಾಹರೀತಿ ಊರಿಂದೂರಿಗೆ ಬೇರೆಯಾಗಿರುವುದಿಲ್ಲ. ದೇಶದೇಶಗಳಲ್ಲೂ, ಭೂಖಂಡ ಖಂಡಗಳಲ್ಲೂ, ಅದು ಒಂದೇ ರೀತಿಯದಾಗಿಯೇ ಇರುತ್ತದೆ. ನಿನ್ನ ಅರಮನೆಯಲ್ಲೇ ಕಲಿಪ್ರವೇಶವೆಂದರೆ, ಅರ್ಥ ತಿಳಿಯಲಿಲ್ಲವೇ?"

ಧರ್ಮಜ ಕಲಿ ಹೇಳಿದುದನ್ನೆಲ್ಲ ಮತ್ತೆ ನೆನೆದ!... ಅರ್ಜುನದ್ರೌಪದಿಯರು ಸಭೆಗೆ ಬಂದ ಪರಿಯೂ ನೆನಪಾಯ್ತು!

ಧರ್ಮಜ: "ದ್ವಾರಕೆಗೆ ಅರ್ಜುನನ್ನು ಕಳುಹಲೇ?"

ವ್ಯಾಸರು: "ಕಳುಹುವುದೊಳ್ಳೆಯದು... ಇವನು ಹೋಗಿ ಅಲ್ಲಿ ನಡೆಯುವುದನ್ನು ತಡೆಯುವನೆಂಬ ನಿರೀಕ್ಷೆ ಇಟ್ಟುಕೊಳ್ಳಬೇಡ. ನಿನ್ನ ತೃಪ್ತಿಗಾಗಿ ಕಳುಹು... ಅಥವಾ ಅಲ್ಲಿಂದಲೇ ದೂತರು ಇತ್ತ ಬಂದಾರು... ಹೆದರಬೇಡ... ಶ್ರೀಕೃಷ್ಣಾವತಾರ ಮುಗಿಯುವ ಕಾಲ ಬಂದಿದೆ. ಅಂದರೆ ನೋಡಿಕೋ! 'ಮಮ ಪ್ರಾಣಾ:' ಎಂದು ನಿಮ್ಮನ್ನು ಶ್ರೀ ಕೃಷ್ಣ ಭಾವಿಸಿದ್ದ. ಹಾಗೇ ಹೇಳುತ್ತಿದ್ದ... ಈಗ ಪ್ರಾಣಗಳು ಇರಬೇಕೇ ಇಲ್ಲವೇ, ನೀನೇ ನಿರ್ಣಯಿಸು!... ಪರೀಕ್ಷಿತ ಇದ್ದಾನಲ್ಲ!... ಸಿದ್ಧಮಾಡು!!"

ಧರ್ಮಜನಿಗೆ ಅರ್ಥವಾಯಿತು!... ಸರಿ, ಅದೇ ಯುಕ್ತ!!

ವ್ಯಾಸರು ಮುಂದುವರೆದು: "ಮುಂದೆ ಬರಲಿರುವ ಕಾಲದ ಕೆಲವು ರೀತಿ ನೀತಿಮೌಲ್ಯಗಳನ್ನು ಹೇಳುತ್ತೇನೆ. ಗಮನವಾಗಿ ಕೇಳು. ಇದು ನಿನಗೆ ವಾಸಯೋಗ್ಯವೇ, ಅಲ್ಲವೇ, ನೀನೇ ಯೋಚಿಸು... ಬರಲಿರುವ ಕಾಲದ ರಾಜರಿಗೆ ಕೋಪಕ್ಕಿರುವ ಶಕ್ತಿ ಪ್ರಸಾದಕ್ಕಿರುವುದಿಲ್ಲ! ಅಧಿಕಾರವಿರುವುದು ಪ್ರಜೆಗಳಿಗೆ ಪೀಡೆ ಮಾಡಿ ಶಕ್ತಿ ತೋರಿಸುವುದಕ್ಕೆ ವಿನಾ, ರಕ್ಷಿಸುವುದಕ್ಕಲ್ಲ, ಇವರಿಗೆ!! ಸುಳ್ಳು, ಅಧರ್ಮ ರೀತಿಯ ಈ ಮುಂದಿನ ಅರಸರು ಸ್ತ್ರೀಯರನ್ನು, ಬಾಲರನ್ನು, ಗೋವುಗಳನ್ನು ಕೊಲ್ಲುವವರು. ಕಂಸನ ರೀತಿ ಅದು. ಅದೇ ಮುಂದುವರೆದೀತು. ರಾಜ್ಯ ನಡೆಸಲು ಈ ರಾಜರು ಪ್ರಜೆಗಳ ಹಣವನ್ನೇ ಕದಿಯುವರು. ಧರ್ಮಾರ್ಜಿತವೆಂಬುದು ಅವರಿಗಿದ್ದರಲ್ಲವೇ, ಕೋಶ? ಬೆಳಿಗ್ಗೆ ಹುಟ್ಟಿ ಸಂಜೆಯೊಳಗೆ ಸಾಯುವ ಕ್ರಿಮಿಕೀಟಗಳಿಲ್ಲವೆ, ಅಂಥ ಜನ ಇವರು! ಆಯುಃಪ್ರಮಾಣ ಕ್ರಮೇಣ ಇನ್ನು ಇಳಿಯುತ್ತ ಬರುತ್ತದೆ! ನೂರಾರು, ಸಾವಿರಾರು ವರ್ಷ ಬದುಕುವ ಮಾತು, ಯೋಗಿಗಳ ರೀತಿ ಇನ್ನು ಇಲ್ಲವಾಗುತ್ತದೆ! ಆಯುಷ್ಯವೇ ಅಲ್ಪವಾದವನು ಏನು ಧರ್ಮಾಚರಣೆ ನಡೆಸಿಯಾನು? ಏನು ಪುಣ್ಯಫಲ ಸಂಪಾದಿಸಿಯಾನು? ಏನು ಉಪಾಸನೆ ಮಾಡಿಯಾನು? ದುಡ್ಡಿದ್ದವನೇ ಪ್ರತಿಷ್ಠಿತನಾಗುತ್ತಾನೆ. ಬಲಾಢ್ಯನು ಮಾಡಿದ್ದೇ ಧರ್ಮವೆನಿಸುತ್ತದೆ... ದಾಂಪತ್ಯಕ್ಕೆ ಸತ್ಪ್ರಜಾನಿರ್ಮಾಣ ಉದ್ದೇಶವಾಗುವ ಬದಲು, ಗಂಡುಹೆಣ್ಣು ಮೆಚ್ಚುವುದೇ ಸಾಕಾಗುತ್ತದೆ! ಹೆಣ್ಣೆಂದರೆ ಸಾಕು, ಉಪಭೋಗವಸ್ತುವೆಂಬ ಕಲ್ಪನೆ ಬಲಿಯುತ್ತದೆ. ವಾಣಿಜ್ಯಕ್ಕೆ ಸುಳ್ಳೇ ಮೂಲಕಾರಣವಾಗುತ್ತದೆ. ಎಲ್ಲ ವರ್ಣ ಆಶ್ರಮಗಳಿಗೂ ಹೊರ ಚಿಹ್ನೆಗಳಷ್ಟೇ ನಿರೂಪಣೆಯ ಲಕ್ಷಣವಾಗಿಬಿಡುತ್ತವೆ. ಬಾಯಿಗೆ ಬಂದದ್ದನ್ನು ಭಯವಿಲ್ಲದೇ ಹೇಳಿದವನೇ ಪಂಡಿತನಾಗುತ್ತಾನೆ. ಕಪಟವೇಷ ಹಾಕುವುದು ಈ

ಕಲಿಯುಗದ ಮುಖ್ಯ ಡಾಂಭಿಕ ಲಕ್ಷಣವಾಗುತ್ತದೆ. ಇಂಥವನೇ ರಾಜನಾಗಬೇಕೆಂಬ ನಿಯಮ ಇರುವುದಿಲ್ಲ. ಯಾರಾದರೂ ಸರಿ. ಅತಿಲೋಭಿಗಳಾದ ಆಳುಗರ ಕಾಟದಿಂದ ಜನ ಹುಲ್ಲು ತಿನ್ನುವ ಕಾಲ ಬರುತ್ತದೆ. ಪ್ರಜಾಭಾರ ಹೆಚ್ಚುತ್ತದೆ. ಹೊಡೆದಾಡಿ ಸಾಯಲು ದಿನಾ ಕಾರಣ ಹುಟ್ಟುತ್ತವೆ. ಗಾಳಿಗಾಗಿ, ನೀರಿಗಾಗಿ, ಸ್ತ್ರೀಯರಿಗಾಗಿ, ಭಾಷೆಗಾಗಿ, ವಿದ್ಯೆಯ ಹೆಸರಿನಲ್ಲಿ, ಜಾತಿಧರ್ಮಗಳ ಹೆಸರಲ್ಲಿ, ಏನೇನೋ ಶಕ್ಯವೋ ಅದೆಲ್ಲ ಹೆಸರಲ್ಲಿ ದಿನಾ ಜಗಳ ಆಗಿ, ಪ್ರಜೆಗಳು ಸಾಯುತ್ತಾರೆ! ವಿದ್ಯೆಯನ್ನು ಹಣಕ್ಕೆ ಮಾರುವ ಕಾಲ ಬರುತ್ತದೆ; ಅನ್ನ ಮಾರಾಟ, ಸ್ತ್ರೀಯರ ರೂಪ ಮಾರಾಟ, ಸಿಕ್ಕದ್ದನ್ನೆಲ್ಲ ಮಾರಾಟ ಮಾಡುವ ಈ ಜನ ಬೇಗ ಸಾಯುತ್ತಾರೆ. ವಿಷ್ಣುವೆಂಬ ಸರ್ವೇಶ್ವರನ ಪೂಜೆ ಮೂಲೆಗುಂಪಾಗಿ, ಬೇಗ ಫಲಕೊಡುವ ದುರ್ದೇವತೆಗಳ ಪೂಜೆ ಪ್ರಚುರವಾಗುತ್ತದೆ. ವಾಮಾಚಾರಿಗಳು ಜಗದ್ಗುರುಗಳಾಗುತ್ತಾರೆ. ಎಷ್ಟು ಹೇಳಲಿ...!"

ಧರ್ಮಜ: (ಎರಡೂ ಕಿವಿಗಳನ್ನು ಮುಚ್ಚಿಕೊಳ್ಳುತ್ತಾನೆ!) "ಇಂಥ ಕೆಟ್ಟ ಕಾಲ ಮುಗಿಯುವುದು ಯಾವಾಗ?"

ವ್ಯಾಸರು: "ಚಂದ್ರಸೂರ್ಯರೂ ಏಕತ್ರ ಸೇರಿ, ಅಮಾವಾಸ್ಯೆಯೂ, ಪುಷ್ಯಮಾಸ ಪುಷ್ಯನಕ್ಷತ್ರದಲ್ಲಿ ಬೃಹಸ್ಪತಿಯೂ, ಏಕರಾಶಿಯಲ್ಲಿ (ಮೀನದಲ್ಲಿ) ಇವರೆಲ್ಲರೂ ಸೇರಿದಾಗ ಕೃತಯುಗ ಆರಂಭವಾಗುವುದು.

***ಯದಾಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯೇ ಬೃಹಸ್ಪತಿಃ।***
***ಏಕರಾಶೌ ಸಮೇಷ್ಯನ್ತಿ ತದಾ ಭವತಿ ವೈ ಕೃತಂ॥***

ಅದನ್ನು ಸಾಧ್ಯ ಮಾಡಲು ಭಗವಂತನು ಶಂಬಲಗ್ರಾಮವೆಂಬ ಹಳ್ಳಿಯಲ್ಲಿ ವಿಷ್ಣು ಯಶಸ್ಸೆಂಬ ಬ್ರಾಹ್ಮಣನ ಮಗನಾಗಿ ಅವತರಿಸಿ, ಬೆತ್ತಲೆ ಕುದುರೆಯನ್ನೇರಿ, ಬಿಚ್ಚಿದ ಕತ್ತಿಯೊಡನೆ ಸಂಚರಿಸಿ, ಈ ದಸ್ಯು ರಾಜರನ್ನು, ಅಧರ್ಮಿ ಪ್ರಜೆಗಳನ್ನು, ಧುರೀಣರನ್ನು ಸಂಹರಿಸುತ್ತಾನೆ! ಭವಿಷ್ಯ ಉತ್ತಮವಾಗಲು ಅಷ್ಟು ದಿನ ಕಾಯುವವರಾರು?..." ವ್ಯಾಸರು ಹರಸಿ ಅಂತರ್ಧಾನರಾದರು.

** * **

ದ್ವಾರಕೆಯ ಕಡೆಯಿಂದ ಗೂಢಚಾರರು ವಿಚಿತ್ರ ವಾರ್ತೆ ತಂದು "ಈಗಲೇ ಪ್ರಭುಗಳನ್ನು ಕಾಣುವುದಿದೆ!" ಎಂದು ಬಿನ್ನೈಸಿದರು! ಧರ್ಮಜ ಇನ್ನೂ ಸ್ನಾನಾಹ್ನಿಕಗಳನ್ನು ಮಾಡಿರಲಿಲ್ಲವಾದರೂ, ನಡೆಯುತ್ತಿದ್ದ ವಿಚಿತ್ರ ಸಂಗತಿಗಳಿಂದ, ಕುತೂಹಲಪರನಾಗಿ "ಒಳಗೆ ಬಿಡು" ಎಂದು ಆಣತಿಯಿತ್ತ! ತಮ್ಮಂದಿರು ಅಲ್ಲೇ ಇನ್ನೂ ಆಸೀನರಾಗಿದ್ದರು.

ದೂತ: "ಜೀಯಾ! ದ್ವಾರಕೆಗೆ ಅನರ್ಥ ಸಂಭವಿಸಿತ್ತು. ದುರ್ವಾಸರ ಶಾಪದಿಂದ ಕೃಷ್ಣಪುತ್ರ ಸಾಂಬ ಕಬ್ಬಿಣದ ಒನಕೆಯನ್ನು ಹಡೆದ!!..."

ಪಾಂಡವರು ಒಬ್ಬರ ಮುಖ ಒಬ್ಬರು ನೋಡಿ ವಿಸ್ಮಿತರಾಗುತ್ತಾರೆ.

ಧರ್ಮಜ: "ಯಾವುದಕ್ಕೆ ಏನು ಸಂಬಂಧವೋ? ಗಂಡಸೊಬ್ಬ ಹಡೆಯುವುದೆಂದರೇನು? ಅದರಲ್ಲೂ ಕಬ್ಬಿಣದ ಒನಕೆ ಎನ್ನುತ್ತೀಯೇ!... ಇದು ಯಾರೋ ಹಬ್ಬಿಸಿದ ಹಾಸ್ಯ ವಾರ್ತೆ ಇರಬೇಕಷ್ಟೆ? ಹೇಳು, ಪ್ರಮಾಣವೇನು?"

ದೂತ: "ಪ್ರಭು! ಹೇಳಿದರೆ ಹಾಗೇ ಭಾಸವಾಗುವ ಕಠಿಣ ಕ್ರೂರ ಸಮಾಚಾರ ಇದು" ಎನ್ನುತ್ತಾ, ಪೋಕರಿ ಹುಡುಗರು ಮುನಿಗಳನ್ನು ಗೇಲಿ ಮಾಡಿದ್ದು, ಅವರ ರೀತಿ ನೀತಿಗಳು, ಒನಕೆ ಹಡೆದ ಸಮಾಚಾರ ಎಲ್ಲವನ್ನೂ ಸುಧೀರ್ಘವಾಗಿ ವಿವರಿಸಿದ.

ಧರ್ಮಜ: "ಶ್ರೀಕೃಷ್ಣಪ್ರಭು ಅಲ್ಲಿದ್ದೇ ಇದೆಲ್ಲ ಆಯಿತೇ? ಇದಕ್ಕೆ ಶಾಂತಿ, ಉಪಾಯ, ಪರಿಹಾರಗಳನ್ನೇನ್ನೂ ಯಾದವರು ಆಚರಿಸಲಿಲ್ಲವೇ?"

ದೂತ: "ರಾಣಿಯರು ಕೃಷ್ಣ ಒಡೆಯರನ್ನು ಬೇಡಿಕೊಂಡರೂ ಮನಸ್ಸು ಮಾಡಲಿಲ್ಲವಂತೆ!... ಆಗುವುದು ಆಗಲಿ, ಎಂದರಂತೆ. ಹುಡುಗರು ಕ್ಷಮೆಯನ್ನು ಕೇಳಲಿಲ್ಲವಂತೆ. ಉಗ್ರಸೇನ ದೊರೆಗಳ ಆಜ್ಞೆಯಂತೆ ಆ ಕಬ್ಬಿಣದ ಒನಕೆಯನ್ನು ಪ್ರಭಾಸ ತೀರದಲ್ಲಿ ತೇದು ತೇದು ಸಮುದ್ರದಲ್ಲಿ ಬಿಟ್ಟರಂತೆ!"

ಧರ್ಮಜ: "ಮುಂದೆ?... ಮುಂದೇನಾಯಿತು?... ಹೇಳು... ಹೇಳು!"

ದೂತ: "ನೀವು ನಂಬುವುದಿಲ್ಲ ಮಹಾಪ್ರಭು!... ತೇದ ಕಬ್ಬಿಣ ರಸ ಆ ತೀರದಲ್ಲಿ ಜೊಂಡುಹುಲ್ಲಾಗಿ ಬೆಳೆದು ನಿಂತಿದೆಯಂತೆ... ಶ್ರೀಕೃಷ್ಣ ಒಡೆಯರು, ಏನೋ ಚಿಂತಿಸಿ, ಕಳೆದ ಪೌರ್ಣಮಿಯಂದು ಅಲ್ಲಿಗೆ ಯಾದವರೆಲ್ಲ ಹೋಗಿ ತೀರ್ಥಸ್ನಾನ, ತರ್ಪಣ ಮಾಡಿ, ಪೀಡಾ ಪರಿಹಾರ ಮಾಡಿಕೊಳ್ಳಲು ಸೂಚನೆ ಇತ್ತಿರುವರಂತೆ!..."

ಧರ್ಮಜ: "ನೀನು ಪಯಣ ಹೊರಟಿದ್ದು ಯಾವಾಗ? ಆವರೆಗೆ ಇನ್ನೇನಾಗಿತ್ತು? ಹೇಳು, ಬೇಗ ಹೇಳು!"

ದೂತ: "ಬುದ್ಧಿಯವರು ಪರಾಂಬರಿಸಬೇಕು. ನಾವು ಚತುರ್ದಶಿಯಂದು ಹೊರಟೆವು. ಈ ವೇಳೆಗೆ ಏನೇನಾಗಿದೆಯೋ ಗೊತ್ತಿಲ್ಲ. ಕೃತವರ್ಮರಾಯರಿಗೂ ಸಾತ್ಯಕಿ ರಾಯರಿಗೂ ಮನಸ್ತಾಪ ಇದ್ದೇ ಇತ್ತು. ಎರಡೂ ಕಡೆಯವರು ಗುಪ್ತವಾಗಿ ತಮ್ಮ ಆಯುಧ ಜಾಲವನ್ನೆಲ್ಲ ರಾತ್ರೋರಾತ್ರಿ ಆ ಜೊಂಡುಹುಲ್ಲಿನ ಸಾಲಿನ ಬುಡದಲ್ಲಿ ಸೇರಿಸಿ ಅಡಗಿಸಿಟ್ಟಿರುವರು! ಮದ್ಯವಂತೂ ನಾನಾ ಶೇಖರಣೆಯ ಭಾಂಡಗಳಲ್ಲಿ, ಚರ್ಮಚೀಲಗಳಲ್ಲಿ ಅಲ್ಲಿಗೆ ಸೇರಿದೆ!"

ಧರ್ಮಜ: "ಎಲ್ಲಿಗೆ?"

ದೂತ: "ಅಲ್ಲಿ ಪಿಂಡಾರಕವೆಂಬ ಸ್ಥಳ ಇದೆ... ಪ್ರಾಚೀನ ಶಿವಕ್ಷೇತ್ರ!..."

ಧರ್ಮಜ: "ಗ್ರಾಮವಾಸಿಗಳು ಸುಮ್ಮನೆ ಇರುವರೆ?"

ದೂತ: "ಅವರೆಲ್ಲ ಊರು ಬಿಟ್ಟು ಓಡಿದ್ದಾರೆ ಪ್ರಭು!... ಊರಿಗೆ ಸಾವಿರದಷ್ಟು ಅಗಲದ ತುಂಬ ಡೇರೆಗಳನ್ನು ಹಾಕಿದ್ದಾರೆ. ಯಾದವ ವೀರರ ಮದೋನ್ಮತ್ತೆಗೆ ಕಡಿವಾಣವೇ ಇಲ್ಲ. ದಸ್ಯು ಸ್ತ್ರೀಯರನ್ನು ತಂದು ಅಲ್ಲಿ ಅನುಭವಿಸಲಾರಂಭಿಸಿದ್ದಾರೆ..."

ಧರ್ಮಜ: "ಶ್ರೀಕೃಷ್ಣ ಪ್ರಭು ಅಲ್ಲಿ ಸೇರಿ ಆಯಿತೇ?... ಬಲಭದ್ರನು ಎಲ್ಲಿದ್ದಾನೆ?"

ದೂತ: "ನಾವು ಹೊರಟಾಗ ಅವರಿನ್ನೂ ದ್ವಾರಕೆಯಲ್ಲೇ ಉಳಿದಿದ್ದರು."

ದೂತನನ್ನು ಬಹುಮಾನಾದಿಗಳಿಂದ ಸತ್ಕರಿಸಿ ಧರ್ಮಜ ಕಳುಹಿದ! ಆಮೇಲೆ ತಮ್ಮಂದಿರತ್ತ ತಿರುಗಿ ಹೇಳಿದ.

ಧರ್ಮಜ: "ಈ ಸಮಾಚಾರ ನಡೆಯುತ್ತಿರುವ ರೀತಿಯೇ ಸರಿಯಿಲ್ಲ! ಇದೆಲ್ಲ ಭಯಾನಕವೂ, ದೈವಘಟಿತ ವಿಚಿತ್ರ ರೀತಿಯದೂ ಆಗಿದ್ದಂತಿದೆ. ಯಾತ್ರೆಗೆಂದೇ ಹೊರಟರೆ ಹೆಂಡ ಏಕೆ? ಹೆಂಡತಿಯೇಕೆ? ಪರಸ್ತ್ರೀ ಏಕೆ? ಆಯುಧ ಏಕೆ? ತಿಳಿಯುವುದಿಲ್ಲ... ಕೃಷ್ಣ ಏಕೆ ಸುಮ್ಮನಿದ್ದಾನೆ? ಅದೂ ತಿಳಿಯುವುದಿಲ್ಲ!... ಮುನಿಶಾಪ ಈ ವಿಚಿತ್ರರೂಪ ಏಕೆ ತಳೆಯಿತು? ತಿಳಿಯುವುದಿಲ್ಲ!... ಶ್ರೀಕೃಷ್ಣ ಏಕೆ ಪರಿಹಾರ ಮಾಡಲಿಲ್ಲ?"

ಭೀಮಸೇನ ನಕ್ಕ! ಸಹದೇವನ ಮುಖ ನೋಡಿದ! ಅಣ್ಣತಮ್ಮಂದಿರು ಏನೋ ಅರ್ಥ ಮಾಡಿಕೊಂಡರು.

"ಏನದು?" ಎಂದ ಧರ್ಮಜ.

ಭೀಮ: "ಅಣ್ಣ ನೀನೇ ಹೇಳಿದೆಯಲ್ಲ, 'ತಿಳಿಯುವುದಿಲ್ಲ' ಎಂದು!... ಕೌರವರೆಲ್ಲ ಸಾಯುವ ಮುನ್ನಾದಿನ ಕೃಷ್ಣನ ರೀತಿ ನಮಗೆಲ್ಲ ಎಷ್ಟು ತಿಳಿದಿತ್ತು?"

ಧರ್ಮಜ: "ನೀನೇನು ಹೇಳುತ್ತಿರುವೆ?"

ಭೀಮ: "ನಾನು ಏನನ್ನೂ ಹೇಳುತ್ತಿಲ್ಲ! ಸಂದರ್ಭ ಹೋಲಿಸಿದೆ, ಅಷ್ಟೆ."

ಧರ್ಮಜನಿಗೆ ಗಾಬರಿಯಾಯಿತು. ವ್ಯಾಸರ ಮಾತನ್ನು ನೆನೆಸಿದ! ದೂತರ ಮಾತುಗಳನ್ನು ನೆನೆಸಿದ... "ಅರ್ಜುನ, ಇಂದಿನ ಸ್ನಾನಾಹ್ನಿಕಗಳನ್ನು ಸಂಕ್ಷೇಪವಾಗಿ ಮುಗಿಸಿ, ಕೂಡಲೇ ದ್ವಾರಕೆಗೆ ಹೊರಡು! ತಡಮಾಡಬೇಡ!... ಯಾವುದಕ್ಕೂ ಸಿದ್ಧನಾಗಿ ಹೋಗು..." ಎಂದಾಜ್ಞಾಪಿಸಿದ. ಆ ರಾತ್ರಿ ತಾನೂ ಭೀಮನೂ ಹಸ್ತಿನಾವತಿಯ ರಾತ್ರಿ ನಗರಪ್ರದಕ್ಷಿಣೆಗೆ ಹೊರಡುವ ನಿಶ್ಚಯವನ್ನು ಭೀಮನಿಗೆ ಪುನಃ ನೆನಪಿಸಿದ. ಸಭೆ ಎದ್ದಿತು.

** * **

ಅರ್ಜುನನ ಪ್ರಯಾಣ ನೈಋತ್ಯ ದಿಕ್ಕಿನತ್ತ ಇದ್ದು, ಅಂದು ಆ ಪ್ರಯಾಣಕ್ಕೆ ಅದು ಶುಭದಿನವಿರಲಿಲ್ಲ. ಅರ್ಜುನನಿಗೆ ಹರಸಿದ ಅರಮನೆಯ ಜೋಯಿಸರು ದುಗುಡದಿಂದಲೇ ಆಶೀರ್ವದಿಸಿದ್ದರು. ದ್ರೌಪದೀ ಆರತಿ ಎತ್ತುವಾಗ ದೀಪ ಆರಿತ್ತು! ಸುವಾಸಿನಿಯರು ಅಳುತ್ತಲೇ ಹಾಡು ಹಾಡಿದರು.

ಅರ್ಜುನನ ಜ್ಞಾನ ಅದಾವುದರ ಮೇಲೂ ಇರಲಿಲ್ಲ. ವೇಗವಾದ ಕುದುರೆಗಳನ್ನು ರಥಕ್ಕೆ ಹೂಡಿ ಎರಡು ಹಗಲೂ ರಾತ್ರಿ ಪ್ರಯಾಣ ಮಾಡಿದ್ದ.

ಮೊದಲನೇ ರಾತ್ರಿ ಅರ್ಜುನನ ಕರುಳು ಒಂದು ಸಲ 'ಚುರ್' ಎಂದು ತೀವ್ರ ನೋವಿನಿಂದ, ಬಾಣಭಿನ್ನವಾದಂತೆ ಒಳಲಿತ್ತು... ಒಂದೇ ಒಂದು ಕ್ಷಣ... ಮರುಕ್ಷಣ "ಅರ್ಜುನಾ!" ಎಂಬ ಧ್ವನಿ ಕಿವಿಯನ್ನು ಕೊರೆಯಿತು. ಆ ಧ್ವನಿಯನ್ನು ಮೊದಲು ಅರ್ಜುನ ಗುರುತಿಸಲಾಗದೇ ಹೋದ. ರಥದ ವೇಗ ಒಂದು ಕಡೆ. ಕುದುರೆಗಳ ಬಾಯಿ ಉಸಿರಾಡುವ ಶಬ್ದ ಒಂದು ಕಡೆ. ಚಕ್ರಗಳ ಚೀತ್ಕಾರ ಮತ್ತೊಂದು ಕಡೆ. ತನಗೇ ಭ್ರಾಂತಿಯಿಂದ ಹಾಗೇನೋ ಕೇಳಿರಬೇಕೆಂದುಕೊಂಡ... ಮತ್ತೆ ಅದೇ ಶಬ್ದ ಒಂದೆರಡು ಗಂಟೆ ಕಾಲ ಆದಮೇಲೆ ಕೇಳಿಸಿದಾಗ, ಅರ್ಜುನ ಚಕಿತನಾಗಿ ರಥವನ್ನು ನಿಲ್ಲಿಸುವಂತೆ ಸಾರಥಿಗೆ ಹೇಳಿದ. ಈ ಸಲ ಅದು ಕೃಷ್ಣನ ಧ್ವನಿಯಂತೆ ಕೇಳಿಬಂತು. ಕೆಳಗಿಳಿದು, ವಾಡಿಕೆಯಂತೆ, ಧ್ವಜವನ್ನು ನೋಡಿದ!

ಅಗ್ನಿದತ್ತವಾದ ರಥ ಭಸ್ಮೀಭೂತವಾದ ಮೇಲೆ, ನಿಜಮಾರುತಿ ಆ ಧ್ವಜದಿಂದ ಹಾರಿ ಹೋದ ಮೇಲೆ, ಅರ್ಜುನ ಮತ್ತೊಂದು ರಥಕ್ಕೆ ಮಾರುತಿಯ ಚಿತ್ರದ ಧ್ವಜವನ್ನು ಜೋಡಿಸಿಕೊಂಡಿದ್ದ. ಚಿತ್ರದ ಮಾರುತಿ ಕಣ್ಣೀರು ಹಾಕುತ್ತಿದ್ದುದು ಅರ್ಜುನನಿಗೆ ವಿಸ್ಮಯವಾಗಿತ್ತು. ಗಾಳಿಯ ಶೈತ್ಯಾಂಶದಿಂದಹಾಗೆ ಕಂಡಿರಬೇಕೆಂದೂ, ಭ್ರಮೆ ಎಂದೂ ಎಂದುಕೊಂಡು, ಸಾರಥಿಯನ್ನು ಕರೆದು "ಅಲ್ಲೇನು ಕಾಣುತ್ತದೆ, ನೋಡು" ಎಂದ! ಸಾರಥಿಗೂ ಹಾಗೇ ಕಂಡುದು ಅರ್ಜುನನಿಗೆ ಪರಮಾಶ್ಚರ್ಯ ತಂದಿತ್ತು!

"ಶ್ರೀಕೃಷ್ಣನಿಗೇನೋ ಆಗಿದೆ. ಯಾದವರಿಗೇನೋ ಆಗಿದೆ" ಎಂದು ಭಯಪಟ್ಟು, ಉದ್ವಿಗ್ನನಾಗಿ ಮತ್ತೆ ರಥ ನಡೆಸಿದ.

ರಾತ್ರಿ ಕಳೆದು ಬೆಳಿಗ್ಗೆ ಅರ್ಜುನ, ಕುದುರೆಗಳಿಗೆ ಒಂದು ತಾಸು ವಿಶ್ರಾಂತಿ ಕೊಟ್ಟು ಸರಸ್ವತೀ ನದಿಯ ದಡದ ಏಕಾಂತ ಸ್ಥಳವೊಂದರಲ್ಲಿ ತಾನೂ ಬೇಗ ಪ್ರಾತರಾಹ್ನಿಕಗಳನ್ನು ಮುಗಿಸಿ, ಇನ್ನೇನು ಹೊರಡಬೇಕೆಂಬಷ್ಟರಲ್ಲಿ ಭಯಂಕರ ಬಿರುಗಾಳಿಯೊಂದು ಬೀಸಿ ಧ್ವಜವನ್ನು ಹರಿಯಿತು! ಬೇರೊಂದು ಸಿದ್ಧಪಡಿಸಿದ್ದ ಧ್ವಜವನ್ನು ಅಲ್ಲಿ ಏರಿಸಲು ಕೊಂಚ ವೇಳೆ ಬೇಕಾಯಿತು... ಬುತ್ತಿಯ ಆಹಾರ ಅರ್ಜುನನಿಗೆ ಸೇರಲಿಲ್ಲ. ಸಾರಥಿಗೆ ಊಟವನ್ನು ಉಣ್ಣುವಂತೆ ಹೇಳಿ, ರಥಮಧ್ಯದಲ್ಲೇ ಅರ್ಜುನ ವಿಶ್ರಾಂತನಾದ!

** * **

ಹಸ್ತಿನಾವತಿಯ ಅರಮನೆ. ದ್ರೌಪದೀದೇವಿ ಶಯನದಲ್ಲಿ ವಿಶ್ರಾಂತಳಾಗಿದ್ದಾಳೆ. ಮನಸ್ಸು ನೆಮ್ಮದಿಯಿಲ್ಲ!... ಅರ್ಜುನ ಊರಲ್ಲಿಲ್ಲವೆಂದಲ್ಲ!... ಹಿಂದಿನ ಒಂದೆರಡು ದಿನಗಳ ಘಟನೆಗಳು ಆ ಅಶಾಂತಿಗೆ ಕಾರಣವಾಗಿದ್ದವು! "ತಂಗೀ!" ಎಂಬ ಧ್ವನಿ ಕೇಳಿ ಬಂತು!... ದ್ರೌಪದಿ ಎದ್ದು ಸುತ್ತ

ನೋಡಿದಳು!... ಎಲ್ಲೂ ಯಾರೂ ಕಾಣಲಿಲ್ಲ! ಒಡತಿ ಎದ್ದುದನ್ನು ನೋಡಿ ಚೇಟಿಯೊಬ್ಬಳು ಹತ್ತಿರಬಂದು ನಿಂತಳು..."ಒಳಗೆ ಯಾರನ್ನಾದರೂ ಬಿಟ್ಟೆಯಾ?... ಯಾರಾದರೂ ಗಂಡಸರನ್ನು?" ಎಂದು ದ್ರೌಪದಿ ಕೇಳಿದಳು. ಚೇಟಿ, ಕಿವಿ ಮುಚ್ಚಿಕೊಂಡು "ಶಾಂತಂ ಪಾಪಂ' ಎಂದಳು!

ತನ್ನದೇ ಮನದ ತುಮುಲದ ಸೃಷ್ಟಿ ಅದಿರಬೇಕೆಂದು ದ್ರೌಪದಿ ಮತ್ತೆ ದಿಂಬಿಗೆ ಒರಗಿದಳು!.... ಮತ್ತೆ 'ತಂಗೀ!' ಎಂಬ ಧ್ವನಿ!

ಅದು ತನಗೆ ಚಿರಪರಿಚಿತ ಧ್ವನಿ!.... ಈ ಸಲ ಧ್ವನಿ ಹತ್ತಿರವೇ ಬರುತ್ತಿತ್ತು!.... ಓ!... ತನ್ನ ಆಪತ್ಸಖ ಶ್ರೀಕೃಷ್ಣ ಅಣ್ಣನ ಧ್ವನಿ!... ಎಲ್ಲಿಂದ ಬರುತ್ತಿದೆ?... ಇಲ್ಲೇ ಸಾಕ್ಷಾತ್ ಬಂದನೋ ಹೇಗೆ?... ದ್ರೌಪದಿ ವಿಸ್ಮಿತಳಾದಳು... ಧ್ವನಿ ಹೇಳಿತು.

"ತಂಗೀ! ಊರಿಗೆ ಹೊರಟಿದ್ದೇನೆ!... ನಿನ್ನನ್ನು ಬಳಲಿಸಿದೆ!... ಕ್ಷಮಿಸು!... ಸುತ್ತ ನೋಡಬೇಡ... ಅಲ್ಲಿಗೆ ನೇರಬರಲು, ಹೇಳಿಹೋಗಲು ವೇಳೆಯಿಲ್ಲ!... ಇಲ್ಲಿ ಸಂದರ್ಭವೂ ಸರಿ ಇಲ್ಲ... ನಿನ್ನನ್ನು ಸಕಾಲದಲ್ಲಿ ರಕ್ಷಿಸಲಿಲ್ಲ... ಕ್ಷಮಿಸು... ನಾನೀಗ ನಿನ್ನ ಹೃದಯದಿಂದಲೇ ಮಾತಾಡುತ್ತಿರುವೆ... ನೀನು ಅಂದು ದ್ವಾರಕೆಯಲ್ಲಿ, ಗೋಕುಲ ಗೋವರ್ಧನಗಳಲ್ಲಿ ಹುಡುಕಿ ಬಳಲಿದೆ... ಈಗ ನಾನು ಬಳಲಿಸುತ್ತಿಲ್ಲ... ನಾನೀಗ ನಿನ್ನ ಅಂತರ್ಯಾಮಿ!.... ಕ್ಷಮಿಸಿದೆಯಾ?"

ದ್ರೌಪದಿಗೆ ಹೃದಯ "ಧವಧವ" ಹೊಡೆದುಕೊಳ್ಳಲಾರಂಭಿಸಿತ್ತು!... ಏನು ಮಾಯೆ?.... ನಿಜವೇ ಸುಳ್ಳೇ!.... ಹಳೆಯ ಅಧ್ಯಾಯದ ಬಹುಭಾಗವೆಲ್ಲ ದ್ರೌಪದಿಗೆ ಕೇಳಿಸಿತು!... ಕಣ್ಣುಮುಚ್ಚಿದಳು!.... ಶ್ರೀಕೃಷ್ಣನಿಗೆ ಅಲ್ಲಿ ನಡೆದುದೆಲ್ಲ, ಕಣ್ಣ ಮುಂದೆ ನಡೆದಂತೆ ಕಂಡಿತು!.... ಆ ಸಂಭಾಷಣೆಯ ಭೋಗ್ಯತೆ, ಅದರ ಸುಖ, ಈ ಅಶಾಂತ ವಾತಾವರಣದಲ್ಲಿ ಅಮೃತದಂತೆ ಆಗಿ ವಿಲಕ್ಷಣಶಾಂತಿಯನ್ನು ದ್ರೌಪದಿ ಅನುಭವಿಸಿದಳು... ಆದರೂ ಇದೆಲ್ಲ ಮಾಯೆ ಎಂಬ ಭ್ರಾಂತಿ ಕೊನೆಗೆ ಆವರಿಸಿ ಏನನ್ನೂ ನಿಶ್ಚಯಿಸದಾದಳು.

ಆ ಕೂಡಲೇ ಇತರ ಪತಿಗಳಿಗೆ ಹೇಳಬೇಕೆಂದೆನಿಸಿದರೂ, ನಿಯಮಭಂಗಕ್ಕಂಜಿ, ಅಲ್ಲೇ ರಾತ್ರಿ ಕಳೆದಳು!...

* * *

ಮಧ್ಯಾಹ್ನದ ಬಿಸಿಲೇರುತ್ತಿತ್ತು!.... ಅರ್ಜುನ ನೀರು ಕುಡಿದು ಬರಲು ಸರಸ್ವತಿಯ ದಂಡೆಗೆ ಹೋದ... ಅಲ್ಲಿ ದ್ವಾರಕೆಯ ರಥವೊಂದು ನಿಂತಿದ್ದು ಕಂಡು ಚಕಿತನಾದ!... ರಥಪುರುಷ ಅದರಲ್ಲಿರಲಿಲ್ಲ! ಸಾರಥಿ, ದ್ವಾರಕೆಯವರ ರೀತಿಯಂತೆ ತಲೆಗೆ ಮುಂಡಾಸು ಧರಿಸಿ, ಬಳಲಿದ್ದ ಕುದುರೆಗಳ ಕಾಲು ಕೀಲುಗಳನ್ನು ನೀವುತ್ತಾ ಅವುಗಳ ಶ್ರಮ ಪರಿಹಾರ ಮಾಡುತ್ತಿದ್ದ!... ಹಿಂದಿನಿಂದ ಆ ಸಾರಥಿ ಯಾರೆಂದು ತಟ್ಟನೆ ಅರ್ಜುನನಿಗೆ ತಿಳಿಯಲಿಲ್ಲ!... ಕುತೂಹಲ ಬಹಳವಾಯಿತು!... ಮುಂದಿನಿಂದ ಹೋಗಿ ನೋಡಿದ!.... ದಾರುಕ!... ಓ... ದಾರುಕ!.... ಕೃಷ್ಣಸಾರಥಿ!!... ಶ್ರೀಕೃಷ್ಣನಿಲ್ಲದ ಬರಿಯ ರಥ!.... ಬರಿಯ ದಾರುಕ!!... ಹೃದಯ ಏನೇನೋ ಅಶುಭಗಳನ್ನು ಚಿಂತಿಸಿತ್ತು! ಅರ್ಜುನ ದಾರುಕನನ್ನು ಒಂದೇ ಸಮನೆ ಪ್ರಶ್ನಿಸಿದ.

ಅರ್ಜುನ:"ಏನಯ್ಯ, ಮಿತ್ರ! ಖಾಲಿ ರಥವನ್ನು ಎತ್ತ ಓಡಿಸುತ್ತಿರುವೆ?.... ಏನು ಅವಸರ?... ಶ್ರೀಕೃಷ್ಣಪ್ರಭುವು ಕ್ಷೇಮವೇ? ಬಲ ಭದ್ರದೇವ ಸೌಖ್ಯವೇ? ದೇವಕೀ ವಸುದೇವರಾದಿ ಹಿರಿಯರೆಲ್ಲ ಸೌಖ್ಯವೇ?... ಇದು ಹಸ್ತಿನಾವತಿಯತ್ತ ಹೋಗುವ ಜಾಡಲ್ಲವೇ? ಅತ್ತಲೇ ಹೊರಟೆಯಾ? ಏನು ಸಮಾಚಾರ?... ನನಗೇನಾದರೂ ಕೃಷ್ಣ ಒಡೆಯರಿಂದ ಸಮಾಚಾರವುಂಟೇ?..."

ದಾರುಕ:" ಪ್ರಭುವೇ! ಏನನ್ನು ಎತ್ತಣಿಂದ ಹೇಳಲಾರಂಭಿಸಲಿ?... ಯಾದವರೆಲ್ಲ ಬಡಿದಾಡಿ ನತ್ತರು!... ಮದ್ಯಪಾನ, ದ್ವೇಷಾಸೂಯೆಗಳು ಅವರನ್ನು ಮುಗಿಸಿದವು!... ನಿಮ್ಮನ್ನು ತುರ್ತಾಗಿ ಕರೆತರುವಂತೆ ಒಡೆಯರ ಅಪ್ಪಣೆಯಾಗಿದೆ!..."

ಅರ್ಜುನ:"ಒಡೆಯರು ಈಗೆಲ್ಲಿರುವರು?... ಬಲದೇವರು ಎಲ್ಲಿದ್ದಾರೆ?..."

ದಾರುಕ:"ಪಿಂಡಾರಕ ಕ್ಷೇತ್ರದ ಒಂದು ಮರದ ಬುಡದಲ್ಲಿ ವಿಶ್ರಾಂತರಾಗಿದ್ದಾರೆ. ಬಲದೇವರನ್ನು ಹುಡುಕುವುದಿತ್ತು!..."

ಅರ್ಜುನ: "ಅಂದರೆ, .... ಬಲದೇವ ಅಲ್ಲಿರಲಿಲ್ಲವೇ?"

ದಾರುಕ:"ಅಂತರ್ಯುದ್ಧದಲ್ಲಿ ಇಬ್ಬರದೂ ಪಾತ್ರವಿರಲಿಲ್ಲ!..."

ಅರ್ಜುನ:"ರಾಣೀವಾಸದವರು?"

ದಾರುಕ:"ಹಲವರು ಪಿಂಡಾರಕದಲ್ಲೇ ಬ್ರಾಹ್ಮಣರ ಮನೆಗಳಲ್ಲಿರುವರು. ಗರ್ಗಾಚಾರ್ಯರ ರಕ್ಷೆಯಲ್ಲಿ. ಉಳಿದವರು ದ್ವಾರಕೆಯಲ್ಲಿ!.... ಇನ್ನು ವಾರದೊಳಗೆ ದ್ವಾರಕೆ ಸಮುದ್ರದಲ್ಲಿ ಮುಳುಗುವುದೆಂದು ಜೋಯಿಸರು ಹೇಳಿದ್ದಾರೆ. ರಾಣೀ ವಾಸದವರನ್ನು ರಕ್ಷಿಸಿ ಹಸ್ತಿನಾವತಿಗೆ ಸಾಗಿಸುವುದು ನಿಮ್ಮ ಭಾರವೆಂದು ನಿಮಗೆ ತಿಳಿಸಲು ಒಡೆಯರ ಅಪ್ಪಣೆಯಾಗಿದೆ! 'ಬೇಗ ಕರೆದು ತಾ' ಎಂದರು. ನಿಮ್ಮ ನಿರೀಕ್ಷೆಯಲ್ಲೇ ಇರುತ್ತಾರೆ. ದೇವಕೀವಸುದೇವರು ಈ ಸಮಾಚಾರ-ಯಾದವರ ಕಲಹ, ಮರಣವಾರ್ತೆ - ಕೇಳಿ ತುಂಬಾ ಎದೆ ಒಡೆದು ಬಳಲಿರುವರು!... ಬಹಳ ದಿನ ತಾಳಲಾರರು!..."

ಅರ್ಜುನ:"ಪ್ರದ್ಯುಮ್ನ ಅನಿರುದ್ಧ ಸಾಂಬ... ಮುಂತಾದವರೆಲ್ಲ ಎಲ್ಲಿ?"

ದಾರುಕ:"ಏನೆಂದು ಬಿನ್ನೈಸಲಿ ಪ್ರಭು!... ಎಲ್ಲರೂ ಹತರಾದರು!... ಯಾರೂ ಉಳಿಯಲಿಲ್ಲ!.... ಯಾದವರ ಉತ್ತರಕ್ರಿಯೆ ನಿಮ್ಮ ಕೈಯ್ಯಿಂದ ಈಗ ಆಗಬೇಕಾಗಿದೆಯಂತೆ!...

ಅರ್ಜುನ ಗಟ್ಟಿಯಾಗಿ ಅತ್ತ! ಮಣ್ಣು ಹಿಡಿಹಿಡಿ ಎತ್ತಿ ಆಕಾಶಕ್ಕೆಸೆದು ವಿಧಿಯನ್ನು ಶಪಿಸಿದ! "ಕರಾಳ ವಿಧಿಯೇ! ಇದೊಂದು ಕೆಲಸ ನನಗೆ ಬಾಕಿ ಉಳಿಸಿದ್ದೆಯಾ?..." ಅಂದು ಅಭಿಮನ್ಯುವಿನ ಶ್ರಾದ್ಧ ಮಾಡಿಸಿದ್ದು ಸಾಲದೇ?... ರುಕ್ಮಿಣೀ ಸತ್ಯಭಾಮಾ ದೇವಿಯರ ಮುಖಗಳನ್ನು ಎಂತು ನೋಡಲಿ?... ಹಾಳು ದ್ವಾರಕೆಗೆ ಹೇಗೆ ಪ್ರವೇಶಿಸಲಿ?"... ಎನ್ನುತ್ತಾ ರೋದಿಸಿದ.

ದಾರುಕ:" ಮಹಾಪ್ರಭು! ಅಳುತ್ತಾ ಇರುವ ವೇಳೆ ಇದಲ್ಲ, ಕಾಲಾವಕಾಶವೂ ಇಲ್ಲ! ನಾನು ಹೊರಟೇ ಎರಡು ದಿನದ ಮೇಲಾಯ್ತು! ಒಡೆಯರು ಏನಾಗಿದ್ದಾರೋ!..."

ಅರ್ಜುನನ ಕರುಳು ಹೆಪ್ಪುಗಟ್ಟಿ, ತೀವ್ರವಾದ ವೇದನೆ ಹೃದಯದವರೆಗೆ ಏರಿತ್ತು!... ಮತ್ತೆ ನದಿಗೆ ಹೋಗಿ ಬೇಗ ಸ್ನಾನ ಮತ್ತೆ ಮಾಡಿ, ಸತ್ತವರಿಗಾಗಿ ಜಲಾಂಜಲಿಯನ್ನು ಅಲ್ಲಿಂದಲ್ಲೇ ಕೊಟ್ಟು, ತಿಲಕವನ್ನೂ ಹಚ್ಚಿಕೊಳ್ಳದೇ ರಥದತ್ತ ಹೊರಟ!... ತನ್ನ ಕುದುರೆಗಳು ದಣಿದಿದ್ದವು. ತನ ಸಾರಥಿಗೆ ನಿಧಾನವಾಗಿ ಬರುವಂತೆ ಹೇಳಿ, ತಾನು ದಾರುಕನ ರಥದಲ್ಲೇ ಏರಿ ಕುಳಿತ. ರಥ ಮುಟ್ಟಿ ನಮಸ್ಕರಿಸಿ "ನಡೆಸು" ಎಂದ. ದಾರುಕ ಕುದುರೆಗಳನ್ನು ಮುಟ್ಟಿದ! ವಾಯುವೇಗದಲ್ಲಿ ಅವು ಹೊರಟವು.

ದಾರಿಯುದ್ದಕ್ಕೂ ಸಂಭಾಷಣೆ ನಡೆದೇ ಇತ್ತು!... ಆ ರಾತ್ರಿ ಸರಿರಾತ್ರಿಯವರೆಗೆ ರಥ ಓಡಿಸಿ, ಎರಡು ತಾಸು ವಿಶ್ರಾಂತಿಗಾಗಿ, ದಾರುಕ ರಥವನ್ನು ಒಂದು ಗ್ರಾಮದ ಹೊರವಳಯದಲ್ಲಿ ನಿಲ್ಲಿಸಿದ. ಅದೊಂದು ತೋಪು. ಅಲ್ಲಿ ಕೊಳವಿತ್ತು.... ಅರ್ಜುನ ದೇಹಬಾಧೆಗಳನ್ನು ತೀರಿಸಿಕೊಂಡು, ರಥಮಧ್ಯದಲ್ಲೇ ವಿಶ್ರಾಂತನಾದ. ದಾರುಕ ಒಂದು ಮರಕ್ಕೊರಗಿ ಕಾಲು ಚಾಚಿದ. ಅವನಿಗೆ ಕೊಂಚ ಝೊಂಪು ಹತ್ತಿತು! ಅರ್ಜುನನಿಗೆ ನಿದ್ರೆ ಬರಲಿಲ್ಲ! ಕೇಳಿದ್ದ ವಿಷಯಗಳೆಲ್ಲ ಸುರುಳಿ ಸುರುಳಿಯಾಗಿ ಬಿಚ್ಚಿಕೊಂಡು, ದೃಶ್ಯದಂತೆ ಕಣ್ಣ ಮುಂದೆ ಹಾದು ಹೋಗಲಾರಂಭಿಸಿದ್ದವು... ಬೆಳಗಿನ ಝಾವ ಮತ್ತೆ ಪ್ರಯಾಣ ಹೊರಟ. ಮೊದಲರಾತ್ರಿ ಕೇಳಿಬಂದ "ಅರ್ಜುನ! ಓ ಅರ್ಜುನ! ಇನ್ನೂ ಬರಲಿಲ್ಲ" ಎಂಬ ಧ್ವನಿ ತನ್ನ ಕಿವಿಗೆ ಕೇಳಿ, ದಿಗ್ಗನೆ ಅರ್ಜುನ ಎದ್ದು ಕುಳಿತ!... ಇನ್ನು ಸಂದೇಹ ಬರಲಿಲ್ಲ! "ಶ್ರೀಕೃಷ್ಣನಿಗೇನೋ ಆಗಿದೆ!.... ನನ್ನನ್ನು ಕರೆಯುತ್ತಿದ್ದಾನೆ!... ಸಕಾಲಕ್ಕೆ ಒದಗದ ತಾನು ಎಂಥ ಕೃತಘ್ನ!

ಎಂಥ ದುರ್ದೈವ!... ಇದೆಂಥ ವಿಧಿಲೀಲೇ!..." ಎನ್ನುತ್ತಾ "ಕೃಷ್ಣಾ! ಇದೋ, ಬಂದೆ!" ಎನ್ನುತ್ತಾ, ದಾರುಕನನ್ನೆಬ್ಬಿಸಿ, "ರಥಹೂಡು" ಎಂದ.

ದಾರುಕ ಹೂಡಿದ. ಅರ್ಜುನ ಕೇಳಿದ:"ದ್ವಾರಕೆಗೆ, ಸಮೀಪದ ಬೇರೆ ದಾರಿ ಇಲ್ಲವೇ?"

ದಾರುಕ ಚಿಂತಿಸಿ ಹೇಳಿದ:"ಇದೆ, ಪ್ರಭು! ದಸ್ಯು ಆಭೀರರ ಗ್ರಾಮಗಳ ಮೇಲೆ ಹಾದು ಹೋಗಬೇಕು, ಅಷ್ಟೆ! ಅದು ನನಗೆ ಸಮ್ಮತವಲ್ಲ!..."

ಅರ್ಜುನ:"ನಿನ್ನ ಸಮ್ಮತಿ ಯಾರಿಗೆ ಈಗಬೇಕು! ಒಡೆಯರು ಅಲ್ಲಿ ಆಪತ್ತಿನಲ್ಲಿದ್ದಾರೆ! ನಾವು ಬೇಗ ಊರು ಸೇರಬೇಕಲ್ಲವೇ?"

ದಾರುಕ:" ಹೌದು ಸ್ವಾಮಿ! ನನ್ನ ಸಮ್ಮತಿ ತಮಗೆ ಬೇಡ!... ಒಡೆಯರು ಆಪತ್ತಿನಲ್ಲಿರುವುದು ನಿಜ! ಆದರೆ, ಈ ರಥ ನಾಳೆಯೋ ನಾಳಿದ್ದೋ ಮತ್ತೆ ಹಸ್ತಿನಾವತಿಗೆ ಹೊರಡಬೇಕಾಗಿದೆ! ಮರೆತಿರಾ ಜೀಯ! ನೀವು ರಾಣೀವಾಸದವರನ್ನು ಅತ್ತ ಕರೆದೊಯ್ಯುವುದಿದೆ! ಈ ಗ್ರಾಮಗಳ ಸ್ತ್ರೀಯರನ್ನು ಸತ್ತ ಯಾದವರು ಕೆಡಿಸಿ, ಉಪಭೋಗಿಸಿ, ಈ ದಸ್ಯುಗಳನ್ನು ಕೆರಳಿಸಿದ್ದಾರೆ! ಮೊದಲೇ ಅವರಿಗೆ ದ್ವಾರಕೆಯ ಸಂಪತ್ತಿನ ಮೇಲೆ ಕಣ್ಣಿದೆ!! ಈಗ ಪ್ರಬಲ ಕಾರಣವೂ ಸಿಕ್ಕಿತು!... ನಾನೂ ತಾವೂ ಇತ್ತ ವಾಪಸ್ಸು ಬಂದಾಗ ಇವರು ನಮಗೆ ತೊಂದರೆ ಮಾಡದೇ ಬಿಡರು! ನಾವು ಇತ್ತ ಬರುತ್ತಿರುವುದಾಗಲಿ, ಹಸ್ತಿನಾವತಿಗೆ ಹೋಗುವುದಾಗಲಿ ಇವರಿಗೆ ತಿಳಿಯಬಾರದು!... ರಥಿಕ ಸ್ವಾಮಿಗೆ ಎಚ್ಚರಿಸಬೇಕಾದ್ದು ರಥಕುಟುಂಬಿಯ ಕರ್ತವ್ಯ!.... ಇದರ ಮೇಲೆ ನಿಮ್ಮ ಚಿತ್ತ!"

ಅರ್ಜುನ ಯೋಚಿಸಿದ! ತನ್ನ ಕೈಯ್ಯಲ್ಲಿ ಗಾಂಡೀವವಿರುವವರೆಗೆ ಎಂಥದ್ದರ ಭಯ! ತಾನು ಕೃಷ್ಣನ ಆಪ್ತನಖನಲ್ಲವೇ? ಇದು ಕೃಷ್ಣಕೈಂಕರ್ಯವಲ್ಲವೇ? ಮೇಲಾಗಿ ತನ್ನ ಹಿಂದೆ ಸೈನ್ಯವೊಂದು ಮೂಲಬಲ ದ್ವಾರಕೆಯಿಂದ ಬರುವುದಲ್ಲವೇ?... ದಾರುಕನಿಗೆ ಇದನ್ನೇ ಹೇಳಿದ:

ಅರ್ಜುನ:"ಅಯ್ಯಾ ಸಾರಥಿ! ನಾನು ಕೃಷ್ಣ ಸಖ! ಈ ವರೆಗೆ ನಾನು ಸೋಲು ಕಂಡುದುಂಟೇ?... ನನ್ನ ಕೈಯ್ಯಲ್ಲಿ ಗಾಂಡೀವವಿರುವ ತನಕ ಹೆದರಬೇಡ! ಈ ಆಭೀರರನ್ನು ಒಂದು ಕೈ ನೋಡಿಬಿಡುತ್ತೇನೆ! ಮಹಾಭಾರತದ ವೀರನಿಗೆ ಇವರೆಷ್ಟು ಮಾತ್ರ! ಮೇಲಾಗಿ ದ್ವಾರಕೆಯ ಸೈನ್ಯ ನಮ್ಮನ್ನು ಹಿಂಬಾಲಿಸುವುದಲ್ಲವೇ?"

ದಾರುಕ:"ನಿಮ್ಮ ಲೆಕ್ಕ ನನಗೆ ಸರಿ ಕಾಣುತ್ತಿಲ್ಲ, ಜೀಯ! ದ್ವಾರಕೆಯಲ್ಲಿ ಈಗ ಯಾವ ಸೈನ್ಯವೂ ಇಲ್ಲ!... ಎಳೆ ವಯಸ್ಸಿನ ಬಾಲಕಕರು, ಬಾಲಕಿಯರು, ಇಳಿವಯಸ್ಸಿನ ಮುದುಕ ಮುದುಕಿಯರು ಮಾತ್ರವೇ ಇರುತ್ತಾರೆ! ಅವರು ನಿಮಗೆಂಥ ಬೆಂಬಲ ಕೊಟ್ಟಾರು? ನೀವು ಕಾಪಾಡಬೇಕಾದದ್ದು ಅವರನ್ನೇ. ಆಭೀರರು ಅಟ್ಟಿಸಿಕೊಂಡು ಬಂದರೆ 'ಓಡು' ಎಂದರೂ ಓಡಲಾರದ ಅಶಕ್ತರು ಇವರು!... ಪ್ರಭು, ನಿಮಗೆ ಪ್ರತಿ ಆಡಿದೆನೆಂದು ಭಾವಿಸಬಾರದು!!.... ತಮಗೆ ಈ ವರೆಗೆ ಸೋಲು ಎಲ್ಲೂ ಉಂಟಾದುದಿಲ್ಲ! ನಿಜ! ಆದರೆ ಈಗ ನಿಮಗೆ ಅಗ್ನಿದತ್ತ ರಥ ಇರುವುದಿಲ್ಲ! ಶ್ರೀಕೃಷ್ಣ ಒಡೆಯರು ಪ್ರಾಯಃ ನಿಮ್ಮೊಡನಿರಲಾರರು! ದ್ವಾರಕೆಯನ್ನು ಬಿಟ್ಟು, ಸ್ವಜನರೆಲ್ಲ ಸತ್ತಮೇಲೆ, ನಿಮ್ಮೊಡನೆ ಬಂದಾರೆಂಬ ನಂಬಿಕೆ ನನಗಂತೂ ಇಲ್ಲ!... ಗಾಂಡೀವವು ಮಹಾ ಆಯುಧ ಹೌದು! ಆದರೆ ನೀವೀಗ ವೃದ್ಧರಾಗಿರುವಿರಿ!... ಆಭೀರದಸ್ಯುಗಳು ಯುವ ಪುಂಡರು! ಸಂಖ್ಯೆಯಲ್ಲೂ ವಿಪುಲವಾಗಿರುತ್ತಾ ಆರಾವಳೀ ಪರ್ವತ ಪ್ರಾಂತಮುದ್ದಗಲಕ್ಕೂ ಹರಡಿದ್ದಾರೆ! ಅವರ ಬೆಂಬಲವಾಗಿರುವ ಸಿಂಧು, ಸೌವೀರ, ಭಲ್ಲೂಕ ರಾಷ್ಟ್ರದವರು ಸೈಂಧವನ ಕಡೆಯಿದ್ದು, ತಮ್ಮ ಒಡೆಯನ ವಧೆಗಾಗಿ, ಸೇಡಿಗೆ, ನಿಮ್ಮ ಮೇಲೆ ಕಾಲಕಾಯುತ್ತಿರುವವರು... ಊಹೂಂ... ಈ ದಾರಿ ಸುರಕ್ಷಿತವಲ್ಲ. ಉದ್ದವಾದರೂ ಈ ಹಳೆಯದೇ ವಾಸಿ!...ನಿಮ್ಮ ಚಿತ್ತ!!"

ಅರ್ಜುನ ಆಲಿಸಿದ! ಸಾರಥಿಯ ಮಾತು ತುಂಬಾ ವಿವೇಕಯುಕ್ತವಾಗಿತ್ತು! ಆದರೆ... ಆದರೆ ಕೃಷ್ಣನನ್ನು ಬೇಗ ಕಾಣುವ ತವಕ ಅವನನ್ನು ಈ ಅಪಾಯದ ದಾರಿಯನ್ನೇ ಆರಿಸುವಂತೆ ಪ್ರೇರಿಸಿತು.

"ಅಪಾಯ ಬಂದಾಗ ಕೃಷ್ಣ ಕೈ ಬಿಡುವುದಿಲ್ಲ!" ಎಂಬ ಧೈರ್ಯದಿಂದ ಸಾರಥಿಗೆ ಆ ಹತ್ತಿರದ ದಾರಿಯನ್ನೇ ಆರಿಸುವಂತೆ ಆಜ್ಞಾಪಿಸಿದ.

ರಥ ಗಾಳಿಯಂತೆ ಹಾರುತ್ತಾ, ಆ ಕಾಡು ದಾರಿಯಲ್ಲೂ ಒಂದೇ ಸಮ ಓಡಿತು! ಎರಡೂ ಕಡೆಗಳಲ್ಲಿ ಎತ್ತರದ ಗುಡ್ಡಗಳು!... ಅಲ್ಲಿ ಇಲ್ಲಿ ಒಂದು ಮನೆಯಂತಹ ಆಕೃತಿ! ...ಗುಡ್ಡಗಳ ಮೇಲೆ ಸಮೃದ್ಧವಾದ ಗುಂಡುಕಲ್ಲುಗಳ ರಾಶಿ!... ಯಾರು ಹಿಂದೆ ಅಡಗಿಕೊಂಡಿದ್ದರೂ ಯಾರಿಗೂ ಕಾಣದಂತಹ ಸ್ಥಿತಿ! ಸುತ್ತ ಒಂದು ಗಿಡಮರವೂ ಇಲ್ಲ! ರಥ ಅತ್ತಿತ್ತ ಸರಿಯದಂತೆ ಕಿರಿದಾದ ರಥದ ಹಾದಿ! "ನಿಸ್ಸಹಾಯಕರು ಇಲ್ಲಿ ಸಿಕ್ಕಿಹಾಕಿಕೊಂಡರೆ!" ಎಂಬ ಪರಿವೆ ಅವನಿಗೆ. "ಆಗ್ನೇಯ, ವಾರುಣ, ಐಷೀಕ, ಯಮ, ಕೌಬೇರ, ಹಯಶಿರ... ಕೊನೆಗೆ ಬ್ರಹ್ಮಾಸ್ತ್ರಗಳು ಇದ್ದೇ ಇವೆಯಲ್ಲ! ತನ್ನ ರಥದ ತುಂಬಾ ನಾನಾ ಆಯುಧಗಳಿದ್ದುದನ್ನು ದಾರುಕನೂ ಆ ಸಾರಥಿಯೂ ಇದಕ್ಕೆ ಸಾಗಿಸಿ ಕಟ್ಟಿರುತ್ತಾರಲ್ಲ!" ಅರ್ಜುನ ಆಯುಧಗಳನ್ನು ನೋಡುತ್ತಾ ನೆಮ್ಮದಿಯ ನಿಟ್ಟುಸಿರಿಟ್ಟ!

ರಥ ಓಡಿತು, ಓಡಿತು, ಓಡಿತು... ಒಂದೂವರೆ ದಿನಗಳ ನಂತರ ರಥ ಪ್ರಭಾಸವನ್ನು ಹಾಯುತ್ತಿತ್ತು!..... ಪಿಂಡಾರಕ ಬಂದಿತು!.... ದೂರದಿಂದಲೇ ಮೂಗಿಗೆ ಕೊಳೆತ ಹೆಣಗಳ ವಾಸನೆ ಬಡಿದು, ಸ್ಮಶಾನವೇ ಅವನನ್ನು 'ಬಾ, ಅರ್ಜುನ' ಎಂಬಂತೆ ಸ್ವಾಗತಿಸಿದಂತಾಗಿತ್ತು. ಯಾವ ವೀರಾಧಿವೀರನ ಹೃದಯವನ್ನೂ ಒಡೆಯುವ ದೃಶ್ಯ, ಅದು!. ರಾಣೀವಾಸದವರು ಒಂದೇ ಸಮ ಅಳುತ್ತಿದ್ದರು! ಉಪವಾಸದಿಂದ ಗರ್ಗರೂ, ಬ್ರಾಹ್ಮಣರೂ ಸೊರಗಿ, ಅರ್ಜುನನ ಬರವನ್ನೇ ಕಾದಿದ್ದು, ಸ್ವಾಗತಿಸಿದರು!

ರಥವನ್ನು ನಿಲ್ಲಿಸಿ, ದಾರುಕ, ಅರ್ಜುನನಿಗೆ ವಂದಿಸಿ, ಶ್ರೀಕೃಷ್ಣನನ್ನು ಹುಡುಕುತ್ತಾ ನಡೆದ... ಗರ್ಗರು ನಡೆದುದೆಲ್ಲವನ್ನು ನಿಧಾನವಾಗಿ ವಿವರಿಸಿದರು... ಸೂರ್ಯ ಮಧ್ಯಾಹ್ನದ ನೆತ್ತಿಗೇರಿದ್ದ...

ದ್ವಾರಕೆಯ ಕಡೆಯಿಂದ ಎರಡು ಮುಚ್ಚಿದ ಪಲ್ಲಕ್ಕಿಗಳು ನಿಧಾನವಾಗಿ ಅರ್ಜುನನ ಬಿಡಾರದ ಬಳಿ ಬರುತ್ತಿದ್ದವು!... ಅರ್ಜುನ ಅದೇನೆಂದು ಕೇಳಿದ!... ಯಾರೂ ಉತ್ತರಿಸಲಿಲ್ಲ! ಪಲ್ಲಕ್ಕಿಗಳು ಬಳಿ ಸಾರಿದವು!... ನಡನಡುಗುವ ತಲೆಯ ಇಬ್ಬರು ವೃದ್ಧರು, ಶ್ರಮಪಡುತ್ತಾ ಅವುಗಳಿಂದ ಇಳಿದರು, ಒಂದು ವಸುದೇವ, ಇನ್ನೊಂದು ದೇವಕಿ!! ಆಳುಗಳು ಅವರನ್ನು ಎಬ್ಬಿಸಿ ನಿಲ್ಲಿಸಿ ನಿಧಾನವಾಗಿ ಕರೆತರಲು ಯತ್ನಿಸಿದರು!

ಅರ್ಜುನ ಓಡಿ ಅವರ ಪಾದಗಳಲ್ಲಿ ಬಿದ್ದು ಅಳುತ್ತಾ ಪಾದಗಳನ್ನು ನೆನೆಸಿದ!

*****

# ೧೭. ಯಾದವರ ಅನ್ವೇಷ್ಟಿ!

ವಸುದೇವ ದೇವಕಿಯರು ಅರ್ಜುನನನ್ನು ಸಂತೈಸಲು ಯತ್ನಿಸಿದರು! ಶ್ರೀಕೃಷ್ಣ ಮತ್ತು ಬಲರಾಮರ ನಿರ್ಯಾಣ ವಾರ್ತೆ ಅವರಿಗಾಗಲೇ ತಿಳಿದಿತ್ತು! ಅರ್ಜುನನಿಗೆ ಇನ್ನೂ ತಿಳಿದಿರಲಿಲ್ಲ!

ದಾರುಕ ಓಡೋಡಿ ಬಂದು ಶ್ರೀಕೃಷ್ಣನಿರುವ ತಾಣವನ್ನು ಪತ್ತೆ ಮಾಡಿದ್ದಾಗಿ ಹೇಳಿದ! ದಾರುಕ ಸಮಾಚಾರವನ್ನು ಪೂರ್ತಿ ಹೇಳಲಿಲ್ಲ!...ಹೇಗೆ ಹೇಳಿಯಾನು?... ಅರ್ಜುನ ಅವನೊಡನೆ ವೇಗವಾಗಿ ಧಾವಿಸುತ್ತಾ ಆ ವೃಕ್ಷಮೂಲವನ್ನು ಸೇರಿದ!... ಎದೆಯೊಡೆಸುವ ದೃಶ್ಯ ಕಾಣ ಬಂದಿತು! ಶ್ರೀಕೃಷ್ಣ ಪತ್ನಿಯರ ರೋದನ!!... ಆ ಗುಂಪಿನ ನಡುವೆ ಮರದಡಿಯಲ್ಲಿ ನೀಳವೂ, ಗಂಭೀರವೂ ಆದ ಶ್ರೀಕೃಷ್ಣನ ಆಜಾನುಬಾಹು ದಿವ್ಯಕಲ್ಯಾಣ ಶರೀರ ನಿದ್ರಿಸುವಂತೆ ಮಲಗಿದೆ!... ಮುಚ್ಚಿದ್ದರೂ ನೀಳವಾದ ಕಂಗಳ ಆ ಸೊಬಗು ಒಳಗೆ ಪರಮಾತ್ಮನಿಲ್ಲವೆಂಬುದನ್ನು ಎಷ್ಟೂ ಸೂಚಿಸುತ್ತಿರಲಿಲ್ಲ!... ದೇವತೆಗಳು ಮೇಲಿಂದ ಚೆಲ್ಲಿದ್ದ, ಬಾಡದ, ದಿವ್ಯ ಹೂಗಳ ರಾಶಿಯೇ ಅಲ್ಲಿತ್ತು! ಯಾವ ಮಾಮೂಲು ಒಡವೆಗಳೂ ಇಲ್ಲದೆ, ಆಯುಧಗಳನ್ನು ಧರಿಸದೆ, ನೀಳಕೇಶರಾಶಿಯನ್ನು ಈಗ ಕಿರೀಟವೂ ಅಲಂಕರಿಸದೆ, ನಿರಾಭರಣಸುಂದರನಾದ ಈ ನೀಲಮೇಘ ಶ್ಯಾಮನ ವಿರಕ್ತ ಶರೀರವೇ ಒಂದು ವೇದಾಂತವನ್ನು ಬೋಧಿಸುವಂತೆ ಕಾಣ ಬರುತ್ತಿತ್ತು! ಎದೆಯಲ್ಲಿ ಮಾತ್ರ ತಾಯಿ ಯಶೋದೆ ಎಂದೋ ಬಾಲ್ಯದಲ್ಲಿ, ದೃಷ್ಟಿ ಪರಿಹಾರಕ್ಕೆಂದು ಕಟ್ಟಿದ್ದ ಎರಡು ಹುಲಿಯುಗುರುಗಳೂ, ಇಂಥ ಇನ್ನೊಂದೆರಡು "ಮುಗ್ಧಾಭರಣಗಳು" ಕಾಣಬರುತ್ತಿದ್ದವು.

ಅರ್ಜುನ ಆ ದಿವ್ಯಶರೀರಕ್ಕೆ ಅಳುತ್ತಳುತ್ತಲೇ ಸಾಷ್ಟಾಂಗ ಮಾಡಿದ:

***ಸಖೇತಿ ಮತ್ವಾ ಪ್ರಸಭಂ ಯದುಕ್ತಂ***
***ಹೇ ಕೃಷ್ಣ ಹೇ ಯಾದವ, ಹೇ ಸಖೇತಿ!***
***ಅಜಾನತಾ ಮಹಿಮಾನಂ ತವೇದಂ....***

ಎಂಬ ತನ್ನ ಹಳೆಯ ಮಾತನ್ನು ಪುನರುಚ್ಚರಿಸುತ್ತಾ ಪ್ರದಕ್ಷಿಣೆ ಮಾಡಿದ!.... ಆ ದುಃಖವನ್ನು ಅವನೊಡನೆ ಹಂಚಿಕೊಳ್ಳಬಲ್ಲ ಹಳಬರಾರೂ ಅಲ್ಲಿರಲಿಲ್ಲ! ಪ್ರಿಯಶಿಷ್ಯ ಸಾತ್ಯಕಿಯೂ ಹೊರಟಾಗಿತ್ತು!..

ಅಣ್ಣ ಬಲರಾಮ ಯೋಗಾರೂಢನಾಗಿ ಕುಳಿತು ಪ್ರಾಣ ಬಿಟ್ಟ ಶರೀರದೆಡೆಗೆ ದಾರುಕ ಕರೆದೊಯ್ದ!...ಅರ್ಜುನ ತನ್ನ ಅಂತ್ಯ ಗೌರವವನ್ನು ಸಲ್ಲಿಸಿದ!.... ಗಾಂಧಾರಿಗೆ ಮನಸಾರೆ ಶಾಪ ಹಾಕಿದ!... ಅವಳು ಸತ್ತ ಮೇಲೂ ಅವಳ ಮಾತು, ಶಾಪ, ತಂದ ಈ ಅನರ್ಥವನ್ನು ನಿಂದಿಸಿದ!...

"ಕೌರವರು ಯಾರಿಗೂ, ಬದುಕಿರುವಾಗಲೂ ಸತ್ತಮೇಲೂ ಒಂದುಪಕಾರವನ್ನೂ ಮಾಡಲಿಲ್ಲ! ದುರ್ಜನರ ರೀತಿಯೇ ಇದು" ಎಂದು ಬೈದುಕೊಂಡ. ಧೃತರಾಷ್ಟ್ರ ಗಾಂಧಾರಿ ದುರ್ಯೋಧನರು ಆಕಾಶದಲ್ಲಿ ನಿಂತು ವಿಕಟವಾಗಿ ಗಹಗಹಿಸಿ ನಗುತ್ತಿರುವಂತೆ ಭಾಸವಾಯಿತು!... ಕೃಷ್ಣಪುತ್ರರ, ಪೌತ್ರರ, ದಾಯಾದರ, ಅಂಧಕ ಭೋಜವೃಷ್ಣಿಗಳ, ಹಿರಿಯರ, ಕಿರಿಯರ, ಶರೀರಗಳನ್ನು ಅಲ್ಲಲ್ಲಿ ನೋಡುತ್ತಾ ಅರ್ಜುನ ಆ ದೀರ್ಘ ಸ್ಮಶಾನವನ್ನು ಸುತ್ತಾಡಿದ!

ಹಲವು ಶರೀರಗಳಲ್ಲಿ ಕಂಗಳ ಗುಡ್ಡೆಯನ್ನು ಹದ್ದು ಕಾಗೆಗಳು ಕೊಕ್ಕಿ ಹಾಕಿದ್ದವು! ಕೆನ್ನೆಗಳ ಮಾಂಸಗಳನ್ನು ಹರಿದಾಡಿದ್ದವು! ನಾಯಿ ನರಿಗಳು ಶರೀರದ ಇತರ ಭಾಗಗಳನ್ನು ಕಿತ್ತು ತಿಂದೇ ಬಿಟ್ಟಿದ್ದವು!... ಇರುವೆಗಳೊಂದು ಕಡೆ, ನೊಣಗಳು,... ಆಯುಧಗಳಿಂದ ಬಡಿದಾಡಿ ಗಾಯಗಳಾದ ಕಡೆ, ಮರಣಾಂತಿಕವಾಗಿ ಏಟು ಬಿದ್ದ ಕಡೆ,ರಕ್ತ ಹರಿದು ಹೆಪ್ಪುಗಟ್ಟಿ ಭಯಾನಕವಾದ ದೃಶ್ಯಗಳಾಗಿದ್ದವು.

ಕೆಲವು ಶರೀರಗಳನ್ನು ಯಾರದೆಂದು ಪತ್ತೆ ಹಚ್ಚುವುದೇ ಆಗಲಿಲ್ಲ! ಅವರವರ ಆಭರಣಗಳಿಂದ ಕೆಲವರನ್ನು ಪತ್ತೆ ಹಚ್ಚಲಾಯಿತು!...

ಅರ್ಜುನನ ಅಪ್ಪಣೆಯಂತೆ ಕಳೇವರಗಳನ್ನು ಒಂದು ಕ್ರಮದಲ್ಲಿ ಹೊರತೆಗೆದು, ಗುರುತಿಸಿ, ಅರಮನೆಯ ಆಳುಗಳು, ಆದಷ್ಟು ಸ್ವಚ್ಛವಾಗಿ, ಬೇರ್ಪಟ್ಟ ಶರೀರಭಾಗಗಳನ್ನು ತಲೆ, ಕೈ, ಕಾಲು, ಎಷ್ಟು ಸಿಕ್ಕವೋ ಅವುಗಳೊಡನೆ ಕೂಡಿಸಿ, ಇಡುತ್ತಾ ಬಂದರು!... ಎಲ್ಲೆಲ್ಲೂ ದುರ್ವಾಸನೆ!..., ಆಳುಗಳು ಮೂಗುಬಾಯಿಗಳಿಗೆ ಬಟ್ಟೆ ಕಟ್ಟಿಕೊಂಡಿದ್ದರು!..., ಒಂದೇ ಎರಡೇ! ಸಾವಿರಾರು ಅಂಥ ಶರೀರಗಳು!... ಕೆಲಸ ಸಲೀಸಾಗಿರಲಿಲ್ಲ!..., ಹೆಂಡದ ವಾಸನೆ ಬೇರೆ!... ಯುವಕರ ಶರೀರಗಳನ್ನು ಹೊರತೆಗೆಯುವಾಗಂತೂ ಜನಸ್ತೋಮ "ಅಯ್ಯೋ!" ಎಂದುದ್ಗರಿಸುತ್ತಿತ್ತು! ಕೃಷ್ಣ ಪತ್ನಿಯರು ತಂತಮ್ಮ ಪುತ್ರರ ಕಳೇವರಗಳನ್ನು ಗುರುತಿಸುವಲ್ಲಿ ಯಶಸ್ವೀ ಆದರು!.. ಅದೇ ಪುಣ್ಯ!!... ಸತ್ತಮೇಲೆ, ಯಾರೆಂಬುದು, ಈ ದುಃಸ್ಥಿತಿಯಲ್ಲಿ ತಿಳಿಯುವಂತಾದರೂ ಆಯಿತಲ್ಲ!!... ಇವನೇ ಸಾಂಬ!..., ಇವನೇ ಚಾರುದೇಷ್ಣ!..., ಇವನೇ..., ಇವನೇ..., ಇವನೇ..., ಸತ್ತಮೇಲೆ ಯಾರು ಯಾರಾದರೇನು?... ಎಲ್ಲ ಒಂದು ಮಾಂಸದ ಮುದ್ದೆ.

ಸಂಜೆ ಸೂರ್ಯಾಸ್ತಕ್ಕೆ ಇನ್ನೂ ವೇಳೆ ಇರುವಾಗ ಈ ಶರೀರಗಳ ವಿಂಗಡನೆ ಮುಗಿಯಿತು!... ಯಾರದೆಂದೇ ಗುರುತಿಸಲಾಗದ ಶರೀರಭಾಗಗಳನ್ನೂ, ಬರೀ ಮುಂಡಗಳನ್ನೂ, ಮುಂಡಾಸುಗಳನ್ನೂ, ಬಟ್ಟೆಗಳನ್ನೂ, ಒಂದೆಡೆ ಗುಡಿಸಿ ರಾಶಿ ಮಾಡಲಾಗಿತ್ತು.

ಅಕ್ಕಪಕ್ಕದ ಹಳ್ಳಿಗಳಿಂದಲೂ, ಅರಮನೆಯ ಉಗ್ರಾಣದ ಕಟ್ಟಿಗೆಯ ದಾಸ್ತಾನಿನಿಂದಲೂ ಹೆಣಗಳನ್ನು ಸುಡುವುದಕ್ಕೆ ಬೇಕಾಗುವಷ್ಟು ಕಟ್ಟಿಗೆಗಳನ್ನು ತಂದಿದ್ದರು. ಶ್ರೀಗಂಧವಲ್ಲದೆ, ನಾನಾ ಜಾತಿಯ ಸುಗಂಧ ದ್ರವ್ಯಗಳೂ, ತೈಲಗಳೂ, ಕಸ್ತೂರಿ, ಅಗರು, ದಶಾಂಗ, ಮರದ ಹಾಲುಗಳೂ, ಸಾಂಬ್ರಾಣಿ ಮೊದಲಾದವೂ ಗಾಡಿ ಗಾಡಿಗಳಲ್ಲಿ ಸ್ಮಶಾನವನ್ನು ತಲುಪಿದ್ದವು. ಶ್ರೀಕೃಷ್ಣಪ್ರಭು, ಲೋಕಬಿಟ್ಟ ವಾರ್ತೆ ಆ ಕೆಲದಿನಗಳಲ್ಲಿ ಸುತ್ತಮುತ್ತಲೆಲ್ಲ ಹಬ್ಬಿ, ಯಾದವರ ಅಧೀನದ ರಾಜ್ಯದ ಎಲ್ಲೆಡೆಯಿಂದ ಕೋಟಿ ಕೋಟಿ ಜನ ಅಲ್ಲಿಗೆ ಬಂದಿದ್ದರು!...

* * *

ಎಲ್ಲ ಸಿದ್ಧಮಾಡಿ, ಅರ್ಜುನ, ಕೊನೆಯದಾಗಿ ವಸುದೇವರ ಬಳಿ ಬಂದು ಈ ಅಂತ್ಯ ಸಂಸ್ಕಾರ ನಡೆಸಲು ಅನುಮತಿ ಕೇಳಿದ ದೃಶ್ಯ ಎಲ್ಲರ ಕಂಗಳಲ್ಲೂ ನೀರು ತಂದಿತ್ತು! ಅನಿರುದ್ಧನ ಮಗು, ಪುಟ್ಟ ವಜ್ರ, ಅಲ್ಲಿ ಆಡುತ್ತಾ ಕುಳಿತಿದ್ದ! ಅವನಿಗೆ ಯಾವ ಅಧಿಕಾರವೂ ಆಗ ಪ್ರಾಪ್ತವಾಗಿರಲಿಲ್ಲ!..., ಅರ್ಜುನ ವಸುದೇವರ ಪಾದ ಮುಟ್ಟಿ ನಮಸ್ಕರಿಸಿದ!... ವಸುದೇವ ಅವನನ್ನು ಬಾಚಿ ತಬ್ಬಿಗೊಂಡು "ತಂಗಿಯ ಮಗನಾದರೂ ಒಬ್ಬ ಇದ್ದು, ಈ ವೇಳೆಗೆ ಒದಗಿದೆಯಲ್ಲ!...,ಮಗು ಈ ಉಪಕಾರವನ್ನು ಹೇಗೆ ತೀರಿಸಲಿ!... ತಂದೆ ಮಕ್ಕಳನ್ನು ಪಡೆಯುವುದೇ ಈ ಕಾರ್ಯಕ್ಕಾಗಿ!... ಅದು ಯಾರಿಗೂ ದೊರಕದೆ, ವಿಧಿ ನಿನ್ನನ್ನು ದೂರದಿಂದ ಬರಮಾಡಿತು! ನೋಡಿದೆಯಾ, ಅದರ ಪಕ್ಷಪಾತ!" ಎಂದು ಅತ್ತ.

ವಸುದೇವ: "ಮಗು, ಅರ್ಜುನ! ಈ ವೀರರು ದೊರೆಗಳನ್ನೂ, ದೈತ್ಯರನ್ನೂ, ಶತ್ರುಗಳನ್ನೂ ಸಹಸ್ರ ಸಂಖ್ಯೆಯಲ್ಲಿ ಗೆದ್ದರು, ಕೊಂದರು!... ಶೂರವೀರರಿಗೆ ಈಗ ಈ ಗತಿ ಬರಬಹುದೇ?... ತಾವು ತಾವೇ ಶತ್ರುಗಳಾಗಿ ಸಾಯುವುದೇ?... ಹಾಯ್!.., ಹೆಂಡಕ್ಕೆ ಧಿಕ್ಕಾರವಿರಲಿ!..., ಪ್ರದ್ಯುಮ್ನ,

ಸಾತ್ಯಕಿಯರು ನಿನಗೆ ಪ್ರಿಯಶಿಷ್ಯರಾಗಿದ್ದವರಲ್ಲವೆ?..., ನಿನ್ನಿಂದಲೇ ನಾನಾ ಅಸ್ತ್ರಶಸ್ತ್ರಗಳನ್ನು ಕಲಿತವರಲ್ಲವೇ?..., ಈ ಮಾರಣಹೋಮಕ್ಕೆ ಇವರೇ ನಾಂದಿ ಹಾಡಿದ ನೀಚರು!... ಆ ಅಯೋಗ್ಯ ಕೃತವರ್ಮನೊಬ್ಬ!..., ಇವರಲ್ಲಿ ಯಾರು ತಾನೇ ಬದುಕಿ ಉಳಿಯಲು ಯೋಗ್ಯರಿದ್ದರು?...,ಕೃಷ್ಣಪ್ರೀತಿಗೆ ಒಂದು ಕಾಲದಲ್ಲಿ ಪಾತ್ರರಾಗಿದ್ದ ಎಷ್ಟು ಜನ ವೀರರು ಇಂದು ಪ್ರಾಣಿಗಳಂತೆ ಸಡೆದು ಸತ್ತರು!!... ಅಕ್ರೂರನಿಗೆ ಈ ಕ್ರೂರ ಗತಿ ಬಂದಿತು ಹೇಗೆ?..., ಎಲ್ಲ ಆ ...ಡೆಯ ಶಾಪ!!... ಗಾಂಧಾರಿ!!...ಕುಲದ್ರೋಹಿ! ತನ್ನ ಮಕ್ಕಳೂ ಬಾಳಲಿಲ್ಲ!..., ನನ್ನ ಮಕ್ಕಳನ್ನೂ ಬಾಳಗೊಡಲಿಲ್ಲ!... ಇದಿರಲಿ, ಅರ್ಜುನ!..., ಶ್ರೀಕೃಷ್ಣ ಈ ಲೋಕ ಬಿಟ್ಟು ಹೊರಟನೆಂದರೆ ಹೇಗೆ ನಂಬಲಿ?... ಕಂಸನನ್ನು ನಿರಾಯುಧವಾಗಿ ಕೊಂದವನನ್ನು ಒಂದು ಬೇಡನ ಬಾಣ ಕೊಂದಿತೇ? ಶಿಶುಪಾಲನನ್ನು ಅಲ್ಲಿಂದಲ್ಲೇ ಪಾದತೊಳೆದ ತಟ್ಟೆಯಿಂದಲೇ ನಿಗ್ರಹಿಸಿದ ಶೂರ, ಹಾಗೆ ಸತ್ತನೇ?.., ಏಕಲವ್ಯ, ಕಾಶಿರಾಜ, ಗಾಂಧಾರರೂ, ವಿದೇಹರು, ಲೋಕದ ಸಮಸ್ತ ಅರಸರನ್ನೂ, ಯಾವ ಆಯುಧವೂ ಹಿಡಿಯದೆಯೇ ನಿಗ್ರಹಿಸಿದವನಿಗೆ ಈ ಗತಿಯೇ? ಅವನು ಮನಸ್ಸು ಮಾಡಿದ್ದರೆ ಈ ಅನ್ಯಾಯವನ್ನು ಸರಿಪಡಿಸಬಹುದಿತ್ತು, ಅರ್ಜುನ!..., ಅವನು ಬೇಕೆಂದೇ ಇದನ್ನೆಲ್ಲ ಉಪೇಕ್ಷಿಸಿದ!!.., ಬೇಕೆಂದೇ ಕೈಬಿಟ್ಟ!!..., ಋಷಿಗಳೂ ಕೊಂದರು!..., ಹುಡುಗರೂ ತೀಟೆ ಮಾಡಿದರು!.., ಯಾರನ್ನು ಬೈಯ್ಯಲಿ?.., ಪರೀಕ್ಷಿತನನ್ನು ಬದುಕಿಸಿದವನಿಗೆ ಇವರನ್ನು ಕಾಪಾಡುವುದಾಗಲಿಲ್ಲವೇ? ನನಗೆ ಹೀಗಾಗುವುದೆಂದು ಸೂಚಿಸಿಯೇ ಹೋದ, ನನ್ನ ಮಗ!! ನಾನರಿಯದೇ ಹೋದೆ!.., ನೀನು ಬರುವೆಯೆಂದೂ, ಎಲ್ಲ ಸರಿಮಾಡುವೆಯೆಂದೂ ಹೇಳಿಹೋದ!.., ಸರಿಮಾಡುವುದೆಂದರೆ ಇದೆಂದು ಆಗ ನನಗೆ ತಿಳಿಯಲಿಲ್ಲ, ನೋಡು, ಅರ್ಜುನ!.., ದ್ವಾರಕೆ ನೀರೆ ಮುಳುಗುತ್ತದೆಯಂತೆ!.., ಈ ಬಾಲವೃದ್ಧರನ್ನೂ ಅಂತಃಪುರವನ್ನೂ ಕಾಪಾಡುವರಾರು?.., ಈ ಐಶ್ವರ್ಯಕ್ಕೆ ಉತ್ತರಾಧಿಕಾರಿಗಳಾರು?..."

* * *

ಅಗ್ನಿಪುರುಷನ ನಾಲಗೆಗಳು ಗಗನವನ್ನು ಚುಂಬಿಸಿದ್ದವು! ಹಿಂದೆ ಗಂಗಾ ತೀರದಲ್ಲಿ ಕೌರವರ ಹೆಣಗಳನ್ನು ಸುಟ್ಟ ದೃಶ್ಯವೇ ಅರ್ಜುನನಿಗೆ ಮತ್ತೆ ಕಾಣಿಸಲಾರಂಭಿಸಿತು!..., ಎಷ್ಟು ಸುಗಂಧ ಹಾಕಿದರೇನು, ಹೆಣ ಹೆಣವೇ! ಕ್ರವ್ಯಾದಾಗ್ನಿಯ ವಾಸನೆ, ಹೋಮಧೂಮದ ಪರಿಮಳವಾದೀತೇ?...

ಗರ್ಗರೂ ಅವರ ಶಿಷ್ಯರೂ, ಸುತ್ತಲ ಅಗ್ರಹಾರದ ಬ್ರಾಹ್ಮಣರೂ ಸಹಸ್ರ ಸಹಸ್ರವಾಗಿ ಸೇರಿ ಈ ಯಾದವರ ಅಂತ್ಯ ಸಂಸ್ಕಾರವನ್ನು ಯಾವ ಕೊರತೆಯೂ ಇಲ್ಲದಂತೆ ನೆರವೇರಿಸಿದ್ದರು!...,

ಶ್ರೀಕೃಷ್ಣನ ಉರಿಯುತ್ತಿದ್ದ ಚಿತೆಯಲ್ಲಿ ರುಕ್ಮಿಣೀ, ಶೈಬ್ಯಾ, ಹೈಮವತೀ, ಜಾಂಬವತೀ ಎಂಬ ನಾಲ್ವರು ಸಹಗಮನ ಮಾಡಿಬಿಟ್ಟರು! ಯಾರು ಎಷ್ಟು ತಡೆದರೂ ಅವರು ಕೇಳಲಿಲ್ಲ!

ಸತ್ಯಭಾಮೆ ಮತ್ತು ಇತರ ನಾಲ್ವರು ವಾನಪ್ರಸ್ಥ ಶ್ರಾದ್ಧಗಳನ್ನು ಮಾಡಿಕೊಂಡು, ಸೂತಕಾದಿಗಳು ಕಳೆಯುವ ದಿನವನ್ನು ಕಾಯುತ್ತಿದ್ದರು... ಕಾಡಿಗೆ ಹೊರಟು, ಅಜ್ಞಾತವಾಗಿ ಪ್ರಾಣ ಬಿಡಲು!.., ಎಂಥ ಘೋರ!

* * *

ಆ ರಾತ್ರಿ, ಹೆಣಗಳನ್ನೆಲ್ಲ ಸುಟ್ಟಾದ ಮೇಲೆ, ವಸುದೇವ, ದೇವಕಿ, ವಜ್ರ, ಅರ್ಜುನ, ದಾರುಕ, ಗರ್ಗಾಚಾರ್ಯರು.. ಅರಮನೆಯ ಪರಿವಾರದವರು..., ಉಳಿದವರೂ ದ್ವಾರಕೆಯನ್ನು ಮತ್ತೆ ಸೇರಿದರು!

ಅರ್ಜುನ ಶ್ರೀಕೃಷ್ಣನ ಅರಮನೆಯಲ್ಲಿ ಆ ರಾತ್ರಿ ಕಳೆಯುತ್ತಾ, ಮುಂದಿನ ಕೆಲಸಗಳನ್ನು ಚಿಂತಿಸಲಾದ!.., ಕೃಷ್ಣಾಜ್ಞೆಯನ್ನು ನೆನೆದ!.., ದಾರುಕ ಎಲ್ಲವನ್ನೂ ವಿವರವಾಗಿ ಹೇಳಿದ್ದ!..., ನರಕನ ಸೆರೆಯಿಂದ ಬಿಡಿಸಿ ತಂದು ಪರಿಗ್ರಹಿಸಿದ್ದ ಹದಿನಾರು ಸಾವಿರ ಸ್ತ್ರೀಯರಿಗೆ "ನಾಳೆಯೇ ಹಸ್ತಿನಾವತಿಗೆ ಹೊರಡುವುದಿದೆ, ಸಿದ್ಧವಾಗಿರಿ" ಎಂದು ಆಜ್ಞೆಯಿತ್ತ! ಊರಲ್ಲಿ ಉಳಿದ ಯಾದವ ವೃದ್ಧರೂ ಬಾಲರೂ

ತಂತಮ್ಮ ವಸ್ತುಗಳೊಡನೆ ಅರ್ಜುನನ್ನು ನಾಳೆ ಹಿಂಬಾಲಿಸಬೇಕೆಂದು ಢಂಗೂರ ಸಾರಲಾಯಿತು!... ಊರಲ್ಲಿ ಯಾರೂ ಉಳಿಯಬಾರದೆಂದೂ, ಇನ್ನು ಮೂರುನಾಲ್ಕು ದಿನಗಳಲ್ಲಿ ಇಡೀ ದ್ವಾರಕೆಯೇ ಸಮುದ್ರದಲ್ಲಿ ಮುಳುಗುವುದೆಂದೂ ಢಂಗೂರ ಸಾರಲಾಯಿತು!.., ಅರ್ಜುನನೊಡನೆ ಹಿಂಬಾಲಿಸಲಾಗದವರು ತಂತಮ್ಮ ಭವಿಷ್ಯಗಳನ್ನು ತಾವು ತಾವೇ ನೋಡಿಕೊಂಡು, ಸುತ್ತಮುತ್ತಲ ಗ್ರಾಮಗಳಿಗೋ, ನಗರಗಳಿಗೋ ಹೋಗಬೇಕೆಂದೂ ಸಹ!

ಇನ್ನು ಬೊಕ್ಕಸ!..., ಇಂದ್ರಪ್ರಸ್ಥ!... ತಾನೇ ಕಟ್ಟಿದ ಊರು!.., ಖಾಂಡವವನ್ನು ಸುಟ್ಟು, ಲೋಕ ಬೆಕ್ಕಸಬೆರಗಾಗುವ, ಮಯನಿರ್ಮಿತ ಸಭಾಭವನ ಇರುವ, ಅದ್ಭುತ ತಾಣ!..., ಕೌರವರು ಸತ್ತು, ತಾವು ಪಾಂಡವರು ಹಸ್ತಿನಾವತಿಗೆ ಬಂದ ಮೇಲೆ ಅಲ್ಲಿ ಯಾರೂ ಅರಸುಕುಲದವರು ವಾಸ ಇಲ್ಲ! ಅಲ್ಲಿಗೆ ವಜ್ರನನ್ನು ಕರೆದೊಯ್ದು ಪಟ್ಟಗಟ್ಟಿ, ಯಾದವರಿಗಧಿಪತಿಯನ್ನಾಗಿ ಮಾಡಬೇಕು!..., ಅದು ಕೃಷ್ಣಾಜ್ಞೆ!! ಅವನು ಪ್ರಬುದ್ಧನಾಗುವವರೆಗೆ ತನ್ನ ಮೊಮ್ಮಗ-ಪರೀಕ್ಷಿತ್ತು-ಅವನ ಉಸ್ತುವಾರಿ ನೋಡಿಕೊಳ್ಳಬೇಕು!.., ತಾವು ಪಾಂಡವರಾದರೂ ವಾನಪ್ರಸ್ಥರಾಗಿ ಲೋಕಬಿಡುವ ನಿಶ್ಚಯವನ್ನು ಧರ್ಮಪುತ್ರ ಮಾಡಿದ್ದನಲ್ಲವೇ?.. ಊರಿಗೆ ಹೋಗಿ ತಲುಪುವ ತನಕ ಈ ಮುದುಕರು ಜೀವಂತ ಇರಬೇಕಲ್ಲ!.., ಈ ಹುಡುಗರೋ?.., ಈ ಕನ್ಯೆಯರೋ?.., ಈ ನಿರ್ವಾಸಿತರನ್ನೆಲ್ಲ ಇಂದ್ರಪ್ರಸ್ಥ ಒಳಗೊಳ್ಳುವುದೇ?..., ಅಂದು ಅರಣ್ಯದಿಂದ, ತಮ್ಮ ತಂದೆ ಪಾಂಡುವನ್ನು ಕಳೆದುಕೊಂಡು ತಾವು ನಿರ್ವಾಸಿತರಾಗಿ, ನಿರಾಶ್ರಿತರಾಗಿ ಬಂದಾಗ, ತಮಗೆ ಆಶ್ರಯ ಕೊಟ್ಟ ಊರು ಈ ಇಂದ್ರಪ್ರಸ್ಥ!.., ಅದರ ಹಣೇಬರಹವೇ ಇದು!..., ಬಂದ ಬಂದ ನಿರಾಶ್ರಿತರಿಗೆಲ್ಲ ತಾಣ!.., ಈ ಬೊಕ್ಕಸವನ್ನು ಜೋಪಾನವಾಗಿ ಅಲ್ಲಿಗೆ ತಲುಪಿಸಲು ಈಗ ಸೈನ್ಯದ ರಕ್ಷಣೆ ಇಲ್ಲ! ಯಾವ ಸೈನ್ಯ?... ಎಲ್ಲಿಯ ಸೈನ್ಯ?... ಇದ್ದಬಿದ್ದವರನ್ನೇ ಸೈನಿಕರ ವೇಷಭೂಷಣ ತೊಡಿಸಿ, ಅರ್ಜುನ ಒಂದು ಸೈನ್ಯದಂತೆ ಮಾಡಿದ್ದ..

ಅರ್ಜುನ ಶ್ರೀಕೃಷ್ಣನ ಅರಮನೆಯನ್ನೆಲ್ಲ ಕೊನೆಯದಾಗಿ ಸುತ್ತಾಡಿ ಬಂದ!.., ಶ್ರೀಕೃಷ್ಣನ ಪೂಜಾಗೃಹದಲ್ಲಿ ಕೊಂಚ ನಿಮಿಷಗಳನ್ನು ಕಳೆದ!... ಚತುರ್ಭುಜನಾದ ಸುಂದರ ವಿಷ್ಣುಮೂರ್ತಿ ಶ್ರೀದೇವಿ ಭೂದೇವಿಯರೊಡನೆ ಆ ಆಗಾರದಲ್ಲಿ ಮೋಹಕವಾಗಿ ನಿಂತಿತ್ತು!.., ಅದರ ಇತಿಹಾಸವನ್ನು ಅರ್ಜುನ ಬಲ್ಲವನಾಗಿದ್ದ!.., ಶ್ರೀರಾಮಚಂದ್ರ ತನ್ನ ಆರಾಧ್ಯಮೂರ್ತಿ ಶ್ರೀರಂಗನಾಥನನ್ನು ವಿಭೀಷಣನಿಗೆ ಅನುಗ್ರಹ ಮಾಡಿ ಕೊಟ್ಟುಬಿಟ್ಟ ಮೇಲೆ ಆರಾಧಿಸುತ್ತಿದ್ದ ಇದೇ ಮೂರ್ತಿಯನ್ನು ಅಂದಿನಿಂದ 'ರಾಮಪ್ರಿಯ'ನೆನ್ನುತ್ತಿದ್ದರು!.., ರಾಮಕಾಲಾನಂತರ ಅದು ಕುಶನಿಗೆ ಬಂದಿತ್ತು!.., ಕುಶನಿಗೆ ಗಂಡುಮಕ್ಕಳಿಲ್ಲದೆ, ಅವನ ನಂತರ ಮತ್ತೆ ಅದು ಲವನ ಕೈಲಿ ಪೂಜೆ ಸ್ವೀಕರಿಸಿತ್ತು... ಲವನ ವಂಶದಲ್ಲಿ ಹೀಗೆ ತಲತಲಾಂತರದಲ್ಲಿ ಪೂಜಾ ಸ್ವೀಕಾರ ಮಾಡಿದ್ದ ಆ ದಿವ್ಯಮೂರ್ತಿ, ಕಾಲಕ್ರಮದಲ್ಲಿ ಸೂರ್ಯವಂಶ ನಶಿಸಲಾಗಿ, ಚಂದ್ರವಂಶದಲ್ಲಿ ಯದುವೀರರ ಪಾಲಿಗೆ ಬಂದು, ಈಗ "ಕೃಷ್ಣಪ್ರಿಯ"ನಾಗಿ ಈ ವರೆಗೆ ಪೂಜೆ ಪುನಸ್ಕಾರ* ಕಂಡಿತ್ತು! ಇದನ್ನು ಗೌರವದಿಂದ ಇಂದ್ರಪ್ರಸ್ಥಕ್ಕೆ ಒಯ್ದು ವಜ್ರನ ಕುಲದೇವರಾಗಿ ತಲುಪಿಸಬೇಕು!

ಆ ಮೂರ್ತಿಯ ಪಕ್ಕದಲ್ಲಿ ಒಂದು ದೊಡ್ಡ ಭಂಗಾರದ ಭರಣಿ! ಅರ್ಜುನ, ಮೈಲಿಗೆಯಲ್ಲಿ ಏನನ್ನೂ ಮುಟ್ಟುವಂತಿರಲಿಲ್ಲ!... ಆದರೆ ಆ ಭರಣಿಯಲ್ಲಿ ಏನಿತ್ತೆಂಬುದನ್ನು ಅವನು ಬಲ್ಲ! ಶ್ರೀಕೃಷ್ಣನ ನಿಜ ಅಧಿದೈವ ಅದೇ!... ಒಮ್ಮೆ ನಾರದರಿಗೆ ಶ್ರೀಕೃಷ್ಣ ಅದನ್ನು ಮುಚ್ಚಳ ತೆಗೆದೇ ತೋರಿಸಿದ್ದ:" ನಿನಗೂ ದೇವರಪೂಜೆಯೇ?... ಸರ್ವೇಶ್ವರ, ಏನಯ್ಯ, ನಿನ್ನ ನಾಟಕ?" ಎಂದು ನಾರದರು ಚೇಷ್ಟೆಯ ಮಾತುಗಳನ್ನು ಆಡಿ ಶ್ರೀಕೃಷ್ಣನನ್ನು ಕೆಣಕಿದ್ದರು. ಶ್ರೀಕೃಷ್ಣ ಭರಣಿ ತೆಗೆದೇ ತೋರಿಸಿದ್ದ! ಯಾವ

*ಇದೇ ಮೂರ್ತಿಯೇ ಈಗ ಚೆಲುವನಾರಾಯಣನೆಂಬ ಅಭಿಧಾನದಿಂದ 'ಶೆಲ್ವಪ್ಪಿಳ್ಳೆ' ಎಂದು ಕರೆಯಲ್ಪಡುತ್ತಾ ಈಗಿನ ಮೇಲುಕೋಟೆ (ಅಂದಿನ ಯಾದವಾದ್ರಿ)ಯಲ್ಲಿ ಪೂಜೆ ಸ್ವೀಕರಿಸುತ್ತಿದೆ. ಮುಸಲ್ಮಾನರು ಕೊಂಡೊಯ್ದಿದ್ದ ಇದನ್ನು ಮತ್ತೆ ಅಲ್ಲಿ ಪ್ರತಿಷ್ಠಾಪಿಸಿದವರು ಶ್ರೀ ರಾಮಾನುಜಾಚಾರ್ಯರು. ಈ ಮೂರ್ತಿಯ ಇತಿಹಾಸ "ಯಾದವಾಚಲಮಾಹಾತ್ಮ್ಯ"ದಲ್ಲಿದೆ!!

ಮೂರ್ತಿಯೋ, ಸಾಲಿಗ್ರಾಮವೋ ಅಲ್ಲಿರದೇ, ಬರೀ ಮಣ್ಣಿನ ಹುಡಿ ಇತ್ತು!! "ಏನಿದು?" ಎಂದ ನಾರದರಿಗೆ ಶ್ರೀಕೃಷ್ಣ ಆಗ ಹೇಳಿದ್ದ: "ನನ್ನ ಭಕ್ತರ ಪಾದಧೂಳಿ, ಇದು. ಇದನ್ನು ದಿನಾ ಪೂಜಿಸುತ್ತೇನೆ" ಎಂದು. ಅರ್ಜುನ ಚಿಂತಿಸಿದ; ಇದನ್ನಾರು ಇನ್ನು ಪೂಜಿಸುವವರು?.., ಅರ್ಜುನ ಅಲ್ಲೆಲ್ಲಾ ಸುತ್ತಾಡಿ, ಅಪೂರ್ವ ವಸ್ತುಗಳನ್ನೆಲ್ಲ ರಕ್ಷಿಸಿ ಇಂದ್ರಪ್ರಸ್ಥಕ್ಕೆ ಕೊಂಡೊಯ್ಯಲು ಏರ್ಪಡಿಸಿದ್ದ!... ರಾತ್ರಿ ಕಳೆಯುತ್ತಾ ಬಂದಿತ್ತು!..

***

ಒಂದು ವಾರದಿಂದ ವಸುದೇವ ದೇವಕಿಯರು ಏನನ್ನೂ ಉಂಡಿರಲಿಲ್ಲ! ಮೊದಲೇ ವೃದ್ಧರು, ಅಶಕ್ತರು!... ಈಗ ಸಂತಪ್ತರು!... ಜೀವಿತಾಶೆ ಕಳಕೊಂಡಿದ್ದವರು...

ಉಷ: ಕಾಲಕ್ಕೆ ಪೂರ್ವದಲ್ಲಿ ದೇವಕಿ, ಕೃಷ್ಣಸ್ಮರಣೆಯೊಂದಿಗೆ, ಗಂಡನ ಮಡಿಲಲ್ಲಿ ಕೊನೆಯುಸಿರೆಳೆದಳು!!..., ಇದಾದ ಕೆಲವೇ ನಿಮಿಷಗಳಲ್ಲಿ ವಸುದೇವನೂ ಯೋಗ ಮಾರ್ಗದಿಂದ ಪ್ರಾಣವನ್ನು ಬಿಟ್ಟ!..., ಅತ್ತ ಉಗ್ರಸೇನ... ಯಾರೂ ಕೇಳುವರಿಲ್ಲದೆಯೇ ಸತ್ತು ಒಂದು ದಿನವಾಗಿತ್ತು!.. ಅಯ್ಯೋ!.., ಮತ್ತೆ ಅರ್ಜುನ ಈ ಶರೀರಗಳನ್ನು ದ್ವಾರಕೆಯ ಸಮುದ್ರ ತೀರದ ಸ್ಮಶಾನದಲ್ಲಿ ಸಂಸ್ಕರಿಸಿದ!

***

ಇನ್ನೊಂದು ದಿನ ಆಯಿತು! ಅಷ್ಟೊಂದು ಬೊಕ್ಕಸವನ್ನು ಸಾಗಿಸಲು, ಅರಮನೆಯಲ್ಲಿ ಆಳುಕಾಳು ಸಾಕಾಗದೆ, ಸುತ್ತಲಗ್ರಾಮದ ಜನರನ್ನು ಕೂಡಿಸಿಕೊಳ್ಳಬೇಕಾಯ್ತು!.., ಅರಮನೆಯ ರಥಗಳು ಆ ಪ್ರಮಾಣದ ವೃದ್ಧ ಸ್ತ್ರೀ, ಪುರುಷರನ್ನು, ಬಾಲರನ್ನು, ಕನ್ಯೆಯರನ್ನು, ಒಳಗೊಳ್ಳಲಿಲ್ಲ, ಆನೆ, ಕುದುರೆಗಳು ಸಾಕಾಗಲಿಲ್ಲ, ಒಂಟೆಗಳು ಸಾಲುಸಾಲಾಗಿ ಬಂದು ನಿಂತವು! ಸುತ್ತಲ ಯಾವ ಗ್ರಾಮದ ಯಾವ ಒಂಟೆಯೂ, ಎತ್ತೂ, ಬೆಲೆ ಕೊಟ್ಟು ಕೊಳ್ಳಲ್ಪಟ್ಟವು!...

ಶ್ರೀಕೃಷ್ಣ ಲೋಕಬಿಟ್ಟ ಏಳನೇ ದಿನ ಬಂದೇಬಿಟ್ಟಿತ್ತು! ಸಡಗರದಿಂದ ಯಾದವರಲ್ಲಿ ಉಳಿದವರೆಲ್ಲ ಈ ವಾಹನಗಳಲ್ಲಿ ಏರಿಸಲ್ಪಟ್ಟು, ಅರ್ಜುನನ ಬೆಂಗಾವಲಿನಲ್ಲಿ, ಕಾಡುಸೇನೆಯ ರಕ್ಷೆಯಲ್ಲಿ ಮೈಲಿಮೈಲಿಯ ಉತ್ಸವ, ಸೇನೆಯ ರೂಪದಲ್ಲಿ ಹೊರಟಿತ್ತು!

ಸುತ್ತಲ ಊರುಗಳವರು, ಊರು ಬಿಟ್ಟ ಈ ನಿರಾಶ್ರಿತರನ್ನು ಕಂಡು "ಕೃಷ್ಣನೊಡನೆ ಬಂದವರು! ಅವನನ್ನು ಬಿಟ್ಟು ಹೊರಟವರು!.. ಯಾರಿಗೆ ಯಾವುದು ಶಾಶ್ವತ!" ಎನ್ನುತ್ತಾ ಕಣ್ಣೀರು ಮಿಡಿಯುತ್ತಿದ್ದರು...

ಮುಂದೆ... ಎಲ್ಲಕ್ಕಿಂತ ಮುಂದೆ.. ವಾದ್ಯ ಬಾರಿಸುವವರು... ತಮಟೆ ಹೊಡೆಯುವವರು... ಆಮೇಲೆ ಒಂದು ಸಣ್ಣ ತುಕಡಿ ಸೈನ್ಯ... ಅದರ ಹಿಂದೆ ವೃದ್ಧರ ಗಾಡಿಗಳು, ರಥಗಳು.., ಆಮೇಲೆ ವೃದ್ಧೆಯರು, ಆಮೇಲೆ ಶ್ರೀಕೃಷ್ಣಪೂಜಾಗ್ರಹದ ಅಧಿದೈವಗಳು. ಅದರ ಹಿಂದೆ ಬ್ರಾಹ್ಮಣರ ವಾಹನಗಳು.. ಅದರ ಹಿಂದೆ.. ಶ್ರೀಕೃಷ್ಣ ಪತ್ನಿಯರು.. ನರಕನ ಸೆರೆಯಲ್ಲಿದ್ದು ಬಿಡಿಸಲ್ಪಟ್ಟು ಕೈಹಿಡಿಯಲ್ಪಟ್ಟ ಈಗ ನಿರ್ಭಾಗ್ಯೆಯರಾದ ಅನಾಥರು!.. ಇದೇ ಈ ಮೆರವಣಿಗೆಯ ಪ್ರಧಾನ ಭಾಗವಾಗಿತ್ತು!.. ಇದರ ಸುತ್ತ ಬಿಚ್ಚುಗತ್ತಿಯ ಪಹರೆಯ ಪುಟ್ಟ ಸೈನ್ಯ! ಬಿಲ್ಲು ಬಾಣ ಹಿಡಿದ ಅಲ್ಪ ಸೈನ್ಯವೂ ಅದರ ಸುತ್ತ ಇತ್ತು! ಸ್ವಯಂ ಅರ್ಜುನನೇ ಅದರ ಮೇಲ್ವಿಚಾರಕನಾಗಿ ಉತ್ತಮ ಅಶ್ವವನ್ನೇರಿ ಉಸ್ತುವಾರಿ ನೋಡಿ ಬರುತ್ತಿದ್ದ!... ಹಿಂದೆ ಅರಮನೆಯ ಆಳುಕಾಳುಗಳು... ಅದರ ಹಿಂದೆ ಬೊಕ್ಕಸ!... ಇದಕ್ಕೂ ಸೈನ್ಯದ ಸರ್ಪಗಾವಲು!... ಸಿಕ್ಕವಾಹನ, ಪ್ರಾಣಿಗಳ ಮೇಲೆಲ್ಲಾ ಆ ಅಪಾರ ಐಶ್ವರ್ಯವನ್ನು ಹೇರಲಾಗಿತ್ತು!... ಈ ಎಲ್ಲ ಪಯಣಿಗರಿಗೆ ಬೇಕಾದ ಆಹಾರದಾಸ್ತಾನು, ಅಡಿಗೆಯವರು, ಪರಿಚಾರಕರು, ದಾರಿಯಲ್ಲಿ ಅಡಿಗೆಗಾಗಿ, ಪಾತ್ರೆ ಪರಡಿಗಳು, ... ಇಂಧನ ಸಾಮಗ್ರಿ..,ಈ ಆಹಾರರಕ್ಷಕ ಪುಟ್ಟಪಡೆ..., ಹೀಗೆ

ದೊಡ್ಡ ಮೆರವಣಿಗೆಯಾಗಿ ಈ ನಿರಾಶ್ರಿತ ಸೇನೆ ಹಸ್ತಿನಾವತಿಯತ್ತ ಹೊರಟಿತ್ತು!... ಕೃಷ್ಣನ ಗೋವುಗಳು, ಗೋರಕ್ಷಕರು, ಹೀಗೆ... ಎಲ್ಲರಹಿಂದೆ...

ಸತ್ತವರನ್ನು ಸುಟ್ಟು ಎರಡೇ ದಿನದಲ್ಲಿ ಹೊರಟ ಅರ್ಜುನ, ಉಳಿದ ಇವರ ಕ್ರಿಯೆಗಳನ್ನು ಹಸ್ತಿನಾವತಿಯಲ್ಲೇ ಯಮುನಾತೀರದಲ್ಲಿ ಮಾಡಿಸಲು ಉದ್ದೇಶಿಸಿದ್ದ!

ಅರ್ಜುನನ ಜೊತೆಗೆ, ಇನ್ನೊಂದು ಉತ್ತಮ ಕುದುರೆಯನ್ನೇರಿ, ಮಾರ್ಗದರ್ಶನ ಮಾಡುತ್ತಾ ಬರುತ್ತಿದ್ದವನು ದಾರುಕ!

ಎಷ್ಟು ಸಲ ಆ ಪಥದಲ್ಲಿ ಕೃಷ್ಣನನ್ನು ದ್ವಾರಕೆಯಿಂದ ಹಸ್ತಿನಾವತಿಗೆ, ಅಲ್ಲಿಂದ ಇಲ್ಲಿಗೆ ಕರೆದೊಯ್ದಿದ್ದನೋ!

ದ್ವಾರಕೆಯ ನೆನಪುಗಳು-ಸುಭದ್ರೆಯನ್ನು ತಾನು ಕೈಹಿಡಿದದ್ದು ಮೊದಲು-ಎಲ್ಲ ಅರ್ಜುನನ್ನಾಕ್ರಮಿಸಿ, ಮಾತುಬಾರದ ಮೂಕವೇದನೆಯೊಂದು ಒಳಗೇ ಅವನನ್ನು ಹಿಂಡುತ್ತಿತ್ತು!

ದಾರುಕನ ಚಿಂತೆ ಬೇರೆಯೇ ಇತ್ತು!.. ಈ ಯಾತ್ರೆ ಸುಗಮವಾಗಿ ಆದರೆ ಸಾಕು!.. ಶಕುನಗಳು ಸರಿ ಇಲ್ಲ!.. ದಾರಿ ಎಲ್ಲ ವಿಧದಲ್ಲೂ ಅನುಕೂಲವಿಲ್ಲ!...

* * *

ಮುಂಚೂಣಿಯ ರಸ್ತೆ ಸರಿಯಾಗಿ ಸುಗಮವಾಗಿದೆಯೋ ಇಲ್ಲವೋ ನೋಡಿಬರಲು ಆಗಾಗ ಅರ್ಜುನ ಕುದುರೆಯ ಮೇಲೆ ಮುಂದೆ ಧಾವಿಸಿ, ಮತ್ತೆ ಹಿಂದಿರುಗಿ, ಸೈನ್ಯ ನಡೆಯಲು ಅನುಮತಿ ಇಡುವನು! ಹಿಂದೆ ಹೋಗಿ ನೋಡಿ, ಸ್ತ್ರೀಯರು ಸುರಕ್ಷಿತವೇ, ಆಹಾರ ಸುರಕ್ಷಿತವೇ, ಹಿಂದೆ ಯಾರೂ ಶತ್ರುಗಳು ಹಿಂಬಾಲಿಸಲಿಲ್ಲವೇ, ಎಂದು ಎಚ್ಚರವಹಿಸಿ, ತಾನೇ ನೋಡಿ ಬರುವನು! ಹಾಗೆ ಒಮ್ಮೆ ಮುಂದೆ ನಡೆದಿದ್ದಾನೆ... ಸೈನ್ಯ ಪ್ರವಾಹ, ಮೆರೆವಣಿಗೆ ಇನ್ನೂ ಸಾವಿರ ಗಜ ಹಿಂದೆ ಇದೆ.. ರಸ್ತೆ ಏರಿನಲ್ಲಿರುತ್ತಾ ಒಂದು ತಿರುವು!..ಆ ತಿರುವಿನಲ್ಲಿ ಎಡಕ್ಕೆ ಒಂದು ದೊಡ್ಡ ಕೋಡು ಬಂಡೆ!.., ಅಲ್ಲಿ ಏರಿ ನಿಂತರೆ ದ್ವಾರಕೆಯ ಶಿಖರಪ್ರಾಯ ಮಾಳಿಗೆಗಳೂ, ದೇವಾಲಯಗಳೂ, ಮಹಲುಗಳೂ, ಊರಿನ ಪೂರ್ಣ ವಿಹಂಗಮ ನೋಟವೂ ಕಾಣಬರುತ್ತಿತ್ತು! ಸೈನ್ಯ ಅನುಸರಿಸುವ ತನಕ ವಿಶ್ರಾಂತಿಯೂ ಆಯಿತೆಂದು, ಕುದುರೆಯಿಂದಿಳಿದು ಅರ್ಜುನ ಕೋಡುಬಂಡೆಯತ್ತ ನಡೆದ!

ಅಲ್ಲೊಂದು ಬೃಹದಾಕಾರದ ರಣಹದ್ದು ಕುಳಿತಿತ್ತು!... ಮನುಷ್ಯ ಭಾಷೆಯಲ್ಲಿ ಅದು ಅರ್ಜುನನನ್ನು ಮಾತಾಡಿಸಿದ್ದು ಅವನಿಗೆ ಆಶ್ಚರ್ಯವಾದರೂ, "ಕಲಿಗಾಲ ಆರಂಭವಾಗಿದೆ! ಲೋಹಮೂರ್ತಿಗಳು ಬೆವರಬಹುದಾದರೆ, ದ್ವಾರಕೆಯೇ ಮುಳುಗಬಹುದಾದರೆ, ಈ ಹದ್ದೇಕೆ ಮಾತಾಡಬಾರದು!" ಎಂದುಕೊಂಡು ನಿಂತ. ಹದ್ದು ಅವನನ್ನು ಮಾತಿಗೆ ಎಳೆಯಿತು.

ಹದ್ದು:"ನೀನಾರಯ್ಯ, ವೀರಪುರುಷನಂತೆ ಕಾಣುವೆ?.. ಎತ್ತಲೋ ಪಯಣದಂತಿದೆ!"

ಅರ್ಜುನ:"ನಾನು ಪಾಂಡವ ವೀರ, ಅರ್ಜುನ! ಧರ್ಮಪುತ್ರನ ತಮ್ಮ!"

ಹದ್ದು: "ಓಹೋ! ನೀನೇಯೋ ಆ ಅರ್ಜುನ!... ಹೌದು, ನಿನ್ನ ಬಗೆಗೆ ಕೇಳಿಬಲ್ಲೆ!.. ನೀನು ವೀರನೆಂದೆಯಲ್ಲ!.. ಎಲ್ಲೆಲ್ಲಿ ಯುದ್ಧಮಾಡಿ ಗೆದ್ದಿರುವೆ?"

ಈ ಹದ್ದು ತಲೆಹರಟೆಯದೆಂದು ಅರ್ಜುನ ಸಿಟ್ಟಾದ! ಮಾತು ಬೇರೆ ಆಡುತ್ತಿದೆ, ಏನು ವಿಚಿತ್ರ! ಸುಮ್ಮನೆ ಇರುವಂತೆಯೂ ಇಲ್ಲ!

ಅರ್ಜುನ: "ನೀನಾವಾವ ಯುದ್ಧಗಳ ಬಗ್ಗೆ ಕೇಳಿರುವೆ?"

ಹದ್ದು: "ರಾಮಾಯಣದ ರಾಮ-ರಾವಣ ಯುದ್ಧ ಬಗ್ಗೆ ಕೇಳಿರುವುದು ಮಾತ್ರವಲ್ಲ!.. ನೇರವಾಗಿ ನಾನೇ ನೋಡಿ, ಹೆಣದೂಟವನ್ನು ಅನುಭವಿಸಿ, ತಿಂದು ತೇಗಿದ್ದೇನೆ!.., ಯುದ್ಧ ಎಂದರೆ ಅದು!! ಎಷ್ಟು ಹೆಣಗಳು!.., ಆ ರಾಮನ ಬಿಲ್ಲಿನ ಕೈಚಳಕಕ್ಕೆ ಯಾರು ಸಮವಾಗಬಲ್ಲರು!.."

ಅರ್ಜುನ: "ಏಯ್! ಮುದಿಹದ್ದೇ! ನೀನು ಹೇಳುತ್ತಿರುವುದು ರಾಮಾಯಣದ ಕಾಲ! ಅದು ತ್ರೇತಾಯುಗ!! ಈಗ ನಾವಿರುವುದು ದ್ವಾಪರಯುಗದ ಕೊಟ್ಟ ಕೊನೆ!... ಮಹಾಭಾರತ ಯುದ್ಧದ ಬಗೆಗೆ ಕೇಳಿರುವೆಯಾ?"

ಹದ್ದು: "ಯಾವ ಮಹಾಭಾರತಯುದ್ಧ ಎನ್ನುವೆ?"

ಅರ್ಜುನ: " ಹನ್ನೊಂದು ಅಕ್ಷೋಹಿಣಿಸೇನೆಯ ಕೌರವರನ್ನೆಲ್ಲ ನಾನೊಬ್ಬನೇ ಕೊಂದ ವೀರಾಧಿವೀರ! ಅರ್ಜುನ! ಈ ಯುದ್ಧವೆಲ್ಲಿ? ರಾಮಾಯಣದ ಕಪಿ ಕರಡಿ-ರಾಕ್ಷಸ ಯುದ್ಧವೆಲ್ಲಿ?.."

ಹದ್ದು: "ನಾನು ಆ ಮಹಾಭಾರತ ಯುದ್ಧಕ್ಕಾಗಿ ಕಾದಿರುವೆನಪ್ಪ! ಮುದುಕನಾದ ನನಗೆ ತಿಳಿಸಿ, ಕರೆದು, ಹೆಣಗಳ ಔತಣವನ್ನು ಮಾಡುವವರಾರು? ಮೃಷ್ಟಾನ್ನ ತಿಂದು ಯುಗವೇ ಆಗಿದೆ!"

ಅರ್ಜುನ: "(ಗಹಗಹಿಸಿ ನಕ್ಕು) ಎಲ್ಲೈ ಬೆಪ್ಪೆ! ಅದೀಗ ಮುಗಿದು, ಇಕೋ ಯಾದವರೂ ಕಾದಾಡಿ ಮಡಿದಾಗಿದೆ! ಇನ್ನು ಮಹಾಭಾರತ ಯುದ್ಧವನ್ನು ನಿರೀಕ್ಷಿಸಬೇಡ."

ಹದ್ದು: "ಏನಂದೆ! ಆ ಯುದ್ಧ ಮುಗಿಯಿತೇ?.. ಎಲ್ಲಿ, ಯಾವಾಗ ನಡೆಯಿತು?"

ಅರ್ಜುನ: "ಮುವ್ವತ್ತಾರು ವರ್ಷಗಳ ಹಿಂದೆ.. ಕುರುಕ್ಷೇತ್ರದಲ್ಲಿ ನಡೆಯಿತು!.. ಪಾಂಡವರಾದ ನಮ್ಮ ಕಡೆ, ಶ್ರೀಕೃಷ್ಣನನ್ನು ಸೇರಿ, ನಾವ್ಯೆವರೂ, ಕೌರವರ ಕಡೆ ಮೂವರು ಕೃಪಾಶ್ವತ್ಥಾಮ ಕೃತವರ್ಮರೂ ಉಳಿದೆವು. ಅಷ್ಟು ಘೋರ ಯುದ್ಧವನ್ನು ನೀನೆಂದೂ ಕಂಡಿರಲಿಕ್ಕಿಲ್ಲ!... ಆಗ ಅಲ್ಲಿ ಹೋಗಿರಲಿಲ್ಲವೇ?"

ಹದ್ದು: "ಓ!... ಅದೋ!... ಆ ಪುಟ್ಟಜಗಳವನ್ನು ಕುರಿತು ಹೇಳುವೆಯಾ?... ಯಾವ ಹದ್ದಿಗೂ, ನನಗೆ ಬಿಡು-ಏನೂ ಸಾಕಷ್ಟು ಆಹಾರ ಸಿಗದ ಅದನ್ನು ನಾನೊಂದು ಯುದ್ಧವೆನ್ನುವೆನೇ? ಬೀದಿಯಲ್ಲಿ ಮಕ್ಕಳ ಜಗಳದಂತೆ ಬೇಗ ಮುಗಿದೇ ಬಿಟ್ಟಿತಂತೆ!.. ನಮ್ಮ ಬಾಂಧವ ಹದ್ದುಗಳೆಲ್ಲ ಸೇರುವ ವೇಳೆಗೆ ಯುದ್ಧವೇ ಮುಗಿಯಿತಂತೆ!... ನೀನು ಹೇಳುವುದು ಅದನ್ನೇ?.."

ಅರ್ಜುನನಿಗೆ ಮಿತಿಮೀರಿ ಸಿಟ್ಟು ಬಂತು!... ಮುದಿ ಹದ್ದು ತನ್ನನ್ನಣಕವಾಡುತ್ತಿರುವುದು ಅವನಿಗೆ ಎಷ್ಟೂ ಹಿಡಿಸಲಿಲ್ಲ!... ತಿಳುವಳಿಕೆ ಇಲ್ಲದ ಪ್ರಾಣಿಯೊಂದು, ಪಕ್ಷಿಯೊಂದು, ಹೀಗೆ ವೀರಾಧಿವೀರನಾದ ತನ್ನನ್ನು ತನ್ನೆದುರೇ ದೂಷಿಸುವುದೇ?.. ತುಟಿ ಕಚ್ಚಿ ಸಹನೆಯಿಂದ, ಕೋಪ ತಡೆದು ನಿಂತ!... ಅತ್ತ ದ್ವಾರಕೆಯತ್ತ ದೃಷ್ಟಿ ಹಾಯಿಸಿದ!... ಸೂರ್ಯ ಮುಳುಗಲು ಅರ್ಧಗಳಿಗೆ ವೇಳೆಯಿತ್ತು!... ತನ್ನ ಅನುಚರ ಸೇನೆ ನಿಧಾನವಾಗಿ ಗುಡ್ಡ ಹತ್ತುತ್ತಿತ್ತು!... ಹದ್ದು ತನ್ನ ಪರಿಹಾಸ್ಯವನ್ನು ಮುಂದುವರೆಸಿತ್ತು.

ಹದ್ದು: "ಶ್ರೀಕೃಷ್ಣನೇ, ಯಾವ ಆಯುಧವನ್ನು ಹಿಡಿಯದೇ ಈ ಯುದ್ಧವನ್ನು ಮಾಡಿ ಮುಗಿಸಿದನಂತಲ್ಲ! ನಿನ್ನ ಪಾತ್ರ ಇದರಲ್ಲಿ ಎಷ್ಟು? ಎಂತು?"

ಅರ್ಜುನ: "ಎಲೆ ಮೂಢಪಕ್ಷಿಯೇ! ಶ್ರೀಕೃಷ್ಣ ನನ್ನ ರಥದ ಸಾರಥಿಯಾಗಿ ದುಡಿದ! ಅಷ್ಟೇ ಅವನ ಪಾತ್ರ!... ಅದನ್ನೇನೋ ಶ್ರದ್ಧೆಯಿಂದ ಚೆನ್ನಾಗಿ ಮಾಡಿದ!.. ಯುದ್ಧ ಮಾಡಿದವನು ನಾನು!! ಗೆದ್ದ ವೀರನನ್ನು ಪ್ರಶಂಸಿಸದೇ, ಅವನನ್ನು ತೆಗಳಿ, ಈ ಸಾರಥಿಯನ್ನು ಹೊಗಳುವೆಯಲ್ಲ!... ನಿನಗಾರೋ ತಪ್ಪು ಮಾಹಿತಿಯನ್ನು ಕೊಟ್ಟಿರಬೇಕು!.... ನಿಲ್ಲಿಸು ನಿನ್ನ ಅಪಲಾಪವನ್ನು!"

ಹದ್ದು: "ಇಲ್ಲಪ್ಪ! ನಾನು ಅಪಲಾಪ ಮಾಡುತ್ತಿಲ್ಲ! ನನಗೇಕೆ ಬೇಕು ನಿಮ್ಮ ಕೌಟುಂಬಿಕ ಕಲಹ ವಾರ್ತೆ? ಯಾರೋ ಹೇಳಿದರು... ನೀನು ಯುದ್ಧಕ್ಕಂಜಿ ಓಡುವುದರಲ್ಲಿದ್ದೆಯೆಂದೂ, ಆಗ ಕೃಷ್ಣ ನಿನಗೆ ಉಪದೇಶ ಕೊಟ್ಟು ಕರ್ತವ್ಯ ಕರ್ಮದ ಶ್ರೇಷ್ಠತೆಯ ಬಗ್ಗೆ ಎಚ್ಚರಿಸಿ, ನಿನ್ನ ಕೈಲಿ ಮಾಡಿಸಿದನೆಂದೂ,... ಆದ್ದರಿಂದ ಮಾಡಿಸಿದವನು ಅವನೆಂದೂ, ನೀನು ಬರೀ ಅವನ ಸೇವಕನೆಂದೂ... ಹೇಳಿದರು!... ಈಗ ಹೇಳು, ಯುದ್ಧ ಮಾಡಿಸಿದವನು ಅವನೋ, ನೀನೇ ಮಾಡಿದೆಯಾ?"

ಅರ್ಜುನ ಚಕಿತನಾಗಿ ಹದ್ದನ್ನು ಚುರುಕಾಗಿ ನೋಡುತ್ತಾನೆ! ಇದರಲ್ಲೇನೋ ಮರ್ಮವಿದೆ ಎಂಬಂತಾಗಿ ಈಗ ಕೊಂಚ ತಗ್ಗಿಯೂ ತನ್ನ ಪಟ್ಟು ಬಿಡದೆ ಹೇಳುತ್ತಾನೆ.

ಅರ್ಜುನ: "ಯುದ್ಧಾರಂಭದಲ್ಲಿ ನನಗೆ ಕೌರವರನ್ನು ಕಂಡು ಕರುಣೆ ಆದದ್ದು ನಿಜ! ಅದು ಮಂಕಲ್ಲ!! ಆಗ ಶ್ರೀಕೃಷ್ಣ ನನಗೆ ಏನೇನೋ ಉಪದೇಶಕೊಟ್ಟು ಹುರಿದುಂಬಿಸಿದ, ಅಷ್ಟೆ!"

ಹದ್ದು: "ಹಾಗಲ್ಲವಪ್ಪ!... ನಾನು ಕೇಳಿದ್ದು ಹೀಗೆ.. 'ನೀನು ನನ್ನ ಉಪಕರಣವಾಗು' "ನಿಮಿತ್ತ ಮಾತ್ರಂ ಭವ" ಎಂದು ಅವನಂದನಂತೆ... ಅದಕ್ಕೆ ತಿಳಿಯದೇ ನೀನೇನೋ ಅಂದದ್ದಕ್ಕೆಲ್ಲ ಉತ್ತರಿಸಿ, ಕೊನೆಗೆ ನೀನೇ 'ಕರಿಷ್ಯೇ ವಚನಂ ತವ' 'ನಿನ್ನ ಮಾತನ್ನು ಕೇಳುತ್ತೇನೆ' ಎಂದೆಯಂತಲ್ಲ! 'ನಷ್ಟೋ ಮೋಹ: ಸ್ಮೃತಿರ್ಲಬ್ಧಾ' ಎಂದೆಯಂತಲ್ಲ!... ಸಂಕೋಚ ಪಡಬೇಡ!... ನಿನಗೆ ಮಂಕು ಬಡಿಯದೆಯೇ, 'ನನ್ನ ಮಂಕು ಹೋಯಿತು, ಬುದ್ಧಿ ಬಂದಿತು' ಎಂದೆಯಾ?... ನೋಡು, ಸತ್ಯಕ್ಕೆ ಅಳಿವಿಲ್ಲ! ಒಣ ಹೆಮ್ಮೆ ಇರಬಾರದು! ... ಕರ್ಣನಿಗೆ ಗುರೂಪದಿಷ್ಟವಾದ ಎಲ್ಲ ಮಂತ್ರಗಳೂ ಅಸ್ತ್ರಶಸ್ತ್ರಗಳೂ ಮರೆತದ್ದು ಈ ಅಹಂಕಾರದಿಂದಲೇ ಅಲ್ಲವೇ? ಗುರುಸ್ಮರಣೆ ತಪ್ಪಬಾರದು!.. ಕೋಪಿಸಬೇಡ."

ಅರ್ಜುನನಿಗೆ ಮೈ ಬೆವರಿತು!.. ಈ ಹದ್ದು ಸಾಮಾನ್ಯವಲ್ಲ!... ಯಾವನೋ ಮಹಾಪುರುಷ ಈ ವೇಷದಲ್ಲಿ ತನ್ನನ್ನು ಪರೀಕ್ಷಿಸಲು ಬಂದಿರಬೇಕು!... ಗೀತೆಯ ವಾಕ್ಯಗಳನ್ನು ಅರ್ಥಗಳೊಡನೆ ಸರಿಯಾಗಿ ಪ್ರತಿಪಾದಿಸುವ ಇದು ಋಷಿಯೋ? ಮುನಿಯೋ?...ಯಕ್ಷನೋ? ಯಾರು?... ಚಿಂತಿಸಿದ!

ಹದ್ದು ಹೇಳಿತು: "ಅರ್ಜುನ! ನೀನು ಕುಂತೀಪುತ್ರನಲ್ಲವೇ? ನಿನ್ನ ಬಗ್ಗೆ ವಿನಯಶಾಲಿ, ಜಿತೇಂದ್ರಿಯ, ಕೃಷ್ಣಸಖ, ಉದಾರಿ, ಎಂದೆಲ್ಲ ಕೇಳಿದ್ದೆ. ಆದರೆ ನೀನು ನನ್ನೊಡನೆ ನಡಕೊಂಡ ರೀತಿ ಈ ಗುಣಗಳನ್ನು ತೋರಿಸುವುದಿಲ್ಲ!... ಕೃಷ್ಣಬಲವಿಲ್ಲದೆ ಯುದ್ಧವನ್ನು ನೀನೊಬ್ಬನೇ ಗೆದ್ದೆಯಾ? ಸರಿಯಾಗಿ ಹೇಳು!"

ಅರ್ಜುನ: "ಮಹಾನುಭಾವ! ನೀನಾರು, ಹೇಳು! ನನ್ನದು ತಪ್ಪಾಯಿತು!... ನೀನಾರು!"

ಹದ್ದು: "ಮತ್ತ: ಸ್ಮೃತಿ: ಜ್ಞಾನಂ ಅಪೋಹನಂ ಚ ಎಂದು ಹೇಳಿಕೊಂಡವನು! ನನ್ನಿಂದಲೇ ನೀನು ನೆನೆಯಬೇಕಾದುದನ್ನು ನೆನೆದು ಯುದ್ಧದಲ್ಲಿ ಗೆದ್ದೆ!... ಈಗ ಮರೆಯಬಾರದ್ದನ್ನು ನೀನು ನಿನ್ನ ಅಹಂಕಾರದಿಂದ ಮರೆತು ಸೋಲುವೆ!ಎಚ್ಚರಿಕೆ!! ನೀನು ಮರೆಯಬೇಕಾದ್ದನ್ನು ಮರೆಸಿ ನಿನಗೆ ಉಪಕಾರ ಮಾಡುವವನೂ ನಾನೇ!... ನನ್ನನ್ನು ಮರೆತರೆ ನೀನು ಎಲ್ಲವನ್ನೂ ಮರೆತಂತೆ!"

ಎನ್ನುತ್ತಾ ಹದ್ದು ಹಾರಿಹೋಯಿತು!.. ಅರ್ಜುನ ಅಂತರಿಕ್ಷವನ್ನು ನೋಡಿ ಶ್ರೀಕೃಷ್ಣನನ್ನು ನೆನೆದು ಹಲುಬಿದ!

... ಅತ್ತ ಸೂರ್ಯ ಮುಳುಗುತ್ತಿದ್ದ!... ಅರ್ಥ ತನ್ನ ಹಿಂಬಾಲಕ ಸೈನ್ಯ ಗುಡ್ಡ ಹತ್ತಿ ಮುಂದೆ ನಿಧಾನವಾಗಿ ಹೊರಟಿತ್ತು!... ಇತ್ತ ದ್ವಾರಕೆ ನಿಧಾನವಾಗಿ ಸಮುದ್ರದಲ್ಲಿ ಮುಳುಗುತ್ತಿದ್ದ ದೃಶ್ಯ ಅರ್ಜುನನ ಎದೆಯೊಡೆಸಿತು! ಸಮುದ್ರದ ಅಬ್ಬರ ಅಷ್ಟು ದೂರಕ್ಕೂ ಕೇಳಿಸುತ್ತಿತ್ತು!... ದೊಡ್ಡ ದೇವಾಲಯಗಳು ಕಾಣೆಯಾದವು! ಗಗನಚುಂಬಿ ಮಾಳಿಗೆಗಳೂ ಸಹ... ಸಮುದ್ರ ಏರುತ್ತಿತ್ತು! ಶ್ರೀಕೃಷ್ಣನ ಅರಮನೆಯ ಬಂಗಾರದ ಗೋಪುರದ ಮೇಲೆ ಮುಳುಗುವ ಸೂರ್ಯ ಕೆಂಬಣ್ಣ ಬೀಸಿದ! ಅದೊಂದು ಕಟ್ಟಡ ಬಿಟ್ಟು ಎಲ್ಲ ದ್ವಾರಕೆಯೆಲ್ಲ ಮುಳುಗಿ, ಅದನ್ನು ಪುಟ್ಟದ್ವೀಪವಾಗಿಸಿತ್ತು!... "ಅಗೋ ಅಲ್ಲಿ" ಅರ್ಜುನ ಎಂದ! ಯಾದವರು ಅತ್ತ ನೋಡಿ ಬಾಯಿ ತೆರೆದು ನಿಂತರು!

* * *

# ೧೮. ಅರ್ಜುನನ ಸೋಲು!

ಅರ್ಜುನನಿಗೆ ಏಕಾಗ್ರಬುದ್ಧಿ ತಪ್ಪಿತ್ತು! ಅವನ ಗರ್ವ ಇಳಿಸಿದ ಆ ಹದ್ದು ಯಾರು? ಏಕೆ... ಅದು ಈ ವೇಳೆಗೇ ಇಲ್ಲಿ ಕಾದು ಕುಳಿತು ತನಗೆ ಆ ಉಪದೇಶ ನೀಡಿತು? ಏಕೆ?... ಭವಿಷ್ಯಕ್ಕೆ ಇದರಲ್ಲೇನಾದರೂ ಸಂದೇಶವಿದೆಯೇ?... ಇರಬೇಕು! ಊರಲ್ಲಿ, ತನ್ನೊಳಗೆ ಕಲಿಪ್ರವೇಶ ಆದುದಕ್ಕೆ ನಿದರ್ಶನವಿದೆ! ತಾಂಬೂಲ... ದ್ರೌಪದೀಸಂಭೋಗ...ಛೇ!... ನಾಚಿಕೆ!... ಇಂದು ಈ ಹದ್ದು ಹೇಳಿದಂತೆ, ತನಗೇಕೆ ಅಹಂಕಾರ ಬಂದಿತು? ಮಹಾಭಾರತ ವೀರ ತಾನು ಎಂಬ ಜಂಭ ಬಂದಿತು, ಹೇಗೆ? ಕೃಷ್ಣನಿಲ್ಲದೆ ತಾನು ಏನೂ ಅಲ್ಲ ಎಂಬುದನ್ನು ಒಂದು ಹದ್ದು ತನಗೆ ಉಪದೇಶಿಸಬೇಕೆ?.. ದಿನದಿನವೂ ತನ್ನ ಅನುಸಂಧಾನದಲ್ಲಿದ್ದ ನಿತ್ಯಸತ್ಯ ಅದಲ್ಲವೆ?.. ಇತ್ತ ದ್ವಾರಕೆಯೇ ಮುಳುಗಿತೆಂದರೆ, ಅಲ್ಲಿ ಹಸ್ತಿನಾವತಿಯೂ ಮುಳುಗೀತು!.. ಈ ವೇಳೆಗೆ ಮುಳುಗಿದ್ದೀತು! ಅಲ್ಲಿ ಸುತ್ತ ಸಮುದ್ರವಿಲ್ಲವಲ್ಲ?.. ಇಲ್ಲ, ಅದು ಅಲ್ಲಿ ಬೇಕಿಲ್ಲ! ಹಸ್ತಿನಾವತಿಯನ್ನು ಮುಳುಗಿಸಲು ಅಲ್ಲಿ ಕಲಿಪುರುಷ ಕಾಮಪ್ರವಾಹವನ್ನೇ ಕೊಚ್ಚಿಸಿದ್ದಾನೆ!... ತಾನು ಹೋಗಿ ಸೇರುವವರೆಗೆ ಹಸ್ತಿನಾವತಿ ಸುರಕ್ಷಿತವಾಗಿದ್ದರೆ ಸಾಕು!... ಇಲ್ಲಿ ಈ ಪರಿವಾರ ರಕ್ಷಣೆ? ಅದನ್ನು ಕೃಷ್ಣನೇ ಕಾಪಾಡಬೇಕು! ತನ್ನವರನ್ನೇ ಕಾಪಾಡದೆ ಕೈಬಿಟ್ಟ ಅವನು ಈ ಉಳಿದವರನ್ನು ಕಾಪಾಡಿಯಾನೆಂಬ ನಂಬಿಕೆಯೇನು?..

ಅರ್ಜುನ ಥಟ್ಟನೆ ಏನನ್ನೋ ನೆನೆದ! ಮೂರು ದಿನದಿಂದ ನೆನೆಸಿ ನೆನೆಸಿ ಮರೆತು ಹೋದ ವಿಷಯ ಅದು!... ದ್ವಾರಕೆಯ ಘಟನೆಗಳ, ಅಲ್ಲಿ ತನ್ನ ಎಡೆಬಿಡದ ಕರ್ತವ್ಯ ಕರ್ಮಗಳ ಭರದಲ್ಲಿ ಅದನ್ನು ಮರೆತೇ ಬಿಟ್ಟಿದ್ದ!.. ಹಸ್ತಿನಾವತಿಯಿಂದ ಅವನು ಸರಸ್ವತೀ ನದಿಯವರೆಗೆ ಬಂದಿದ್ದ ಆ ತನ್ನ ರಥ ದ್ವಾರಕೆಯನ್ನೇಕೆ ತಲುಪಲಿಲ್ಲ?.. ತಲುಪಿಯೂ ಯಾರೂ ತನಗೆ ಮಾಹಿತಿ ಕೊಡಲಿಲ್ಲವೋ?... ಅದೇ ಸಂಭವ! ದ್ವಾರಕೆಯಲ್ಲಿ ಎಲ್ಲವೂ ಅಸ್ತವ್ಯಸ್ತವಾಗಿತ್ತು! ಯಾರಿಗೂ ಯಾರೂ ಯಾವ ಸಮಾಚಾರವನ್ನೂ ಕೊಡುವ, ಕೇಳುವ ಸ್ಥಿತಿಯಲ್ಲಿರಲಿಲ್ಲ! ಅಧಿಕಾರ ಚಕ್ರ, ಆಡಳಿತ ಯಂತ್ರ, ಎಲ್ಲ ಕುಸಿದಿತ್ತು...

ಹಾಗಲ್ಲ! ತನ್ನ ಸಾರಥಿ ಅಲ್ಲಿ ದ್ವಾರಕೆಯಲ್ಲಿ ಯಾರಿಗೂ ತಲೆಬಾಗಬೇಕಿರಲಿಲ್ಲ! ಊರಿಗೆ ಬಂದಿದ್ದರೆ, ನೇರವಾಗಿ ತನ್ನನ್ನೇಕೆ ಹುಡುಕಿಕೊಂಡು ಬರಲಿಲ್ಲ?... ಅಥವಾ ಅವನು ಬರಲೇ ಇಲ್ಲವೋ?.. ಅರ್ಜುನನಿಗೆ ಇಡೀ ಜೀವನದಲ್ಲಿ ಆ ವರೆಗೆ ಕಾಣಿಸಿಕೊಂಡಿರದಿದ್ದ ಒಂದು ಅನಿರ್ವಚನೀಯ ಭಯ ಆವರಿಸಿತು!... ಆ ಸಾರಥಿ ಹಸ್ತಿನಾವತಿಗೇ ಮರಳಿರುವ ಸಂಭವವೂ ಇಲ್ಲ! ಅವನು ಅವಿಧೇಯನಲ್ಲ!... ದಾರಿಯಲ್ಲಿ ದಾರುಕ... ದಸ್ಯುಗ್ರಾಮಗಳ ದಾರಿಯಲ್ಲಿ ಭಯವಿದೆ ಎಂದಿದ್ದನಲ್ಲ, ಆ ಭಯದಲ್ಲಿ ಏನಾದರೂ ತನ್ನ ಸಾರಥಿ ಸಿಕ್ಕಿಹಾಕಿಕೊಂಡನೇ?.. ಅಯ್ಯೋ!... ಈಗ ತಾನು ಹಿಡಿದಿರುವುದೂ ಅದೇ ದಾರಿ!... ಏನು ಗತಿ?... ಸಮರ್ಥ ಸೈನ್ಯವೂ ಇಲ್ಲ!... ಛೆ!..

ತಾನು ಅರ್ಜುನ!.. ತನ್ನ ಕೈಯ್ಯಲ್ಲಿ ಗಾಂಡೀವ ಇರುವವರೆಗೆ, ಕೃಷ್ಣಕೃಪೆ ತನ್ನ ಮೇಲೆ ಇರುವವರೆಗೆ, ತನಗೆ, ಈ ದ್ವಾರಕೆಯ ನಿರಾಶ್ರಿತರಿಗೆ, ಯಾವ ಭಯವೂ ಇಲ್ಲ!.. ಅರ್ಜುನ ಧೈರ್ಯ ತಂದುಕೊಂಡ. ಆದರೂ ಅಂಜದೆದೆಯ ಗಂಡನಾದ ತನ್ನ ಹೃದಯದಲ್ಲೂ ಅಂದು ಈ ಅಂಜಿಕೆಯ ಕುಡಿ ಉಂಟಾದದ್ದೇ ಆಶ್ಚರ್ಯಕರವೂ ಅಶುಭ ಸೂಚಕವೆಂಬ ಶಂಕೆಯೂ ಮೂಡಿದವು!...

ದಾರುಕ ಬಂದ!... ಹಿಂಪೂಣೆಯಲ್ಲಿ ಎಲ್ಲ ಸುರಕ್ಷಿತವೆಂಬ ಸಮಾಚಾರ ಹೇಳಿದ! ಅರ್ಜುನ ನೆಮ್ಮದಿಯ ನಿಟ್ಟುಸಿರಿಟ್ಟ!

ರಾತ್ರಿಯಾಯಿತು! ಹಿಂದೊಮ್ಮೆ ಸುಖವಾಗಿ ಶ್ರೀಕೃಷ್ಣರಕ್ಷೆಯಲ್ಲಿದ್ದ ಆ ಮುಗ್ಧ ಪ್ರಜೆಗಳು, ವಾರಕಾಲದಿಂದ ದ್ವಾರಕೆಯ ಘಟನಾವಳಿಗಳಿಂದ ತಲ್ಲಣಿಸಿದ್ದರು! ಅರ್ಜುನ ಬಂದನೆಂಬ ಆಸೆಯಲ್ಲಿದ್ದವರಿಗೆ, ಊರು ಬಿಟ್ಟು ಹೊರಡುವ ಆಜ್ಞೆಯಾಗಿ, ತಮ್ಮ ಕಣ್ಣೆದುರೇ ಊರೇ ಮುಳುಗಿ ಹೋಯಿತು! ಯಾರೂ ವಾರದಿಂದ ನಿದ್ರಿಸಿರಲಿಲ್ಲ! ಬೆಳಗ್ಗೆಯಿಂದ ಪ್ರಯಾಣದ ಆಯಾಸ ಬೇರೆ!

ಗುಡ್ಡ ಇಳಿದೊಡನೆಯೇ ಒಂದು ತೋಪು ಸಿಕ್ಕಿತು. ಪಕ್ಕದಲ್ಲಿ ಒಂದು ತಿಳಿಗೊಳವೂ ಇದ್ದು, ಅರ್ಜುನ ರಾತ್ರಿ ಅಲ್ಲಿ ಬಿಡಾರಕ್ಕೆ ವಿಶ್ರಾಂತಿಗೆ ಆಜ್ಞೆ ಮಾಡಿದ.

ತಾನೂ ದಾರುಕನೂ, ಇದ್ದುದರಲ್ಲೇ ಸಮರ್ಥರಾದ ಹಲವು ವೀರರೂ ಸೇರಿ, ವಿಶ್ರಾಂತರಾದ ಈ ಯಾತ್ರಿಕರಿಗೆ ರಾತ್ರಿ ರಕ್ಷಣೆಯ ಭಾರ ಹೊತ್ತು ಪಹರೆ ಕಾಯಲಾರಂಭಿಸಿದರು.

ಅಡುಗೆಯವರು ಬೇಗ ಊಟವನ್ನು ಸಿದ್ಧಮಾಡಲಾರಂಭಿಸಿದ್ದರು!... ದಟ್ಟವಾದ ಕತ್ತಲೆ ಎತ್ತಲೂ ಆವರಿಸಿತ್ತು... ಅರ್ಜುನನೊಡನೆ ಬಂದಿದ್ದ ದ್ವಾರಕೆಯ ಆ ಪರಿವಾರ ಆ ತೋಪಿನಲ್ಲಿ ಹಿಡಿಸದೆ, ಆ ಮುಂದಿನ ಕುರುಚಲು ಗಿಡಗಳ ಭೂಮಿಯನ್ನು, ಅದರ ಮುಂದಿನ ಗುಡ್ಡವನ್ನು ಆಕ್ರಮಿಸಿ ಅಲ್ಲಿ ಡೇರೆ ಬಡಿಕೊಂಡು, ಎತ್ತ ನೋಡಿದರಲ್ಲಿ ನಿರಾಶ್ರಿತರ ಪ್ರವಾಹವೇ ಹರಿದಿತ್ತು. ಅಡುಗೆಯವರು ನಾನಾ ಕಡೆಗಳಲ್ಲಿ ಒಲೆಹೂಡಿ, ಬಡಿಸಲು ಅನುಕೂಲವಾಗುವಂತೆ, ಬೇಗ ಬೇಗ ಸುಲಭವಾದ ಅಡುಗೆಗಳನ್ನು ಮಾಡಲಾರಂಭಿಸಿದ್ದರು.

ಒಂದು ಗಂಟೆಗೂ ಹೆಚ್ಚು ಕಾಲ ಇದೆಲ್ಲ ಆಗಿತ್ತು... ರಥ, ಕುದುರೆ, ವಾಹನ ಇಳಿದು, ಅಲ್ಲಿ ಢೇರೆ ಹಾಕಲಿಕ್ಕೇ ಬಹಳ ವೇಳೆಯಾಗಿತ್ತು. ಅಷ್ಟರೊಳಗೆ ಊಟ ಸಿದ್ಧವಾಗಿ, ಎಲ್ಲರೂ ಹಸಿದಿದ್ದರಿಂದ ಗಬಗಬನೆ ಮುಗಿಸಿದರು... ಆಮೇಲೆ ಕಾವಲು ಪಡೆಯವರೆನಿಸಿಕೊಂಡಿದ್ದವರೂ ಉಂಡು, ಕೊನೆಗೆ ದಾರುಕನೂ ಅರ್ಜುನನೂ ಉಂಡ ಶಾಸ್ತ್ರ ಮಾಡಿ ಮುಗಿಸಿದರು. ಮರುದಿನ ಪ್ರಾತಃ ಮುಂಚೆಯೇ ಪ್ರಯಾಣಿಕರು ಆಹ್ನಿಕಗಳನ್ನು ಮುಗಿಸಬೇಕೆಂದೂ, ಬೇಗ ದೂರ ದಾರಿ ಸಾಗುವುದಿದೆಯೆಂದೂ, ಇನ್ನು ಮರುದಿನ ಸಂಜೆಗೆ ಮಾತ್ರ ಊಟದ ವಿಚಾರವೆಂದೂ ಸುದ್ದಿ ಕೊಡಲಾಗಿತ್ತು. ಹಸಿವು ತಾಳದವರಿಗಾಗಿ, ಮಕ್ಕಳಿಗೆ, ಮುದುಕರಿಗೆ, ಆ ರಾತ್ರಿ ಮಾಡಿ ಉಂಡು ಉಳಿದದ್ದನ್ನು ಅಡಿಗೆಯ ಭಟರೂ, ಬಡಿಸುವವರೂ, ಕಟ್ಟಿ ರಕ್ಷಿಸಿಟ್ಟುಕೊಂಡಾಗಿತ್ತು.

ಸರಿರಾತ್ರಿ... ಯಾತ್ರಿಕರೆಲ್ಲ ಮಲಗಿದ್ದಾರೆ... ಅರ್ಜುನ ಅವಿಶ್ರಾಂತನಾಗಿ ಪಾಳಯವನ್ನು ರಕ್ಷಿಸುತ್ತಾ ಸುತ್ತಿ ಬರುತ್ತಿದ್ದ!... ಚಂದ್ರೋದಯ ಆಗಿದ್ದು, ಆ ಬೆಳಕು ಕೊಂಚ ಸುರಕ್ಷಿತತೆಯ ಆಸೆಯನ್ನು ಕೊಟ್ಟಿತ್ತು... ತಮ್ಮ ವನವಾಸ ಅಜ್ಞಾತವಾಸದ ಅನುಭವಗಳನ್ನೆಲ್ಲ ಅರ್ಜುನ ನೆನೆಸಿದ!... ಅಕ್ಷಯ ಪಾತ್ರೆಯ ನೆನಪಾಯಿತು!... ಈಗ ಅಂಥದೊಂದು ಇದ್ದಿದ್ದರೆ!... ದ್ರೌಪದಿಯ ನೆನಪಾಯ್ತು. ದುರ್ವಾಸಾತಿಥ್ಯ ಪ್ರಸಂಗದ ನೆನಪೂ ಆಗಿ.. ಆ ದುರ್ವಾಸ ಸಮಸ್ತ ಯಾದವರನ್ನು ಹಾಗೆ ಶಪಿಸಿದ್ದು ಸರಿಯೇ? ಎಂಬ ವಿಚಾರವನ್ನು ಅರ್ಜುನ ಮಾಡಲಾರಂಭಿಸಿದ!... "ಈ ಬ್ರಾಹ್ಮಣರೇ ಹೀಗೆ! ಊಟಸು ಹಾಕಿದರೆ ಹರಸುತ್ತಾರೆ! ಕೆಣಕಿದರೆ ಶಪಿಸುತ್ತಾರೆ!!" ಎಂಬ ವಿಚಾರ ಸುಳಿಯಿತು! "ಛೆ, ಛೆ! ಅದು ಪಾಪ!... ಈ ಬ್ರಾಹ್ಮಣಾಪಹೇಳನ!... ಯಾದವ ಯುವಕರು ಸುಮ್ಮನೆ ಕೆಣಕಲಿಲ್ಲ!.. ಬ್ರಾಹ್ಮಣ್ಯವನ್ನೇ ಅಣಕಿಸಿದರು!... ಶಾಸ್ತಿ ಅನುಭವಿಸಿದರು!!..."

ಹೀಗೆ ಚಿಂತಿಸುತ್ತಾ ರಾತ್ರಿ ಕಳೆಯುತ್ತಾ ಬರಲು.. ದಾರುಕ ಬಂದು, "ಪ್ರಭು! ಪ್ರಯಾಣಕ್ಕೆ ದ್ವಾರಕಾ ಜನ ಸಿದ್ಧರಾಗಿ ನಿಮ್ಮ ಆಜ್ಞೆ ಕಾಯುತ್ತಿದ್ದಾರೆ" ಎಂದೆಚ್ಚರಿಸಿದ!... ಅರ್ಜುನನಿಗೂ ಅರಿವಿಲ್ಲದೆಯೇ ಆ ರಾತ್ರಿ ಕಳೆದು ಒಂದು ತಾಸಿಗೂ ಮಿಕ್ಕು ಕುಳಿತಲ್ಲೇ ನಿದ್ರೆಯ ಭಾರ ಆವರಿಸಿತ್ತು. ಕೊಳದಲ್ಲಿ ನಿತ್ಯವಿಧಿ ತೀರಿಸಿಕೊಂಡು, ಅರ್ಜುನ, ದಣಿವಾರಿಸಿದ್ದ ಕುದುರೆಯ ಬೆನ್ನು ಹತ್ತಿದ! ಹೊರಟ

ಕ್ರಮದಲ್ಲೇ ಮತ್ತೆ ಪಯಣಿಗರು ಮತ್ತೆ ಹೊರಟಿದ್ದರು.. ಅರ್ಜುನ ಈ ಹಗಲು ವಿಶೇಷವಾಗಿ ಸ್ತ್ರೀಯರ ತುಕಡಿ ಇರುವೆ ಕಡೆ ರಕ್ಷೆಗಾಗಿ ನಿಂತು, ದಾರುಕನನ್ನು ಸಮಸ್ತ ಯಾತ್ರಿಕರ ಹಿಂಚೂಣಿಯಲ್ಲೂ, ತನಗ ಆಪ್ತನಾಗಿದ್ದ ದ್ವಾರಕೆಯ ಅಶ್ವಸೈನ್ಯದಲ್ಲಿ ಉಳಿದಿದ್ದ ವೃದ್ಧ ಚಂದ್ರಸೇನ ಸಮುದ್ರಸೇನರನ್ನು ಮುಂಚೂಣಿಗೂ ನಿಲ್ಲಿಸಿ, ಯಾತ್ರೆ ಹೊರಡುವಂತೆ ಆಜ್ಞಾಪಿಸಿದ. ಪಯಣ ಸಾಗಿತು.

ಸೂರ್ಯೋದಯಕ್ಕೆ ಒಂದೆರಡು ಗಳಿಗೆ ಮುಂಚೆಯೇ ಹೊರಟು, ಬೆಳದಿಂಗಳಲ್ಲಿ ಯಾತ್ರೆ ಸಾಗಿತ್ತು... ಏನೂ ತೊಂದರೆ ಆಗಲಿಲ್ಲ! ಸೂರ್ಯೋದಯ ಆಯಿತು!... ಅದಾದ ಒಂದೆರಡು ಗಳಿಗೆಯೂ ನಿರ್ವಿಘ್ನವಾಗಿ ಅದು ಸಾಗಿತ್ತು.

ಅರ್ಜುನ, ವಾಡಿಕೆಯಂತೆ, ಆಗಾಗ ಮುಂಚೂಣಿಯನ್ನು, ನಂತರ ಹಿಂಚೂಣಿಯನ್ನು ಪರೀಕ್ಷಿಸುತ್ತಾ, ಪಯಣಿಗರಿಗೆ ಧೈರ್ಯ ಹೇಳುತ್ತಾ, ಎಲ್ಲರಿಗೂ ಕಾಣಿಸಿಕೊಳ್ಳುತ್ತಾ ಕುದುರೆಯ ಮೇಲೆ ಓಡಾಡುತ್ತಾ ನಡೆದಿದ್ದ. ಕೃಷ್ಣನನ್ನು ಕಳೆದುಕೊಂಡು ನೋವು ಆರದೆ ಇನ್ನೂ ಅಳುತ್ತಿದ್ದ ಆ ರಮಣಿಯರಿಗೆ ಈ ಕೃಷ್ಣಸಖನನ್ನು ಕಂಡೇ ಎಷ್ಟೋ ಮನದ ಗಾಯ ಮಾಸುವಂತಿತ್ತು...

ಅರ್ಜುನ, ತಟ್ಟನೆ, ಪಯಣಿಗರನ್ನು ಹಿಂದೆ ಬಿಟ್ಟು, ಅರ್ಧ ಗಾವುದದಷ್ಟು ದೂರ ಮುಂದೆ ಧಾವಿಸಿದ್ದ! ಈಗ ಯಾತ್ರೆ ಒಂದು ದಸ್ಯುಗ್ರಾಮವನ್ನು ಸಮೀಪಿಸಿತ್ತು. ಗ್ರಾಮದೊಳಗೆ ಪ್ರವೇಶಿಸಕೂಡದೆಂದು ದಿಬ್ಬಣಕ್ಕೆ ಕಟ್ಟಪ್ಪಣೆ ನೀಡಲಾಗಿತ್ತು. ಆ ಹಾಳು ಗ್ರಾಮ ಒಂದು ಎತ್ತರ ಪ್ರದೇಶದಲ್ಲಿರುತ್ತಾ, ಈಗ ಪಯಣದ ರಸ್ತೆ, ಹಿಂದಿನ ಸಂಜೆಯವರಂತೆ ಗುಡ್ಡಹತ್ತಿ ಕಿರಿದಾದ ಜಾಗೆಯಲ್ಲಿ ಹಾಯುತ್ತಿತ್ತು! ಅರ್ಜುನ ಇದನ್ನೆಲ್ಲ ಪರಿವೀಕ್ಷಿಸಿದ! ತಿರುವಿನಲ್ಲಿ ಯಾರಾದರೂ ಅಡಗಿಕೊಂಡಿರುವರೋ ಹೇಗೆಂದು ನೋಡಿದ! ಯಾರೂ ಕಾಣಬರಲಿಲ್ಲ. ಆ ಊರೂ ತೀರ ಸಣ್ಣದಾಗಿದ್ದು, ಏಪುನಂಪ್ಪೆಯಲ್ಲಿ ಶತ್ರುಗಳು ಅಡಗಿಕೊಂಡಿರಬಹುದಾದ ಸಾಧ್ಯತೆಯೂ ಇರಲಿಲ್ಲ!... ಮುಂದೆ ಹೇಗೆಂದು ನೋಡುತ್ತಾ ಗುಡ್ಡದ ಹಾದಿ ಇಳಿಯಲಾರಂಭಿಸಿದಾಗ ಅರ್ಜುನನಿಗೆ ಅಚ್ಚರಿ, ಆತಂಕದ ದೃಶ್ಯವೊಂದು ಕಾದಿತ್ತು!!

ಹಸ್ತಿನಾವತಿಯ ಆ ತನ್ನ ರಥ ಪುಡಿಪುಡಿಯಾಗಿ, ಅದರ ಒಡೆದ ಭಾಗಗಳು ದಿಕ್ಕಾಪಾಲಾಗಿ ಚೆಲ್ಲಿದ್ದವು!... ಎರಡೂ ಚಕ್ರಗಳು ರಸ್ತೆಯ ಎಡಬಲ ಬದಿಗಳಲ್ಲಿ!... ಕುದುರೆಗಳ ಹೆಣಗಳು ರಸ್ತೆಯಲ್ಲೇ ಬಿದ್ದಿದ್ದು ಹದ್ದುಗಳೂ ಕಾಡುಜಂತುಗಳೂ ಆ ಶರೀರಗಳನ್ನು ಅರೆಬರೆತಿಂದಾಗಿತ್ತು!! ಅಯ್ಯೋ!!... ತನ್ನ ಸಾರಥಿ, ಕುರುಹು ತಿಳಿಯದಂತೆ ಸತ್ತು ಬಿದ್ದು, ರಸ್ತೆಯ ಎಡಬದಿಗೆ ಆ ಹೆಣವನ್ನು ಎಳೆದಿತ್ತು! ಮುಖ ವಿಕಾರವಾಗಿ ದೊಡ್ಡ ಕಲ್ಲಿನಿಂದ ಜಜ್ಜಲ್ಪಟ್ಟಂತೆ ಕಾಣುತ್ತಿತ್ತು!... ಅಯ್ಯೋ! ತನ್ನನ್ನು ನಂಬಿ ಬಂದವನನ್ನು ಅನಾಥನಂತೆ ತಾನು ಅಲ್ಲಿ ಬಿಟ್ಟದ್ದೇ ತಪ್ಪಾಯಿತು!... ತನ್ನ ಧ್ವಜ ಹರಿದು ಮಣ್ಣುಪಾಲಾಗಿತ್ತು!... ಎಂಥ ಅಪಮಾನ?.. ಯಾರ ಕೆಲಸ ಇದು? ಎಂದು ಅರ್ಜುನ ಮತ್ತೆ ವೇಗವಾಗಿ ಗುಡ್ಡ ಹತ್ತಿ ನೋಡಬೇಕೆಂದು ಕುದುರೆಯನ್ನು ಹಿಂದಿರುಗಿಸಿದ!

ಗುಡ್ಡ ಹತ್ತಿ ನೋಡಿದಾಗ ಆ ದೃಶ್ಯ ಎದೆಯೊಡೆಸಿತ್ತು!... ನಿರಾಶ್ರಿತರ ದಿಬ್ಬಣದಲ್ಲಿ ಅಲ್ಲೋಲಕಲ್ಲೋಲವಾಗಿತ್ತು! ಅದೆಲ್ಲಿಂದಲೋ ದಸ್ಯುಗಳ ಸಾವಿರ ಸಾವಿರ ಪಡೆಗಳು ಮುತ್ತಿ ಬಾಲಕರನ್ನೂ, ವೃದ್ಧರನ್ನೂ ವಾಹನಗಳಿಂದ ಹೊರಗೆಳೆದು ಕೊಂದು ಹಾಕುತ್ತಿದ್ದರು! ದ್ವಾರಕೆಯಿಂದ ತಂದಿದ್ದ ಸೈನ್ಯ ಅವರನ್ನು ಪೂರ್ಣ ಹಿಮ್ಮೆಟ್ಟಿಸುವುದಾಗದೆ, ದಸ್ಯುಗಳಲ್ಲೂ ಹಲವರನ್ನು ಕೊಂದಿದ್ದರೂ, ಪೂರ್ವ ಯೋಜಿತವೆಂಬಂತೆ, ಆ ದೃಢಕಾಯ ಅನಾಗರೀಕರು, ಸ್ತ್ರೀಯರ ವಾಹನಗಳತ್ತ ಧಾವಿಸಿ, ಅವರನ್ನು ಕೆಳಗಿಳಿಸಿ, ಭಯಪಡಿಸಿ, ತಮ್ಮನ್ನು ಹಿಂಬಾಲಿಸುವಂತೆ ಹೇಳಿ, ತೀಕ್ಷ್ಣ ಆಯುಧಗಳನ್ನು ತೋರಿಸಿ ಹೆದರಿಸುತ್ತಿದ್ದುದು ಕಣ್ಣಿಗೆ ಬಿತ್ತು!

"ಅಯ್ಯೋ! ಸರ್ವನಾಶವಾಯಿತು!" ಎಂದೆನ್ನುತ್ತಾ, ಗಾಂಡೀವಕ್ಕೆ ಬಾಣಹೂಡಿ ಕ್ಷಣಮಾತ್ರದಲ್ಲಿ ಅರ್ಜುನ, ಗುರುದ್ರೋಣರನ್ನು ನೆನೆಸಿದ! ದ್ರೋಣರ ಮುಖ ಆಕಾಶದಲ್ಲಿ ಅರ್ಜುನನಿಗೆ ಕಾಣಿಸಿ ವ್ಯಂಗ್ಯವಾಗಿ ನಕ್ಕು ಮಾಯವಾಯಿತು!... ಅರ್ಜುನನಿಗೆ ಮೈ ಬೆವರಲಾರಂಭಿಸಿತು! ಗುರುಗಳು ಏಕೆ

ಹೀಗೆ ಸಕ್ಕರೆಂದು ತಿಳಿಯಲಿಲ್ಲ!... ವಿರಾಟನಗರಿಯ ಹೊರವಲಯದಲ್ಲಿ ಅಂದು ಕೌರವ ಸೇನೆಯನ್ನು ತಾನೊಬ್ಬನೇ ಸಂಮ್ಮೋಹನಾಸ್ತ್ರ ಒಂದರಿಂದಲೇ ಸೋಲಿಸಿದ್ದ ಪ್ರಸಂಗವನ್ನು ಅರ್ಜುನ ನೆನೆಸಿ, ಬಾಣದಲ್ಲಿ ಆ ಅಸ್ತ್ರ ಹೂಡಲು, ಮಂತ್ರವನ್ನು ನೆನೆಸಿದ!

... ಮಂತ್ರ ನೆನಪಾಗಲಿಲ್ಲ!.. ತುಂಬಾ ಯತ್ನಿಸಿದ!.. "ಛೇ!... ನಾನೇನು ಕರ್ಣನೇ?.." ಎಂದು ಹಳಿದುಕೊಂಡ! ಕರ್ಣನ ಮುಖ ಆಗಸದಲ್ಲಿ ಕಾಣಿಸಿ ವ್ಯಂಗ್ಯವಾಗಿ ನಕ್ಕು ಮಾಯವಾಯ್ತು!

"...ಕೃಷ್ಣಾ! ನೀನೇಗತಿ!... ರಕ್ಷಿಸು" ಎಂದು ಆರ್ತನಾಗಿ, ಗಟ್ಟಿಯಾಗೇ ಕೂಗಿದ! ಕೃಷ್ಣನ ಮುಖ ಕಾಣಿಸಲಿಲ್ಲ!.. ಆ ಹದ್ದು ಕಾಣಿಸಿಕೊಂಡು,

*ಮತ್ತಃ ಸ್ಮೃತಿಃ ಜ್ಞಾನಂ ಅಪೋಹನಂ ಚ!*

ಎಂದು ಹೇಳಿ ಮಾಯವಾಯ್ತು! "ನನ್ನ ದೆಸೆಯಿಂದಲೇ ನಿನಗೆ ನೆನಪು, ಮರೆವು" ಎಂದ ಮರ್ಮ ಅರ್ಜುನನ್ನು ಚುಚ್ಚಿತು!

ಚಿಂತಿಸುತ್ತಾ ಕೂಡಲು ವೇಳೆಯಿಲ್ಲದೆ, ಅರ್ಜುನ "ಈಗ ಯಾವ ಅಸ್ತ್ರವಾದರೂ ಸರಿ" ಎಂದು ನಿಶ್ಚಯಿಸಿ, ತನ್ನ ಎಲ್ಲ ಪ್ರಿಯ ಅಸ್ತ್ರಗಳನ್ನೂ ನೆನೆಸಿದ.

ಆದಿ ನೆನಪಾದರೆ ಅಂತ್ಯ ನೆನಪಾಗದೆ, ಅಂತ್ಯ ನೆನಪಾದರೆ ಆದಿ ನೆನಪಾಗದೆ.. ಆ ಅಸ್ತ್ರಗಳೆಲ್ಲ ಅರ್ಜುನನ್ನು ಕೈಬಿಟ್ಟವು.

ಅಸ್ತ್ರ ದೇವತೆಗಳು ಸಾಲಾಗಿ ತನ್ನ ಶರೀರದಿಂದ ಸೂಕ್ಷ್ಮರಾಗಿ ನಿರ್ಗಮಿಸುತ್ತಿರುವುದು ಅರ್ಜುನನಿಗೆ ಅರಿವಿಗೆ ಬಂತು!... "ಅಯ್ಯೋ! ಕೃತಘ್ನರೇ!... ಈ ಸಮಯದಲ್ಲಿ ಕೈ ಬಿಡುವುದೇ..?" ಎಂದು ಅರ್ಜುನ ನಿರ್ವಿಣ್ಣನಾಗಿ, ಕುದುರೆಯನ್ನೇರಿ ಗುಡ್ಡವಿಳಿದು, ತನ್ನ ಆಶ್ರಿತ ದಿಬ್ಬಣ ಹತವಾಗುತ್ತಿದ್ದ ಠಾವಿಗೆ ಧಾವಿಸಿದ!...

ಹಲವಾರು ಹೆಣಗಳು ಬಿದ್ದಿದ್ದವು!.. "ಎಲ್ಲಿಂದ ಬಂದರು ಇಷ್ಟೊಂದು ಪ್ರಮಾಣದ ದಸ್ಯುಗಳು!.. ನನಗೇಕೆ ಸುಳಿವೇ ಆಗಲಿಲ್ಲ!!.. ನಾನೇಕೆ ಗಾವುದ ದೂರ ಮುಂದೆ ಹೋದೆ!. ದಾರುಕನೆಲ್ಲಿ?"

ಅರ್ಜುನ ಅತ್ತ ದೃಷ್ಟಿ ಹರಿಸಿದ!... ಚಂದ್ರಸೇನ, ಸಮುದ್ರಸೇನರು ಹತರಾಗಿ ಬಿದ್ದಿದ್ದರು,.. ದಾರುಕ ವೀರಾವೇಶದಿಂದ ಒಬ್ಬನೇ ಕೈಗೆ ಸಿಕ್ಕ ಆಯುಧಗಳಿಂದ ಹೊಡೆದಾಡುತ್ತಾ, ದಸ್ಯುಗಳನ್ನು ಹಿಮ್ಮೆಟ್ಟಿಸುತ್ತಿದ್ದ!... ಅರ್ಜುನ ಅಲ್ಲಿಗೋಡಿದ!.. ಈ ಸಲ ಬಿಲ್ಲನ್ನೆತ್ತಲೂ ಅವನಿಗೆ ಆಗಲಿಲ್ಲ!... ಏನಿದು! ಬಿಲ್ಲೂ ತನ್ನೊಡನೆ ಅಣಕವಾಡುತ್ತಿದೆಯೇ?.. ಮತ್ತೆ ಮತ್ತೆ ಯತ್ನಿಸಿದ! ಕೊನೆಗೆ ಬಿಲ್ಲು ಕೈಯಲ್ಲಿ ಎದ್ದು ನಿಂತಿತ್ತು!... ಅಸ್ತ್ರಗಳಂತೂ ಏನೂ ನೆನಪಾಗದೆ, ಈ ಸಲ ಅರ್ಜುನ ಬಿಲ್ಲನ್ನೇ ಗದೆಯಂತೆ ತಿರುಗಿಸುತ್ತಾ ದಸ್ಯುವೀರರ ಮೇಲೆ ಬಿದ್ದ!... ಹಲವರು ಅದರ ವೇಗಕ್ಕೆಸಿಕ್ಕು ಸತ್ತರು.. ಹಲವರು ಪಲಾಯನ ಮಾಡಿದರು!!... ಬೇರೆ ಹಲವರು ಗುಂಪುಗೂಡಿ ಮತ್ತೆ ಎರಗುವ ಸನ್ನಾಹದಲ್ಲಿದ್ದರು!... ದ್ವಾರಕೆಯ ಪುಟ್ಟಸೈನ್ಯ ಧೂಳೀಪಟವಾಗಿತ್ತು!... ಅರ್ಜುನ ಬಿಲ್ಲಿನ ಕೋವಿಯಿಂದ ದಸ್ಯುಗಳನ್ನು ಸಂಹಾರ ಮಾಡುತ್ತಾ ಅರ್ಧ ಮುಹೂರ್ತ ಕಾಲವೇ ಕಳೆಯಿತು!... ಕ್ರಮೇಣ ಪರಿಸ್ಥಿತಿ ವಶಕ್ಕೆ ಬಂದಿತ್ತು!.. ಹಿಂದಿರುಗಿ ನೋಡಿದ!... ದಾರುಕ ದಣಿವಿನಿಂದ ಬಳಲಿ ಜ್ಞಾನತಪ್ಪಿಬಿದ್ದಿದ್ದ!... ದ್ವಾರಕೆಯ ಎಳೆಯರು ಅವನಿಗೆ ಶೈತ್ಯೋಪಚಾರ ನಡೆಸಿದ್ದರು!... ದಿಬ್ಬಣದಲ್ಲಿ ಉಳಿದಿದ್ದ ವೈದ್ಯ ಬಂದು "ಈಗ ವಿಶ್ರಾಂತಿ ಬೇಕು, ಬೇರೇನೂ ತೊಂದರೆ ಇಲ್ಲ" ಎಂದದ್ದು ಅರ್ಜುನನಿಗೆ ಕೋಪವನ್ನೇ ತಂದಿತ್ತು! "ಈಗ ವಿಶ್ರಾಂತಿಯೇ ಪುನಃ ತೊಂದರೆಯಾಗುತ್ತದೆ" ಎಂದು ಗುಡುಗುಡಿಸಿ, ಮತ್ತೆ ಕುದುರೆಯೇರಿ, ತಮ್ಮ ಸಮೂಹದಲ್ಲಿ ಉಳಿದವರಾರು, ನಷ್ಟವಾದುದೇನು, ಗಾಯಾಳುಗಳು ಎಷ್ಟು ಜನ... ಇತ್ಯಾದಿ ಪರಿಶೀಲಿಸಲು ಹೊರಟ. ಕುದುರೆಯಾಳುಗಳು ನಾಲ್ಕಾರು ಜನ ಅನುಸರಿಸಿದರು!...

ಶ್ರೀಕೃಷ್ಣನ ಆರಾಧ್ಯಮೂರ್ತಿ, "ಶ್ರೀರಾಮಪ್ರಿಯ"ನಿಗೆ, ದೇವಾಗಾರದ ಇತರ ಮೂರ್ತಿಗಳಿಗೆ ಏನೂ ಬಾಧೆಯಾಗಿರಲಿಲ್ಲ!

ದ್ವಾರಕೆಯ ಐಶ್ವರ್ಯ ಹೇರಿದ್ದ ಯಾವ ವಾಹನವನ್ನೂ, ಪ್ರಾಣಿಯನ್ನೂ ಕಳ್ಳರು ಮುಟ್ಟಿರಲಿಲ್ಲ!"ಮಹಾಪುಣ್ಯ!" ಎಂದುಕೊಂಡ! ಅರ್ಜುನ! "ಕೃಷ್ಣಾರ್ಜಿತ ದ್ರವ್ಯ ಅಲ್ಲವೇ!" ಎಂದು ಧನ್ಯತೆಯ ನಿಟ್ಟುಸಿರಿಟ್ಟ.

ಮರುಕ್ಷಣವೇ "ಹಾಗಾದರೆ ಈ ಕಳ್ಳರಿಗೆ ಬೇರೇನು ಬೇಕಿತ್ತು?" ಎಂದು ಚಿಂತಿಸಿ, ತಿಳಿಯದೆ, ಆಹಾರ ಸಾಮಗ್ರಿಗಳನ್ನು ಹೇರಿದ್ದ ವಾಹನಗಳತ್ತ ಹೋಗಿ ನೋಡಿದ!.. ಅವೂ ಸುರಕ್ಷಿತವಾಗಿದ್ದವು.. ಒಂದು ಕ್ಷಣ ಅರ್ಜುನನಿಗೆ ಏನೂ ತಿಳಿಯಲಿಲ್ಲ!.. "ಮತ್ತೇಕೆ ಈ ವ್ಯರ್ಥನಿರೋಧ, ಈ ಹೋರಾಟ?"... ಅರ್ಜುನನಿಗೆ ಏನೋ ಹೊಳೆಯಿತು!... ಹೃದಯ ಬಡಿದುಕೊಳ್ಳಲಾರಂಭಿಸಿತ್ತು... ವೇಗವಾಗಿ ಕುದುರೆಯನ್ನೋಡಿಸಿ, ಅಂತಃಪುರದ ಸ್ತ್ರೀಯರನ್ನು ಸಾಗಿಸುತ್ತಿದ್ದ ವಾಹನಗಳ ಕಡೆ ದೃಷ್ಟಿ ಹಾಯಿಸಿದ!... ವಾಹನಗಳು ಸಾಲು ತಪ್ಪಿ ದಿಕ್ಕಾಪಾಲಾಗಿ ಬಿದ್ದಿದ್ದವು! ಪಲ್ಲಕ್ಕಿಗಳು ಉರುಳಾಡಿದ್ದವು!.. ಗಾಡಿಗಳನ್ನು ಎತ್ತಬೇಕತ್ತ ಎಳೆದಾಡಲಾಗಿತ್ತು!... ಸ್ತ್ರೀಯರ ಆಭರಣಗಳೂ, ಬೆಲೆಬಾಳುವ ಪೀತಾಂಬರಗಳೂ ಅಲ್ಲಲ್ಲಿ ಎರಚಾಡಿದ್ದವು... ಅರ್ಜುನ ಎಲ್ಲೆಡೆ ಸುತ್ತಿ ಬಂದ!... ಕೃಷ್ಣಸ್ತ್ರೀಯರು.. ಹದಿನಾರು ಸಾವಿರ ಸ್ತ್ರೀಯರು.. ಒಬ್ಬರೂ! ಒಬ್ಬಳೇ ಒಬ್ಬಳೂ ಸಹ!.. ಕಾಣಬರಲಿಲ್ಲ!.. ಮುದುಕಿಯರಾದ ಚೇಟಿಯರೂ, ಊರಿನ ಹಿರಿಯ ಮಹಿಳೆಯರೂ ರೋದಿಸುತ್ತಿದ್ದರು!... ಎಲ್ಲಿ ಹೋದರು? ಎಲ್ಲಿ ಹೋದರು?... ಆ ವಾಹನಗಳ ಸುತ್ತ ಇದ್ದ ಬ್ರಾಹ್ಮಣರೂ, ಕಿರಿಯರೂ ಅಳುತ್ತಾ ನಿಸ್ಸಹಾಯಕರಾಗಿ ನಿಂತದ್ದು ಅರ್ಜುನನಿಗೆ ಕೋಪ ತಂದಿತು!"ಏನಾಯಿತು?" ಎಂದು ಗರ್ಜಿಸಿದ!...

ಭಯತ್ರಸ್ತರಾದ ಅವರು "ಅಗೋ! ಅಲ್ಲಿ.. ಅತ್ತ.. ದಸ್ಯುಗಳು ಒಯ್ದರು!" ಎಂದು ನಡುಗುತ್ತಾ ಹೇಳಿದರು.

ಅರ್ಜುನ ಅತ್ತ, ಒಂದೇ ಓಟಕ್ಕೆ ಅಶ್ವಾರೂಢನಾಗಿ ಧಾವಿಸಿದ!... ಈ ಸಲ ಬಿಲ್ಲು ತಕರಾರು ಮಾಡಲಿಲ್ಲ!... ಅರ್ಜುನ ಕೃಷ್ಣ ಜಪವನ್ನೇ ಮಾಡುತ್ತಿದ್ದ!... ಬಾಣಗಳನ್ನು ಹೂಡಿದ!... ಅಸ್ತ್ರಗಳು ನೆನಪಾಗಲಿಲ್ಲವಾದರೂ ಸಾಮಾನ್ಯ ಬಾಣಗಳೇ ಉಪಯುಕ್ತವಾಗಿದ್ದು, ಅರ್ಜುನನಿಗೆ ಧೈರ್ಯ ಬಂದಿತು!...

ಮಹಿಳೆಯರನ್ನು ದಸ್ಯುಗಳು ಕೈಕಟ್ಟಿ, ದನಗಳ ಮಂದೆಯಂತೆ, ತಮ್ಮ ಗ್ರಾಮಗಳ ಕಡೆ ನಡೆಸಿಕೊಂಡುಹೋಗುತ್ತಿದ್ದರು!...ಅರ್ಜುನ ಹಾಗೆ ಮತ್ತೆ ಬಂದಾನೆಂಬ ಭಾವನೆ ಅವರಿಗೆ ಇದ್ದಂತಿರಲಿಲ್ಲ! ಬಹುದೂರ ಹೊರಟೂ ಹೋಗಿದ್ದರು!

ಬೆನ್ನಟ್ಟಿದ ಅರ್ಜುನನಿಗೆ ಮೊದಲು ಕಾಣಿಸಿದ್ದು ಸತ್ತು ಬಿದ್ದ ಆ ಸ್ತ್ರೀಯರ ಕೆಲವರ ಹೆಣಗಳು!... ಸೊಂಟದಲ್ಲಿ ವಾಡಿಕೆಯಂತೆ ಅಡಗಿಸಿಟ್ಟುಕೊಂಡಿದ್ದ ಚೂರಿಗಳಿಂದ ಹಲವರು ಹೇಗೋ ಕೈಬಿಡಿಸಿಕೊಂಡು, ಚುಚ್ಚಿಕೊಂಡು ಸತ್ತಿದ್ದರು! ಇತರ ಸ್ತ್ರೀಯರು ಆರ್ತರಾಗಿ ನೋಡಿ, "ನನ್ನನ್ನೂ ಕೊಂದಾದರೂ ಮಾನವುಳಿಸು" ಎಂದು ಕೇಳಿಕೊಂಡಾಗ, ಆ ಮರಣ ರಕ್ಷೆಯನ್ನು ಅವರಿಗೂ ಹಲವರು ನೀಡಿದ್ದರು!...

ಅರ್ಜುನ ಮಗುವಿನಂತೆ ಅಳುತ್ತಾ, ಹೆಣಗಳ ಮೇಲೆಯೇ ಕುದುರೆಯನ್ನೋಡಿಸಿ, ಆ ದಸ್ಯುಗಳ ಮೇಲೆ ಬಾಣಪ್ರಹಾರ ನಡೆಸಿದ!... ಹಲವರು ಪುಂಡರು ಸತ್ತರು!! ಉಳಿದವರು ತಮ್ಮ ಕೈಲಿದ್ದ ಸ್ತ್ರೀಯರನ್ನು ಓಡಿಸಿಕೊಂಡು ಆ ಹಾದೀಹಾಗಲು ಎಲ್ಲೋ ಮಾಯವಾಗಿ ಬಿಟ್ಟರು!... ಅಂತೂ ಒಬ್ಬಳನ್ನೂ ಅರ್ಜುನ ಹಿಂದಿರುಗಿಸಿ ಕರೆತರಲಾಗಲಿಲ್ಲ!... ಸತ್ತವರೇ ಪುಣ್ಯವಂತರು!!

...ಅರ್ಜುನ ನಿರಾಶನಾಗಿ ದಿಬ್ಬಣದತ್ತ ಹಿಂದಿರುಗಿದ!... ತನ್ನ ಹೆಂಡತಿ, ಪಾಂಚಾಲಿಯನ್ನು, ಆಪತ್ಕಾಲದಲ್ಲಿ ಮಾನಸಂರಕ್ಷಿಸಿದ ಶ್ರೀಕೃಷ್ಣನ ಮಡದಿಯರನ್ನು ಈಗ ತಾನು ರಕ್ಷಿಸಲಾಗದೇ, ಋಣಭಾರ

ಅವನನ್ನು ಕೊಲ್ಲುತ್ತಿತ್ತು!... ಉಳಿದವರನ್ನಾದರೂ ಹಸ್ತಿನಾವತಿಗೆ ಸುರಕ್ಷಿತವಾಗಿ ಮುಟ್ಟಿಸಿದರೆ ಸಾಕೆಂಬ ಭಾವ ಅವನಲ್ಲಿ ಮೂಡಿತ್ತು! ಅದು ಸಮಯ ಪ್ರಜ್ಞೆ!.. ಅರ್ಜುನ ದಸ್ಯುಗಳನ್ನು ಬಹುದೂರ ಬೆನ್ನಟ್ಟಿದ್ದ!... ದಣಿದಿದ್ದ; ಬಿಸಿಲೇರುತ್ತಿತ್ತು!... ದಾರಿಯಲ್ಲಿ ಮತ್ತೆ ಒಂದು ಕೊಳದಲ್ಲಿ ಮುಖ ತೊಳೆದು, ಕೈ ಕಾಲು ತೊಳೆದು, ಇನ್ನೇನು ಕುದುರೆಹತ್ತಬೇಕೆಂಬಲ್ಲಿ, ಒಂದು ಬೋಳು ಮರದ ಮೇಲೆ ಅಲ್ಲೇ ಆ ಹದ್ದು ಕುಳಿತದ್ದು ಕಣ್ಣಿಗೆ ಬಿತ್ತು!... ಅರ್ಜುನ ತವಕದಿಂದ ಸಮೀಪಿಸಿದ!...

ಹದ್ದು: "ನನ್ನ ಬಳಿ ಬರಬೇಡ!... ನಾನಾರೆಂದೂ ಕೇಳಬೇಡ!... ಮಹಾಭಾರತ ಯುದ್ಧವೆಂಬ ಜಗಳದಲ್ಲಿ ನೀನಂತೂ ನನಗೆ ಔತಣ ಮಾಡಿಸಲಿಲ್ಲ! ಈಗ ನಾನೇ ನಿನ್ನ ಕುತೂಹಲ ತೀರಿಸಲು ಎರಡು ವಿಷಯಗಳನ್ನು ಹೇಳಿ ಹೋಗುತ್ತೇನೆ!... ಮರುಪ್ರಶ್ನೆ ಹಾಕಬೇಡ! ಪ್ರಶ್ನೆ ಹಾಕಿದರೆ ನಾನು ಹೊರಟುಬಿಡುತ್ತೇನೆ"

ಅರ್ಜುನ ಸ್ತಬ್ಧನಾಗಿ ನಿಂತು ಆಲಿಸಿದ. ಹದ್ದು ಹೇಳಿತು

ಹದ್ದು: "ಹಿಂದೆ ಅಷ್ಟಾವಕ್ರನೆಂಬ ಮಹರ್ಷಿಯಿದ್ದ! ನೀನು ಅರಣ್ಯವಾಸಕಾಲದಲ್ಲಿ ಆ ಮಹರ್ಷಿಗೆ ಆ ಶರೀರದ ಎಂಟು ಗಂಟೂ ಬಿಟ್ಟ ತೀರ್ಥವೊಂದರಲ್ಲಿ ಸ್ನಾನಮಾಡಿದೆಯಷ್ಟೆ! ಆ ಅಷ್ಟಾವಕ್ರ ಮಹಾ ತಪಸ್ವಿ. ಉದ್ದಾಲಕನೆಂಬ ಮಹರ್ಷಿಯ ಹೆಸರು ಕೇಳಿರುವೆಯಲ್ಲ?... ಅವನ ಮಗ ಶ್ವೇತಕೇತು! ಮಗಳು ಸುಜಾತಾ. ಇವಳನ್ನು ಕಹೋಳನೆಂಬ ಬ್ರಾಹ್ಮಣನಿಗಿತ್ತು ವಿವಾಹ ಆಗಿತ್ತು. ಇವರ ಸುಪುತ್ರ ಈ ಅಷ್ಟಾವಕ್ರ. ತಾಯಿಯ ಗರ್ಭದಲ್ಲಿರುವಾಗ ಒಮ್ಮೆ ತಂದೆ ಹೇಳುತ್ತಿದ್ದ ವೇದಮಂತ್ರದ ಉಚ್ಚಾರದಲ್ಲಿ ಅಪಸ್ವರವನ್ನು ಈ ಭ್ರೂಣಸ್ಥ ಶಿಶು ತಿದ್ದಿದಾಗ, ತಂದೆಯೇ ಮಗನನ್ನು "ಅಷ್ಟಾವಕ್ರನಾಗಿ ಹುಟ್ಟು" ಎಂದು ಶಪಿಸಿದ. ಹುಟ್ಟಿದ ಮಗು ತೇಜಸ್ವಿಯಾಗಿದ್ದರೂ, ಶರೀರದಲ್ಲಿ ಎಂಟು ಕಡೆ ಗಂಟಾಗಿ, ಕುರೂಪಿಯಾಗಿ ಹುಟ್ಟಿತು!... ಅತ್ತ ಜನಕನ ಸಭೆಯಲ್ಲಿ ಗರ್ವಿಯಾದ ವಂದಿ ಎಂಬ ದುಷ್ಟ ಪಂಡಿತನ ಕುತಂತ್ರದಿಂದ, ಅಲ್ಲಿ ವಾದಕ್ಕೆ ಬಂದವರನ್ನೆಲ್ಲ ನೀರಿನಲ್ಲಿ ಹಾಕಿ ಕೊಲ್ಲುತ್ತಿದ್ದರು.. ಕಹೋಳನನ್ನು ಹೀಗೆ ಕೊಂದಿದ್ದ... ವಯಸ್ಸಿಗೆ ಬಂದ ಮೇಲೆ ಅಷ್ಟಾವಕ್ರ ಜನಕನಸಭೆಗೆ ಹೋಗಿ, ವಾಗ್ವಾದದಲ್ಲಿ ವಂದಿಯನ್ನು ಸೋಲಿಸಿ, ಅವನನ್ನೇ ನೀರಿಗೆಸೆದು, ಸತ್ತವರನ್ನು ಬದುಕಿಸಿ ತಂದ ತೇಜಸ್ವೀ ಈ ಅಷ್ಟಾವಕ್ರ!... ಒಮ್ಮೆ ಅವನು ತನ್ನ ಆಶ್ರಮದ ಬಳಿಯ ಸಮಂಗಾ ಎಂಬ ತೀರ್ಥದಲ್ಲಿ ಜಲಾಂತರ್ಗತನಾಗಿ ಬಹುವರ್ಷ ತಪಸ್ಸು ಮಾಡುತ್ತಿದ್ದ. ದೇವಾಸುರ ಯುದ್ಧವು ಆಗ ತಾನೇ ಮುಗಿದಿದ್ದು, ದೇವತೆಗಳು ಮೇರು ಪರ್ವತದ ಮೇಲೆ ಉತ್ಸವವನ್ನಾಚರಿಸುತ್ತಿದ್ದರು!... ಅಪ್ಸರ ಸ್ತ್ರೀಯರು ಅಲ್ಲಿ ನರ್ತನಕ್ಕಾಗಿ ಹೊರಟಿದ್ದವರು, ದಾರಿಯಲ್ಲಿ ಈ ಮಹರ್ಷಿಯ ಆಶ್ರಮದಲ್ಲಿಳಿದು, ಸ್ನಾನಮಾಡುವಾಗ ಈ ಮುನಿಯ ತಪ್ಪಸ್ಸಿಗೆ ಆಶ್ಚರ್ಯಪಟ್ಟು ಕೊಂಡಾಡಿದರು! ಅಲ್ಲಿ ರಂಭೆ, ತಿಲೋತ್ತಮೆ ಮೊದಲಾದವರೆಲ್ಲ ಕೂಡಿದ್ದರಷ್ಟೆ! ಋಷಿ ಪ್ರಸನ್ನನಾಗಿ 'ಏನು ಬೇಕು?' ಎಂದು ಕೇಳಿದ. ಅವರು 'ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು ನಾವೆಲ್ಲ ಪತಿಯಾಗಿ ಹೊಂದಬೇಕೆಂದು' ಕೇಳಿಕೊಂಡರು. ಮಹರ್ಷಿ ಅನುಗ್ರಹಿಸಿದ... ಹೊರಗೆ ಬಂದ ಮಹರ್ಷಿಯ ರೂಪಕ್ಕೆ ಹೇಸಿ, ಆ ಗಂಟುಗಳನ್ನು ನೋಡಲಾರದೆ, ಅಪ್ಸರೆಯರು ಹೊಟ್ಟೆ ಬಿರಿಯುವಂತೆ ನಕ್ಕರು! ಕುಪಿತನಾದ ಋಷಿ ಶಪಿಸಿದ: "ನೀವು ಕೃಷ್ಣ ಪತ್ನಿಯರೇ ಆದರೂ, ನಿಮ್ಮನ್ನು ದಸ್ಯುಗಳು ಅಪಹರಿಸಲಿ" ಎಂದು!... ಅರ್ಜುನ! ತಿಳಿಯಿತೆ! ನೀನು ಬಿಡಿಸಹೊರಟವರು ಈ ಅಪ್ಸರೆಯರು! ಅದರ ಚಿಂತೆ ನಿನಗಿನ್ನು ಬೇಡ!..

ನೀನು ಗಾಂಡೀವವನ್ನೇಕೆ ಎತ್ತಲಾಗದೆ ಸೋತೆ,ಎಂಬ ಚಿಂತೆಯಲ್ಲಿರುವೆ, ಹೌದೆ! ಈ ವೇದೋಕ್ತ ಕಥೆ ಕೇಳಿಲ್ಲವೇ? ಹಿಂದೆ ಇಂದ್ರನಿಗೆ ವೃತ್ರಾಸುರನ ಭಯ ಆವರಿಸಿತ್ತು! ತ್ವಷ್ಟ ಪ್ರಜಾಪತಿಯು ವಜ್ರಾಯುಧವನ್ನು ದಧೀಚನ ಮೂಳೆಯಿಂದ ನಿರ್ಮಿಸಿಕೊಟ್ಟರೂ, ಇಂದ್ರನಿಗೆ ಅದನ್ನೆತ್ತಲಾಗಲಿಲ್ಲವಂತೆ! ಬೇರೆ ದೇವತೆಗಳಿದ್ದರೂ ಇಂದ್ರ ವಿಷ್ಣುವನ್ನು ಕರೆದು ಸಹಾಯಕ್ಕೆ ಪ್ರಾರ್ಥಿಸಿದನಂತೆ!!

*ವಿಷ್ಣುಸ್ತ್ರೇಧಾತ್ಮಾನಂ ವಿನ್ಯಧತ್ತ ಪೃಥಿವ್ಯಾಂ ತೃತೀಯಂ*
*ಅಂತರಿಕ್ಷೇ ತೃತೀಯಂ ದಿವಿ ತೃತೀಯಂ...*

ಅಧ್ಯಯನ ಸಂಪನ್ನನಾದ ನೀನು ಈ ವೇದವಾಕ್ಯ ಕೇಳಿಲ್ಲವೆ?ವಿಷ್ಣುವು ತನ್ನ ಶಕ್ತಿಯನ್ನು ಪೃಥ್ವಿಯಲ್ಲಿ ಮೂರರಲ್ಲೊಂದು ಭಾಗವನ್ನೂ, ಅಂತರಿಕ್ಷದಲ್ಲಿ ಇನ್ನೊಂದನ್ನೂ, ದ್ಯುಲೋಕದಲ್ಲಿ ಉಳಿದುದನ್ನೂ ಇಟ್ಟು, ವಜ್ರಾಯುಧಪಲ್ಲೂ ತಾನು ಕುಳಿತ ಮೇಲೆ, ಅವನಿಗೆ ಆ ಇಂದ್ರನಿಗೆ ಅದನ್ನು ಆ ಮೂರೂ ಲೋಕಗಳಲ್ಲೂ ಎತ್ತಿ ವೃತ್ರನನ್ನು ಸೋಲಿಸಲು ಆಯಿತು!

*ತತ್ ತ್ರಿಧಾತೋಃ ತ್ರಿಧಾತುತ್ವಂ!*

ಎಂಬಂತೆ ವಿಷ್ಣುವಿಗೆ ತ್ರಿಧಾತು ಎಂಬ ಹೆಸರಾಯಿತು!..ಅರ್ಜುನ!.. ಈವರೆಗೆ ನೀನಾರು? ನಿನ್ನ ಬಿಲ್ಲಿನಲ್ಲಿ ಕುಳಿತಿದ್ದವರಾರು?.. ನೀನು ಈ ವರೆಗೆ ಗೆದ್ದದ್ದು ಯಾರ ಬಲದಿಂದ?.. ಯೋಚಿಸು" ಎನ್ನುತ್ತಾ ಹದ್ದು ಹಾರಿಹೋಯಿತು!

ಅರ್ಜುನನಿಗೆ ಇದೆಲ್ಲ ಕನಸಿನಂತೆ ಕಂಡರೂ, ಜ್ಞಾನೋದಯವಾಗಿ, ವೇಗವಾಗಿ ದಿಬ್ಬಣವನ್ನು ಕೂಡಿಕೊಂಡ!

ದಾರುಕ ಎಚ್ಚೆತ್ತಿದ್ದ! ಕೃಷ್ಣ ಸ್ತ್ರೀಯರಿಗಾದ ಗತಿಗೆ ಮರುಗಿದ! "ಉಳಿದವರನ್ನಾದರೂ ಹಸ್ತಿನಾವತಿಗೆ ಸೇರಿಸೋಣ" ಎನ್ನುತ್ತಾ ದಾರುಕ ಮೇಲೆದ್ದು, ಕೊಳದಲ್ಲಿ ಕೈಕಾಲು ತೊಳೆದು ಕುದುರೆ ಹತ್ತಿದ!

* * *

ಮೂರು ಹಗಲೂ ರಾತ್ರಿ ಮತ್ತೆ ಪಯಣ ನಡೆದು ದಿಬ್ಬಣ ಹಸ್ತಿನಾವತಿಯನ್ನು ತಲುಪಿತು. ಮಾರ್ಗಮಧ್ಯದಲ್ಲಿ ಬೇರೆಲ್ಲೂ ಯಾವ ತೊಂದರೆಯೂ ಆಗಲಿಲ್ಲ.

ಗಾವುದ ದೂರದಲ್ಲಿದ್ದಾಗ ಅರ್ಜುನ ದೂತರಿಬ್ಬರನ್ನು ಧರ್ಮಪುತ್ರನ ಬಳಿ ಕಳುಹಿ "ವಜ್ರನನ್ನು ಕರೆತರುತ್ತಿದ್ದೇವೆ! ದ್ವಾರಕೆಯ ಜನರನ್ನು, ಬೊಕ್ಕಸವನ್ನು, ದೇವಾಗಾರ ಮೂರ್ತಿಗಳನ್ನೂ ಸಹ" ಎಂದು ಸಮಾಚಾರ ಕೊಟ್ಟಿದ್ದ!.. ಏನೂ ತಿಳಿಯದೆ ಧರ್ಮಪುತ್ರ ಭೀಮನ ಮುಖ ನೋಡಿದ!!

* * * * *

## ೧೯. ವಜ್ರ, ಪರೀಕ್ಷಿತರ ಪಟ್ಟಾಭಿಷೇಕ,-ಪಾಂಡವರ ಮಹಾಪ್ರಸ್ಥಾನ!

ಧರ್ಮರಾಜನಿಗೆ ಅರ್ಜುನನ ಮಾತಿನಿಂದ ಏನೂ ತಿಳಿಯಲಿಲ್ಲ! "ವಜ್ರ ಏಕೆ ಇಲ್ಲಿ ಬರುತ್ತಿದ್ದಾನೆ! ದ್ವಾರಕೆಯ ಜನ ಇತ್ತ ಬರುತ್ತಿದ್ದಾರೆಂದರೆ ಅಲ್ಲಿ ಶ್ರೀಕೃಷ್ಣನಿಗೇನಾಯ್ತು?... ಬೊಕ್ಕಸವನ್ನೂ ದೇವಾಗಾರವನ್ನೂ ಇಲ್ಲಿಗೇ ತರುತ್ತಿದ್ದಾರೆಂದರೆ, ಅಲ್ಲಿ ಏನೂ ಉಳಿಸುವ ಸ್ಥಿತಿಯಿಲ್ಲವೆಂದರ್ಥವಲ್ಲವೆ?... ಅಯ್ಯೋ!! ದ್ವಾರಕೆಗೇನಾಗಿದೆ?... ಇಲ್ಲಿ ಆದ ಅಶುಭ ಸೂಚನೆಗಳಿಗೆ ಅದೇ ಅರ್ಥವೆ?... ಒಂದರ ಮೇಲಾದಂತೆ ಇನ್ನೊಂದು ಅಮಂಗಳ ವಿಚಾರಗಳು ಧರ್ಮಜನ ತಲೆಯಲ್ಲಿ ಸುಳಿದಾಡಿ, ಭೀಮಸೇನನ ಮುಖ ನೋಡಿದ!... ಭೀಮ, ಸಮಯಪ್ರಜ್ಞೆಯಿಂದ "ಅಣ್ಣ! ಚಿಂತಿಸಬೇಡ! ನಾನೇ ನಗರದಾಚೆ, ದಿಬ್ಬಣವನ್ನು ಸ್ವಾಗತಿಸಿ, ಸಮಾಚಾರವರಿತು ಬರುತ್ತೇನೆ! ಯಾವುದೂ ನಮ್ಮ ಕೈಯ್ಯಲ್ಲಿಲ್ಲ!... ಬಂದುದನ್ನು ಎದುರಿಸಲೇಬೇಕು!... ಹೇಗೂ ನಾವೂ ವಾನಪ್ರಸ್ಥ ನಿಶ್ಚಯವನ್ನು ಮಾಡಿಯಾಗಿದೆಯಲ್ಲ!... ಅಪ್ಪಣೆ ಕೊಡು" ಎಂದವನೇ ಯುಕ್ತ ಪರಿವಾರದೊಂದಿಗೆ, ರಾಜಮರ್ಯಾದೆಗಳೊಡನೆ, ಯಾದವರನ್ನು ಎದುರುಗೊಳ್ಳಲು ಹೊರಟ... ಯಾವ ವಿಶೇಷ ಪೂರ್ವಭಾವಿ ಸೂಚನೆಯೂ ಇಲ್ಲದುದರಿಂದ ಕೋಟೆಯ ಮಹಾದ್ವಾರದಲ್ಲಿ ಯಾವ ವಿಶಿಷ್ಟಾಲಂಕಾರಗಳಾಗಲಿ, ಉತ್ಸವದ ವಾತಾವರಣವಾಗಲಿ ಇರಲಿಲ್ಲ! "ಯಾದವ ವೀರರನ್ನು ನಗರದಲ್ಲಿ ಮೆರವಣಿಗೆಯೊಡನೆ ಸ್ವಾಗತಿಸಲಾಗುವುದು" ಎಂಬ ತುರ್ತುವಾರ್ತೆಯನ್ನು ಘೋಷಿಸಲಾಯಿತಾದರೂ, ಇದರ ಹಿಂದುಮುಂದು ತಿಳಿಯದೆ ಜನ ಕೇವಲ ಕುತೂಹಲ ತೃಪ್ತಿಗಾಗಿ, ದಿಢೀರನೆ ಮಾಳಿಗೆಗಳ ಮೇಲೂ, ರಸ್ತೆಯ ಎರಡೂ ಬದಿಗಳಲ್ಲೂ ಕಿಕ್ಕಿರಿದು ನಿಂತರು!... ಅರ್ಜುನನಿಗೆ ಈ ಏರ್ಪಾಡಿನಿಂದ ತುಂಬಾ ಇರಿಸುಮುರಿಸೇ ಆಯಿತು! ಶ್ರೀಕೃಷ್ಣ ಪತ್ನಿಯರನ್ನು ಕಾಪಾಡಲಾಗದೇ, ಗಾಂಡೀವವನ್ನು ಎತ್ತಲೂ ಆಗದೆ, ಅಸ್ತ್ರಶಸ್ತ್ರ ಮಂತ್ರಗಳನ್ನೆಲ್ಲ ಮರೆತ "ವೀರ"ನಿಗೆ ಇದು ಅಪಮಾನವೆಂದೇ ಅವನು ಬಗೆದ! ಇತ್ತ ಹಸ್ತಿನಾವತಿಯವರಿಗೆ ಅದೆಲ್ಲ ಏನು ಗೊತ್ತು!...

.... ಉತ್ಸವವನ್ನು ನಗರದ್ವಾರದಲ್ಲಿ ಭೀಮಸೇನ ವಿನಯದಿಂದ ಸ್ವಾಗತಿಸಿದ. ಕುಮಾರ ವಜ್ರನಿಗಿನ್ನೂ ಪಟ್ಟಾಭಿಷೇಕವಾಗಿರದಿದ್ದರೂ, ಭಾವೀ ಯಾದವ ದೊರೆಯಾದುದರಿಂದ ರಾಜಾಶೀರ್ವಾದ ಉಚಿತವಿತ್ತು! ಧೌಮ್ಯರು ಅವಶ್ಯವಿದ್ದುದನೆಲ್ಲ ಮಾಡಿದರು! ಭೀಮ ಈ ಯಾದವ ಬಾಲನನ್ನು ಅಪ್ಪಿ ಮುದ್ದಾಡಿದ್ದಲ್ಲದೆ, ಎತ್ತಿ ಹೆಗಲಮೇಲೆ ಕೂಡಿಸಿಕೊಂಡು ಅಲ್ಲಿ ಸೇರಿದ್ದವರಿಗೆಲ್ಲರಿಗೂ, ಈಗ ನಿರಾಶ್ರಿತರಾಗಿ ಬಂದವರಿಗೂ ತುಂಬಾ ಸಂತೋಷವನ್ನೇ ಉಂಟು ಮಾಡಿದ! ಹಸ್ತಿನಾವತಿಯ ಭಾವೀ ಅರಸುಕುವರ ಪರೀಕ್ಷಿತನೂ ವಜ್ರನನ್ನು ಆಲಂಗಿಸಿ ಆಯ್ತು!... ಯಾದವರ ಅಧಿದೈವಕ್ಕೆ ಭೀಮಾದಿಗಳು ಪ್ರಣಾಮ ಗೌರವ ತೋರಿದರು... ದಿಬ್ಬಣ ಊರೊಳಗೆ ಸಾಗಿತು!... ಅರ್ಜುನ ಕಷ್ಟಪಟ್ಟು ದುಃಖ ತಡೆದುಕೊಂಡು ಆ ಯಾತನಾಮಯ ಸ್ವಾಗತ ಸಂದರ್ಭವನ್ನು ಎದುರಿಸಿದ!... ಪಾಪ!!....

* * * * *

ಯಾದವ ವೃದ್ಧರಿಗೆ, ಸ್ತ್ರೀ-ಪುರುಷರಿಗೆ ಅರಮನೆಯಲ್ಲೇ ತಾತ್ಕಾಲಿಕ ವಸತಿಗೆ ಏರ್ಪಾಡಾಯ್ತು. ದ್ವಾರಕೆಯ ಬ್ರಾಹ್ಮಣರಿಗೆ ಅನ್ನಸತ್ರಗಳಲ್ಲೂ ಧರ್ಮಶಾಲೆಗಳಲ್ಲೂ ಧೌಮ್ಯರು ವಸತಿ ಏರ್ಪಡಿಸಿದರು. ದೇವಾಗಾರ ಮೂರ್ತಿಗಳಿಗೆ ಧರ್ಮಜನ ದೇವಾಗಾರದಲ್ಲೇ ಪೂಜೆಗೆ ಏರ್ಪಾಡಾಯಿತು! ವಾಹನಗಳು ವಾಹಕರು, ಅಶ್ವಾದಿಗಳ ಯೋಗಕ್ಷೇಮವನ್ನು ಸಂಬಂಧಪಟ್ಟವರಿಗೆ ವಹಿಸಲಾಯ್ತು!.... ಬೊಕ್ಕಸವನ್ನು ಸುರಕ್ಷಿತವಾಗಿ ಹಸ್ತಿನಾವತಿಯ ವಿಶೇಷ ಖಜಾನೆಯಲ್ಲಿ ಇಳಿಸಲಾಯ್ತು....

.... ಧರ್ಮಜನೊಡನೆ, ಇತರ ಸೋದರರೊಡನೆ ಅರ್ಜುನ ಏಕಾಂತದಲ್ಲಿ ಕುಳಿತು ತಾನು ಹೋಗಿ ಬಂದ ವೃತ್ತಾಂತ ಹೇಳಲಾರಂಭಿಸಿದ! ದ್ರೌಪದಿ, ಧೌಮ್ಯರು ವಿಶೇಷವಾಗಿ ಉಪಸ್ಥಿತರಿದ್ದರು!... ಎಲ್ಲರಿಗೂ ಏನೋ ದುಗುಡ!... ಅರ್ಜುನ ತಲೆ ಎತ್ತಿ ಸೋದರರನ್ನು ನೋಡಲೂ ಆಗದೆ, ಕಣ್ಣಿತ್ತಿ ನೀರು ತುಂಬಿ, ಕಂಠ ಬಿಗಿದು, ಮಾತಾಡಲಾರದೆ, ಹಲವು ಸಲ ಬಿಕ್ಕುತ್ತಾ ಹೋದ! ...ದ್ರೌಪದಿಗೆ ಕೊಂಚ ಅರ್ಥವಾದಂತೆ ಆಯಿತು!... ಧರ್ಮಜನ್ನೂ ಊಹಿಸಿದ!... "ಹೇಳಬೇಕಾದುದನ್ನೆಲ್ಲ ಹೇಳಿಬಿಡು!... ಯಾವ ಕೆಟ್ಟವಾರ್ತೆಗೂ ಸಿದ್ಧರಿದ್ದೇವೆ!... ಹೇಳು" ಎಂದು ಧರ್ಮಜ ಆಶ್ವಾಸನೆ ಕೊಟ್ಟ!

ಅರ್ಜುನ ಹೇಳಲಾರಂಭಿಸಿದ!: "ಅಣ್ಣ! ಶ್ರೀಕೃಷ್ಣಪ್ರಭುವು ನಮ್ಮನ್ನೆಲ್ಲ ವಂಚಿಸಿ ತನ್ನ ಪರಂಧಾಮಕ್ಕೆ ತೆರಳಿದ!"

ಒಮ್ಮೆಲೇ ಉಳಿದ ಪಾಂಡವರೆಲ್ಲ ಬೆಚ್ಚಿದರು! ದ್ರೌಪದಿ ಮೂರ್ಛಿತಳಾದಳು!... ಬಹುಕಾಲ ಅಲ್ಲಿ ನೀರವವೇ ತಾಂಡವವಾಡಿತು!... ಈ ಮಾತಿನ ಮೇಲೆ ಏನು ವಿಮರ್ಶೆ ಸಾಧ್ಯವಿತ್ತು? ಅರ್ಜುನ ಧೈರ್ಯ ತಂದುಕೊಳ್ಳಲು ಬಹುವಾಗಿ ಯತ್ನಿಸುತ್ತಾ ಮುಂದುವರೆದ:

"ಶ್ರೀಕೃಷ್ಣ ನನ್ನ ಶಕ್ತಿಯನ್ನೂ, ವಿದ್ಯೆಯನ್ನೂ, ಹೃದಯವನ್ನೂ ಅಪಹರಿಸಿಕೊಂಡೇ ಹೋದ! ನಾನು ಹೋಗಿ ಸೇರುವ ವೇಳೆಗೆ ಬಲಭದ್ರನೂ, ಕೇಶವನೂ ಇಹ ಲೋಕವನ್ನು ತ್ಯಜಿಸಿ ಆಗಿತ್ತು!!... ಪಿಂಡಾರಕ ಕ್ಷೇತ್ರ ಮಹಾಪಿಂಡ ಕ್ಷೇತ್ರವಾಗಿ ಹೋಯಿತು! ನಾನು ಹೋದದ್ದು ಎಲ್ಲರ ಉತ್ತರಕ್ರಿಯೆಗೆ ಮಾತ್ರ ಉಪಯುಕ್ತವಾಯಿತು! ಸಮಸ್ತ ಯಾದವರೂ ಮದ್ಯಪಾನ ಮಾಡಿ, ಮದೋನ್ಮತ್ತರಾಗಿ, ಪರಸ್ಪರ ಹೊಡೆದಾಡಿ ಸತ್ತಿದ್ದರು! ಮುನಿಶಾಪ ಫಲಿಸಿಯೇ ಬಿಟ್ಟಿತು!"

ಧರ್ಮಜ: "ದೇವಕೀ ವಸುದೇವರು? ಉಗ್ರಸೇನ ದೊರೆ?... ಎಲ್ಲಿ?"

ಅರ್ಜುನ: "ಅವರಿಗೂ ಉತ್ತರಕ್ರಿಯೆ ಮಾಡಿ ಆಗಿದೆ!... ದ್ವಾರಕೆಯೇ ಸಮುದ್ರದಲ್ಲಿ ಮುಳುಗಿ ಹೋಯಿತು.!!"

ಧರ್ಮಜ: "ಏನಂದೆ?"

ಅರ್ಜುನ: "ಸತ್ಯವನ್ನೇ ಹೇಳುತ್ತಿದ್ದೇನೆ, ಅಣ್ಣ! ಶ್ರೀಕೃಷ್ಣ ಪ್ರಭುವಿನ ಅರಮನೆ ಹೊರತು ಎಲ್ಲ ಸಮುದ್ರದ ಪಾಲಾಗಿದೆ!

ಧರ್ಮಜ: "ರಾಣೀ ವಾಸದವರು?"

ಅರ್ಜುನ: "ರುಕ್ಮಿಣೀದೇವಿ ಮೊದಲಾದ ನಾಲ್ವರು ಸಹಗಮನ ಮಾಡಿಬಿಟ್ಟರು! ಸತ್ಯಭಾಮಾದೇವಿಯಾದಿಯಾಗಿ ಇನ್ನುಳಿದ ನಾಲ್ವರು ವಾನಪ್ರಸ್ಥ ಹೊರಟುಬಿಟ್ಟರು..."

ಧರ್ಮಜ: "ಉಳಿದವರು?"

ಅರ್ಜುನ ಮಾತಾಡಲಿಲ್ಲ! ಕಣ್ಣೀರು ಹರಿಯುತ್ತಾ ತಲೆತಗ್ಗಿಸಿ ಕುಳಿತ! ಈ ವಿಕಾರದ ಅರ್ಥ ಅಲ್ಲಿ ಯಾರಿಗೂ ಆಗಲಿಲ್ಲ! ಕಲ್ಪನೆಗೂ ಮಿಕ್ಕ ಘಟನೆ ಅದು!! ಅರ್ಜುನ ಹೇಗೆ ಹೇಳಿಯಾನು?... ದಾರುಕ ಆಗ ಅಲ್ಲಿಗೆ ಬಂದ! ಧರ್ಮಜ ಅವನನ್ನೇ ನೇರವಾಗಿ ಪ್ರಶ್ನಿಸಿದ. ದಾರುಕ ಆ ರಾಣಿವಾಸದವರನ್ನೆಲ್ಲ ದಸ್ಯುಗಳು ಅಪಹರಿಸಿದ ಬಗೆಯನ್ನೂ, ಅರ್ಜುನನ ಗಾಂಡೀವ ಏನೂ ಮಾಡಲಾಗದ ಕಥೆಯನ್ನೂ, ತಾವು ನಿಸ್ಸಹಾಯಕರಾದ ಬಗೆಯನ್ನು ಕರುಣಾಪೂರ್ಣವಾಗಿ ವಿವರಿಸಿದ! ಧರ್ಮಜ ಅದನ್ನು ನಂಬಲಿಲ್ಲ! ಭೀಮನಿಗೂ ವಿಸ್ಮಯವಾಯಿತು!... ದ್ರೌಪದಿ ಗಾಂಧಾರಿಯನ್ನು ನೆನೆಸಿ "ಅತ್ತೆಯವರೇ! ನಿಮಗೆ ತೃಪ್ತಿಯಾಯಿತೇ?" ಎಂದು ಅಳುತ್ತಾ, ಗೋಳಾಡಿದಳು!... "ಕೊನೆಯಲ್ಲಿ ಯಾವ ಗೋಳಿಗೂ ವಾರಸುದಾರರು ಸ್ತ್ರೀಯರೇ! ಕೌರವರ ಅವಿನಯದಿಂದ, ಅವಿವೇಕದಿಂದ ಅವರು ಸತ್ತರೇ ಹೊರತು, ಶ್ರೀಕೃಷ್ಣನೇನು ಮಾಡಿದ್ದ? ಅವನ ಪತ್ನಿಯರೇನು ಅಪರಾಧ ಮಾಡಿದ್ದರು?..."

ಈ ಪ್ರಶ್ನೆಗೆ ಇತಿಹಾಸ ಎಂದು ಉತ್ತರಿಸೀತು?... ಇನ್ನುಳಿದ ಸಮಾಚಾರವನ್ನೆಲ್ಲ ಕೇಳಿ ಆ ಪುಟ್ಟಸಭೆ ತಲ್ಲಣಿಸಿತು!

"ಅರ್ಜುನ ಗಾಂಡೀವ ಎತ್ತಲಾಗದೇಹೋದ!... ಏನರ್ಥ? ಅಸ್ತ್ರಮಂತ್ರಗಳು ಮರೆತವು!!... ಏನರ್ಥ?... ಆ ಬಿಲ್ಲಿನಿಂದ ಎಂಥೆಂಥ ಯುದ್ಧಗಳಲ್ಲಿ ಅರ್ಜುನ ಜಯಗಳಿಸಿದ್ದ!!.... ಅದು ನಿಜವಾಗಿ ಯಾರ ಜಯ?..." ಅರ್ಜುನ, ತನಗೆ ಹದ್ದು ಪ್ರತ್ಯಕ್ಷವಾಗಿ ಹೇಳಿದ ಐತಿಹ್ಯಗಳನ್ನೂ, ಕೊಟ್ಟ ಎಚ್ಚರಿಕೆಯನ್ನೂ ತಿಳಿಸಿದ... ತನ್ನ ಅವಿವೇಕಕ್ಕೆ ಪರಿತಪಿಸಿದ!...

"ಮೂಢನಾದ ನಾನು ಈ ಚರಾಚರ ಗುರುವಾದ ಭಗವಂತನನ್ನು ನನ್ನ ಸಾರಥ್ಯಕ್ಕೆ ಪ್ರಾರ್ಥಿಸಿ ಅವಹೇಳನ ಮಾಡಿದೆನಲ್ಲ!... ಮೋಕ್ಷೇಚ್ಛೆ ನನಗೇಕೆ ಬರಲಿಲ್ಲ?.... ನನ್ನ ರಥದ ಮುಂದೆ ಕುಳಿತು ಭೀಷ್ಮ, ದ್ರೋಣ, ಕರ್ಣ, ಶಲ್ಯಾದಿ ವೀರರ ಆಯುಸ್ಸನ್ನೂ ಮನಸ್ಸನ್ನೂ ಹೀರಿ ಕುಡಿದವನು ಕೃಷ್ಣಭಗವಂತನೇ ಅಲ್ಲವೇ?.... ಅವನನ್ನು ನೋಡುತ್ತ ನೋಡುತ್ತ ಆ ದಿವ್ಯಾನುಭಾವದಲ್ಲಿ ಮುಳುಗಿಯೇ ಅಲ್ಲವೇ, ನನ್ನ ಶತ್ರುಗಳು ಯುದ್ಧದಲ್ಲಿ ನನ್ನ ಮೇಲೆ ಬಾಣ ಬಿಡಲೂ ಮರೆತರು?... ಆ ಕೃಷ್ಣನೊಡನೆ ನಾನಾಡಿದ ಲೀಲೆಗಳು, ಆ ಸಹಚರ್ಯದಲ್ಲಿ ನಡೆಸಿದ ವಿಜಯಯಾತ್ರೆಗಳು ಒಂದೇ ಎರಡೇ?..." ದ್ರೌಪದೀ ಸ್ವಯಂವರ, ಸುಭದ್ರಾ ಪರಿಣಯ, ಇಂಥ ರಸಮಯ ಪ್ರಸಂಗಗಳೂ, ಅರಗಿನ ಮನೆಯಿಂದ ಪಾರಾದದ್ದು, ಮಂತ್ರಾಲೋಚನೆಗಳು, ರಾಯಭಾರ, ಅರಣ್ಯದಲ್ಲಿ ದುರ್ವಾಸರಿಂದ ರಕ್ಷಿಸಿದ್ದು... ಎಲ್ಲ ಅರ್ಜುನನ ಮನದಲ್ಲಿ ಹಾಯುತ್ತಾ ಅವನು ಹಲುಬುತ್ತಿದ್ದ! "ಕೂಡೆಯೇ ಇದ್ದ ಅವನನ್ನು ಯಾದವರು ತಿಳಿಯದೆಯೇ ಹೋದರಲ್ಲ! ರಕ್ಷಕನ ಎದುರೇ ನಿರಾಶ್ರಿತರಂತೆ ಸತ್ತರಲ್ಲ! ಏನು ಮಾಯೆ?"

ಧರ್ಮಜ ಹೇಳಿದ: "ಅರ್ಜುನಾ! ನಿನ್ನ ಗೋಳು ಈಗ ನಮ್ಮೆಲ್ಲರ ಗೋಳೂ ಆಗಿದೆ!... ಹಿಂದೆ ರಾಜಸೂಯ ನಡೆಸಿ, ನನ್ನನ್ನು ಸಾಮ್ರಾಟ್ ಆಗಿಸಿದವನನ್ನು 'ಕೌರವರು ಜೂಜಿಗೆ ಕರೆಯುತ್ತಿದ್ದಾರೆ! ಹೋಗುವುದುಚಿತವೇ?' ಎಂದು ನಾನು ಒಂದು ಮಾತನ್ನು ಕೇಳದೆಯೇ ಹೋದೆನಲ್ಲ! ಅದು ಮಾಯೆ ಅಲ್ಲವೇ?... ಅವನಿಗೆ ತನ್ನವರು, ಪರರು ಎಂಬ ಭೇದವಿಲ್ಲ! 'ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ' ಎಂದು ಹೇಳಿದನೆಂದು ನೀನೇ ಆಗಾಗ ಹೇಳುತ್ತಿರಲಿಲ್ಲವೇ?... ಹೀಗಾಗಬೇಕೆಂಬುದು ಕೃಷ್ಣಸಂಕಲ್ಪವೇ ಇದ್ದೀತು! ಅದನ್ನು ನಾವು ಒಗ್ಗಿಸಿಕೊಳ್ಳಬೇಕೇ ಹೊರತು ಪುನಃ ಪುನಃ ಪರಾಮರ್ಶೆಯಿಂದ ಏನು ಲಾಭ?"

ಅರ್ಜುನ: "ಅಣ್ಣ! ನಾನು ದ್ವಾರಕೆಗೆ ಹೊರಟ ದಿನ ರಾತ್ರಿ ನೀನೂ ಭೀಮಸೇನನೂ ಗೂಢಚರ್ಯೆ ನಡೆಸುವುದಾಗಿ ಮಾತಾಗಿತ್ತು! ಹೋಗಿಬಂದಿರಾ? ಏನು ವಿಷಯ?"

ಧರ್ಮಜ: "(ವ್ಯಗ್ರನಾಗಿ)... ಆಂ!... ಹೋಗಿ ಬಂದೆವು! ಗೂಢಚಾರರೆಂದುದು ನಿಜ!... ಆಸ್ಥಾನದ ವಣಿಜನೊಬ್ಬನ ಮನೆಯಲ್ಲಿ, ಸೇನಾನಾಯಕರ ಮನೆಯಲ್ಲಿ, ಇನ್ನೂ ಅನೇಕರ ಧನಿಕರ ಮನೆಗಳಲ್ಲಿ ಅಂಥ ಬಹಿರಂಗ ಹಾದರ ನಡೆಯುತ್ತಿತ್ತು. ಅವರನ್ನು ಬಂಧಿಸಿ ಸೆರೆಯಲ್ಲಿಟ್ಟು, ಉಗ್ರಶಾಸನ ಮಾಡಿದ್ದೇವೆ.... ಈಗ ಒಂದು ಬಿಗಿ ಬಂದಿದೆ! ಆದರೂ ಕಲಿಗಾಲ ಆರಂಭವಾಯಿತು!... ನೋಡು, ಎಲ್ಲವನ್ನೂ ಶಾಸನವೇ ಮಾಡದು!! ಜನರ ಬುದ್ಧಿಗಳಲ್ಲೇ ಸರಿ-ತಪ್ಪು ಕಲ್ಪನೆ, ಅಧರ್ಮ ಭೀತಿ, ರಾಜಭಯ ಉಂಟಾಗಬೇಕು!... ದೈವಭಕ್ತಿ ಇದರ ಧನಾಂಶದ ಮುಖ! ಅದಿದ್ದರೆ ಈ ಶಾಸನಗಳ, ಭಯಗಳ ಆವಶ್ಯವೇ ಇರುವುದಿಲ್ಲ!... ದುರ್ಯೋಧನ ಪಕ್ಷದವರು... ಅದೇ ವಿಚಾರಧಾರೆಯವರೂ,... ಕರ್ಣಪಕ್ಷಪಾತಿಗಳೂ ಇನ್ನೂ ಬಹುಸಂಖ್ಯೆಯಲ್ಲಿದ್ದಾರೆ... ಕ್ರಮೇಣ ಅವರನ್ನು ದಾರಿಗೆ ತರಬೇಕು!... ಪರೀಕ್ಷಿತನಿಗೆ ಎಲ್ಲವನ್ನೂ ಉಪದೇಶಿಸಿ ಹೊರಡೋಣ!... ನಮ್ಮ ಕರ್ತವ್ಯ ನಾವು ಮಾಡಿದರೆ ಅದೇ ತೃಪ್ತಿ."

ಸಭೆ ಏಳುವುದರಲ್ಲಿತ್ತು. ವೇದವ್ಯಾಸರು ಬಂದರು!

ವ್ಯಾಸರು: "ಧರ್ಮಜ! ನಿನ್ನ ದು:ಖದಿಂದ ಈಗ ಯಾರಿಗೂ ಯಾವ ಲಾಭವೂ ಇಲ್ಲ! ಜ್ಞಾನಿಗೆ ದು:ಖವೂ ಲೋಕೋಪಕಾರಕವಾದಾಗ ಅದಕ್ಕೇ ಕಾರುಣ್ಯವೆನ್ನುವರು! ಪರದು:ಖದಲ್ಲಿ ಭಾಗಗೊಳ್ಳುವ ದು:ಖ, ಒಂದು ಕಲ್ಯಾಣ ಗುಣವೇ ಹೌದು. ಆದರೆ ಅನಿವಾರ್ಯವಾಗಿ ನಡೆದೇಹೋದ ಒಂದು ಮಹಾ ಘಟನೆಯ ಬಗೆಗೆ ವ್ಯರ್ಥವಾಗಿ ದು:ಖಿಸುವುದು ಹೀನಗುಣ; ಮನುಷ್ಯನ ಪ್ರಜ್ಞೆಯನ್ನೇ ಅದು ನಾಶಮಾಡಿ ಬಿಡುತ್ತದೆ! ಯಾವ ಪುರುಷಾರ್ಥವನ್ನೂ ಸಾಧಿಸದ ಅದನ್ನು ವಿವೇಕಿಯು ತೊರೆಯಬೇಕು!... ಕೃಷ್ಣ ಎಂಥ ಯೋಗಿ!!... ಈ ವಿಷಯವನ್ನು ಮನಗಂಡಿರುವೆಯಾ? ಲೋಕಕ್ಕೆ ಅಂಟಿಯೂ ಅಂಟದಂತಿದ್ದು ಕರ್ತವ್ಯ ಕರ್ಮಗಳನ್ನು ಎಷ್ಟು ಚೆನ್ನಾಗಿ ಮಾಡಿತೋರಿದ, ನೋಡಿದೆಯಾ? ಎಲ್ಲೋ ಹುಟ್ಟಿದ, ಎಲ್ಲೋ ಬೆಳೆದ! ಯಾರನ್ನೂ ಅವನು ದೂರಲಿಲ್ಲ! ಯಾವ ತಾಯಿಯನ್ನು ಅಂಟಿಕೊಳ್ಳಲೂ ಇಲ್ಲ, ಯಾರನ್ನು ಬಿಡಲೂ ಇಲ್ಲ! ದುಷ್ಟರಾದ ತನ್ನವರನ್ನು ಕೊಂದ! ಶಿಷ್ಟರಾದ ಪರರನ್ನು ಅನುಗ್ರಹಿಸಿದ! ಯಾವ ಅಧಿಕಾರವನ್ನೂ ಬಯಸಲಿಲ್ಲ! ಯಾರಿಗೂ ಹೆದರಲಿಲ್ಲ! ಹೇಳಬೇಕಾದುದನ್ನು, ಹೇಳಬೇಕಾದಲ್ಲಿ, ದಿಟ್ಟವಾಗಿ, ದಾಕ್ಷಿಣ್ಯವಿಲ್ಲದೆ, ಅಸ್ಖಲಿತವಾಗಿ ಹೇಳಿಯೇ ಹೇಳಿದ! ದೈವಾಯತ್ತವಾಗಿ ಬಂದ ಯಾವ ಕರ್ತವ್ಯವನ್ನೂ ಹೀನವೆಂದು ಅವನು ಭಾವಿಸಲಿಲ್ಲ! ದನ ಕಾಯುವುದು, ಸಗಣಿ ಬಳಿಯುವುದು ಮೊದಲ್ಗೊಂಡು, ಹಿರಿಯರಾದ ಭೀಷ್ಮಾದಿಗಳನ್ನು ತಿದ್ದಿ ಅವರಿಗೂ ಉಪದೇಶ ಕೊಡುವವರೆಗೆ- ನಿನ್ನ ಸಾರಥ್ಯವಾಗಲಿ, ನಿನಗಾಗಿ ದೌತ್ಯವಾಗಲಿ, ನಿನ್ನ ಮನೆ ಎಂಜಲು ಬಳಿಯುವುದಾಗಲಿ, ಯಾವುದೂ ಅವನಿಗೆ ಕೈಂಕರ್ಯವೇ ಆಯಿತು!... ಇಂಥ ಯೋಗಿಯನ್ನು ಜಗ ಕಂಡಿದೆಯೇ?... ಕೃಷ್ಣ ವಿಶ್ರಾಂತಿ ಪಡೆದನೇ?.... ಸ್ತ್ರೀಯರ ಬಗೆಗೆ, ನೊಂದವರ ಬಗೆಗೆ, ಅವನ ಅನುಕಂಪ ಅಪಾರವಿತ್ತೆಂದು ಬಲ್ಲೆಯಷ್ಟೆ?... ಅಲ್ಲಿ ಯಾರ ಜಾತಿಯನ್ನಾದರೂ ನೋಡಿದನೇ?... ಆ ಕೃಷ್ಣ ಯಾರು?... ಅವನೇ ಕಾಲ! ಆಸ್ತಿಕರು ದೇವರೆಂದು ಕರೆಯುವುದನ್ನೇ ನಾಸ್ತಿಕರೂ ಕಾಲವೆಂದೊಪ್ಪಬೇಕಾಗುತ್ತದೆ!...

*ಕಾಲಮೂಲಮಿದಂ ಸರ್ವಂ ಜಗದ್ಬೀಜಂ ಯುಧಿಷ್ಠಿರ।*
*ಕಾಲಏವ ಸಮಾದತ್ತೇ ಪುನರೇವ ಯದೃಚ್ಛಯಾ॥*

ಸೃಷ್ಟಿಸುವುದೂ ಅದೇ, ರಕ್ಷಿಸುವುದೂ ಅದೇ, ಕೊನೆಗಾಣಿಸುವುದೂ ಅದೇ! ನಿನ್ನ ಕಾಲ ಮುಗಿಯಿತು! ಅದಕ್ಕೇ ಅರ್ಜುನನ ಗಾಂಡೀವ ಕೆಲಸ ಮಾಡಲಿಲ್ಲ!... ಈ ಮಾಯೆ ನೋಡು!! ಒಬ್ಬನಿಗೆ ಸಾವಿನ ಬಯಕೆ ಬರುವಾಗ ಬೇರೊಬ್ಬನಿಗೆ ಬದುಕಿನ ಬಯಕೆ ಇದ್ದೇ ಇರುತ್ತದೆ! ನಿನಗೆ ನಾಕಾದದ್ದು ಬೇರೊಬ್ಬನಿಗೆ ಬೇಕಾಗಿರುತ್ತದೆ! ನನಗೆ ಜಗತ್ತು ಬೇಡವೆನಿಸಿದಾಗ ಬೇರೊಬ್ಬನಿಗೆ ಅದು ಬೇಕಾಗಿಯೇ ಇರುತ್ತದೆ! ಅದೇ ಕಾಲದ ಮರ್ಮ! ಆದಿಯಲ್ಲಿ ಅಂತ್ಯ, ಅಂತ್ಯದಲ್ಲಿ ಆದಿ!... ಪರೀಕ್ಷಿತ ಸಮರ್ಥನಿದ್ದಾನೆ! ಅಧರ್ಮವನ್ನು ಅವನು ಸದೆಬಡಿಯಬಲ್ಲ! ಬೇಗ ಅವನಿಗೆ ಪಟ್ಟಗಟ್ಟಿ ನೀವಿನ್ನು ವಾನಪ್ರಸ್ಥರಾಗಿ ಹೊರಡಿ!"

ಧರ್ಮಜ: "ಗುರುವೇ, ಅದೇ ನಮ್ಮ ನನ್ನ ತಮ್ಮಂದಿರೆಲ್ಲರ ನಿಶ್ಚಯವೂ ಆಗಿದೆ!... ತಾವು ಹೇಳಿದ ಉಪದೇಶಕ್ಕೆ ಋಣಿಯಾಗಿದ್ದೇನೆ. ಆದರೆ ಒಂದು ಸಂದೇಹ!... ಕಲಿಯುಗ ಆರಂಭವಾಗಿದೆ ಎಂದು ಹೇಳುತ್ತೀರಿ! ಅದರ ಆದಿ ಲಕ್ಷಣಗಳನ್ನು ನಾನೇ ಕಣ್ಣಿಂದ ಕಂಡಿದ್ದೇನೆ!! ಇಂಥ ಅಧರ್ಮ ಕಾಲದಲ್ಲಿ ಯಾರಿಗೆ ಏನು ಸಾಧನೆ?... ಪರೀಕ್ಷಿತನಾದರೂ ಕಲಿಪುರುಷನನ್ನು ಹೇಗೆ ನಿಗ್ರಹಿಸಿಯಾನು?... ಈ ಕಾಲಪ್ರವಾಹ ಹೀಗಾದುದರಿಂದ ಯಾರಿಗೆ ಲಾಭ?... ಕಾಲ ಹೀಗೇಕೆ ವಿಪರಿವರ್ತನೆ ಹೊಂದಬೇಕು? ದೇವರ ಈ ಸಂಕಲ್ಪಕ್ಕೆ ಏನರ್ಥ?"

ವ್ಯಾಸರು: "ಯುಧಿಷ್ಠಿರ! ಜ್ಞಾನಿಯಾಗುವವನು ಕುಡಿಯಬೇಕಾದ ಮೊದಲ ಕಾಲಕೂಟ ಈ ಕಾಲಸ್ವಭಾವವನ್ನು ಕುರಿತ ತಿಳುವಳಿಕೆಯೇ ಆಗುತ್ತದೆ!... ಕೇಳು!... ಕಾಲ ಒಂದು ನಿರಂತರ

ಪ್ರವಾಹ!... ಅದಿಲ್ಲದೆ ಈ ಇಹಲೋಕದ ಯಾವ ವೃತ್ತಾಂತವೂ, ವ್ಯಕ್ತಿಯೂ, ಮೌಲ್ಯವೂ, ಬದುಕೂ-ಸಾವೂ,... ಏನೂ ಇಲ್ಲ! ಆದರೆ ಈ ಪ್ರವಾಹದ ಉದ್ದೇಶ್ಯ, ಯಾವುದನ್ನೂ ಬಹುಕಾಲ ಇರಗೊಡದೆ, ಇರುವಷ್ಟರಲ್ಲಿ ಅವಕ್ಕೆ ಅರ್ಥ ತಂದುಕೊಡುತ್ತಾ, ಅದು ಮುಗಿಯಲಿ ಬಿಡಲಿ, ಆ ಅವಕಾಶ ಮುಗಿದೊಡನೆ, ಯಾವುದನ್ನೂ ಕೊಚ್ಚಿಕೊಂಡು ಹೋಗಿ, ನಿರುಪಯುಕ್ತ ವಸ್ತುಗಳ ಅವ್ಯವಹಾರ್ಯವೆನಿಸುವ ಪದಾರ್ಥಗಳ ಸಾಲಿಗೆ ಸೇರಿಸಿ ಬಿಡುತ್ತದೆ! - 'ಕಲ್' ಎಂದರೆ 'ಸೇರಿಸುವುದು' ಕಲಯತಿ ಇತಿಕಾಲ: -ಅಥವಾ 'ಎಣಿಸುವುದು' ಎಂದೂ ಅರ್ಥವಾದರೆ, ಹಾಗೆ ಸೇರಿಸಿದ್ದನ್ನು ಎಣಿಸುತ್ತದೆ! ಮನುಷ್ಯ ಹಾಗಾಗುವ ಮೊದಲು ತನ್ನ ಜನ್ಮ ಸಾರ್ಥಕ್ಯ ಮಾಡಿಕೊಳ್ಳಬೇಕು ಎಂಬುದು ನಮಗೆ ಇದರಲ್ಲಿ ಪಾಠ!! ಅದನ್ನವನು ಮಾಡಿಕೊಂಡನೋ ಬಿಟ್ಟನೋ! ಎಂದು ಕಾಲ ಕಾಯುವುದಿಲ್ಲ!! ಅವಕಾಶ ಕೊಟ್ಟು ನೋಡಿ, ಕೊಚ್ಚಿಹಾಕಿ ಬಿಡುತ್ತದೆ!... ಕಾಲದ ಈ ಸ್ವರೂಪವನ್ನೂ ಉದ್ದೇಶ್ಯವನ್ನೂ ತಡೆಯುವವರೂ, ಬದಲಿಸಲು ಹೊರಡುವವರೂ ಈ ಕಾಲಪ್ರವಾಹದಲ್ಲಿ ಹುಟ್ಟಿ ಬಂದು ಕೊಚ್ಚಿಹಾಕಲ್ಪಡುತ್ತಾರೆಂಬುದೇ ಕಾಲದ ವೈಚಿತ್ರ್ಯ! ದುರ್ಯೋಧನ, ಜರಾಸಂಧ, ಕಂಸಾದಿಗಳು ಈ ಬಗೆಯವರು! ಎಂಥ ಬಲಾಢ್ಯನನ್ನೂ ಕಾಲ ಮುಗಿಸುತ್ತದೆ! ಅದರ ಬಲಕ್ಕೆ ಬೇರಾವುದೂ ಸಮವಲ್ಲ!"

ಧರ್ಮಜ: "ನನ್ನ ಪ್ರಶ್ನೆ ಇದಲ್ಲ, ಗುರುವೇ? ಕಾಲದಲ್ಲೇ ಒಳ್ಳೆಯಕಾಲ, ಕೆಟ್ಟಕಾಲ ಎನ್ನುತ್ತಾರಲ್ಲ! ಕಲಿಯೆಂಬುದೇ ಕೆಟ್ಟ ಕಾಲವಾದರೆ, ಇದರಲ್ಲಿ ಒಳ್ಳೆಯದಕ್ಕೇನು ಜಾಗ? ಒಳ್ಳೆಯವರು ಇಲ್ಲಿ ಹೇಗೆ ಬಾಳಿಯಾರು? ಇಂಥ ದುಷ್ಪ್ರವಾಹವನ್ನು ದೇವರು ಏಕೆ ನಿರ್ಮಿಸುತ್ತಾನೆ?"

ವ್ಯಾಸರು: "ಜ್ಯೋತಿಷಿಗಳು ಕೃತ, ತ್ರೇತಾ, ದ್ವಾಪರ, ಕಲಿಗಳನ್ನೂ ಅವುಗಳ ವರ್ಷಸಂಖ್ಯಾ ಪ್ರಮಾಣಗಳನ್ನು ಹೇಳುವ ದೃಷ್ಟಿಬೇರೆ! ಆಗಬಾರದುದೆಲ್ಲ, ಜನಮಾಡಬಾರದುದೆಲ್ಲ ಈ ಕಲಿಯಲ್ಲಿ ಆಗುತ್ತವೆ, ನಡೆಯುತ್ತವೆಂದು ಒಂದು ಒಟ್ಟಾರೆ ದೃಷ್ಟಿಯಿಂದ ಹೇಳುವ ವಿಧಾನವೂ ಬೇರೆ! ನಾನೇ ಅದನ್ನೆಲ್ಲ ನಿನಗೆ ಹೇಳಿದ್ದೇನೆ.... ಕಾಲವನ್ನು ನೋಡುವ ಇನ್ನೊಂದು ಉಪಯುಕ್ತ ದೃಷ್ಟಿ, ಜ್ಞಾನಿಗಳಿಗೆ ಇದ್ದೇ ಇದೆ.

***ಕಲೌ ಕೃತಯುಗಂ ತಸ್ಯ ಕಲಿಸ್ತಸ್ಯ ಕೃತೇ ಯುಗೇ।***
***ಯಸ್ಯ ಚೇತಸಿ ಗೋವಿಂದೋ। ಹೃದಯೇ ಯಸ್ಯ ನಾಚ್ಯುತ:॥***

ಎಂಬ ಅದರ ಸಂಗ್ರಹವನ್ನು ನಾನೇ ಬೇರೆ ಕಡೆ ಮಾಡಿದ್ದೇನೆ! ಸದಾ ಭಗವಂತನ್ನು ನೆನೆಯುವವನು ಕಲಿಯುಗದಲ್ಲಿದ್ದರೂ ಅದು ಅವನಿಗೆ ಕೃತವೇ! ಹಾಗೆ ನೆನೆಯದವನು ಕೃತದಲ್ಲಿದ್ದರೂ ಅದು ಅವನಿಗೆ ಕಲಿಯೇ!... ಬರೀ ಒಂದು ಯುಗದಲ್ಲಿ ಹುಟ್ಟಿ ಬರುವುದೇ ಪುಣ್ಯವೂ ಪಾಪವೂ ಆಗಿಬಿಡುವುದಿಲ್ಲ! ಹಿರಣ್ಯಕಶಿಪುವು ಕೃತದಲ್ಲಿದ್ದು ಸಾಧಿಸಿದ್ದೇನು? ರಾವಣ ತ್ರೇತೆಯಲ್ಲಿದ್ದು ಸಾಧಿಸಿದ್ದೇನು? ಅಲ್ಲೂ ಈ ದುಷ್ಟರೂ, ಈ ಬಗೆಯ ಪುಂಡರೂ, ಮೌಲ್ಯ ವಿರೋಧಿಗಳೂ ಇದ್ದೇ ಇದ್ದರಲ್ಲವೆ? ಆದರೆ ಪ್ರಾಚುರ್ಯದೃಷ್ಟಿಯಿಂದ, ಸಮುದಾಯ ದೃಷ್ಟಿಯಿಂದ ನೋಡಿದಾಗ ಅನ್ಯಾಯ ಅಧರ್ಮಗಳಿಗೆ ಅದು ಪ್ರಧಾನ ಕಾಲವಾಗಿರಲಿಲ್ಲ! ದ್ವಾಪರ, ಕಲಿಗಳಲ್ಲಿ ಆ ಪ್ರಾಚುರ್ಯ ಹೆಚ್ಚು; ಇಲ್ಲೂ ಕಂಸ ಜರಾಸಂಧ ದುರ್ಯೋಧನಾದಿಗಳು ಇದ್ದೂ, ಕಾಲಪ್ರವಾಹವನ್ನು ತಮ್ಮ ಕಡೆ ಒಲಿಸಿಕೊಳ್ಳಲು, ಸೆಳೆಯಲು ಯತ್ನಿಸಿದರೂ, ಇಲ್ಲೂ ಶಿಷ್ಟರು ಇದ್ದು ಅದಾಗದಂತೆ ಮಾಡಿದರು! ನನ್ನ ಮಗ ವಿದುರ, ಶಿಷ್ಟಾಗ್ರೇಸರ ಈ ಕಾಲದಲ್ಲೇ ಇದ್ದನಲ್ಲವೇ? ನಿನ್ನಂತಹವರೂ ಈವರೆಗೆ ಇಲ್ಲೇ ಇಲ್ಲವೇ?.... ಕಲಿಯಲ್ಲಿ ಧರ್ಮವೇ ಇಲ್ಲವೆನ್ನಬೇಡ! ಅದಕ್ಕೆ ಅಡಚಣೆ ಹೆಚ್ಚು, ಅಷ್ಟೆ! ಧರ್ಮಸಾಧನೆ ಹೆಚ್ಚು ಕಠಿಣ, ಅಷ್ಟೆ!... ಕಾಲಪ್ರವಾಹ ತನ್ನಷ್ಟಕ್ಕೆ ತಾನೇ ಒಳ್ಳೆಯದೂ ಕೆಟ್ಟುದೂ ಆಗಿರುವುದಿಲ್ಲ! ಪ್ರಜೆಗಳು ಅದರಲ್ಲಿ ಏನು ಹಾಕುತ್ತಾರೆಯೋ ಅದೇ ಆ ಪ್ರವಾಹದ ವಿಷಯವಾಗುತ್ತದೆ! ಅಗ್ನಿಯಲ್ಲಿ ಸುರಿಯುವ ವಸ್ತುಗಳು ಅದರ ಜ್ವಾಲಾವರ್ಣವನ್ನು ಬದಲಿಸುವಂತೆ, ಕಾಲಪ್ರವಾಹದಲ್ಲಿ ಜನ ಬಿತ್ತುವ ವಿಚಾರ ಬೀಜಗಳ

ಫಲಗಳನ್ನೇ ಕಾಲಪುರುಷ ಅನುಗ್ರಹಿಸುತ್ತಾನೆ! ಅದು ಯಾರಿಗೂ ಶತ್ರುವೂ ಅಲ್ಲ, ಮಿತ್ರನೂ ಅಲ್ಲ ಯಾವ ಕಾಲ, ಯಾವ ಯುಗದಲ್ಲೂ, ಇರುವುದೇ ವ್ಯಕ್ತಿಯ ಪರಿಪೂರ್ಣತೆಯ ಸಾಧನೆಗಾಗಿ, ಎಂಬುದನ್ನು ಮರೆಯಬೇಡ! ಅದು ನಮಗೇ ಲಾಭ!! ಪರಿವರ್ತನೆ ಅದರ ಧರ್ಮ!... ದೇವರ ಸಂಕಲ್ಪ ಎಂದೆಂದೂ ಜಗತ್ಕಲ್ಯಾಣವೇ!"

ಧರ್ಮಜ ಚಿಂತಿಸಿದ! ಇದರಲ್ಲಿ ಜೀರ್ಣಿಸಿಕೊಳ್ಳಬೇಕಾದ ಬಹ್ವಂಶಗಳಿರುವುದನ್ನು ಯೋಚಿಸುತ್ತಾ, ತಾನು ಈಗ ಪರೀಕ್ಷಿತನಿಗೆ ಕೊಡುತ್ತಿರುವ "ಬಳುವಳಿ"ಯ ಭಾರ ಕೊಂಚ ಕಮ್ಮಿಯಾದಂತೆ ಎನಿಸಿತು! ವ್ಯಾಸರು ಹೊರಟರು!

ಧರ್ಮಜ ಹೇಳಿದ: "ಪ್ರಭು! ಪರೀಕ್ಷಿತನಿಗೆ ಪಟ್ಟಕಟ್ಟುವ ದಿನ ಬರುತ್ತಾ....?"

ವ್ಯಾಸ: "ಅಂದು ನನ್ನನ್ನು ನೆನೆ! ಖಂಡಿತ ಬಂದು ಆಶೀರ್ವದಿಸುತ್ತೇನೆ.... ನೀನು ವಾನಪ್ರಸ್ಥಕ್ಕೆ ಹೋಗುವಾಗ ಮರುಗಬೇಡ!... ಸಮಚಿತ್ತನಾಗಿರು!... ಪರೀಕ್ಷಿತ ಬಲುಸಮರ್ಥ! ಶ್ರೀಕೃಷ್ಣನ ವಿಶೇಷಾನುಗ್ರಹ ಅವನಿಗುಂಟು!... ಚಿಂತಿಸಬೇಡ" ಎನ್ನುತ್ತಾ ಅಂತರ್ಧಾನರಾದರು!

*****

ಅರಮನೆಯ ಬ್ರಾಹ್ಮಣರು ಪರೀಕ್ಷಿತನ ಪಟ್ಟಾಭಿಷೇಕಕ್ಕೆ ಒಂದು ಒಳ್ಳೆಯ ದಿನ ನೋಡಿ ಶುಭ ಮುಹೂರ್ತವಿಟ್ಟರು!... ಅದಾಗಿ ಎರಡನೇ ದಿನಕ್ಕೆ ವಜ್ರನಿಗೆ ಇಂದ್ರಪ್ರಸ್ಥದಲ್ಲಿ ಪಟ್ಟಾಭಿಷೇಕಕ್ಕೆ ಇನ್ನೊಂದನ್ನೂ ಸಹ!!... ಎರಡೂ ಮುಹೂರ್ತಗಳು ಮುಗಿದ ಹದಿನೈದು ದಿನಗಳ ನಂತರ ಪಾಂಡವರ ವಾನಪ್ರಸ್ಥಕ್ಕೆ, ಆತ್ಮಶ್ರಾದ್ಧಾದಿಗಳಿಗೆ- ಇನ್ನೊಂದು ಮುಹೂರ್ತವೂ ನಿಷ್ಕರ್ಷೆ ಆಯಿತು!... ಹಸ್ತಿನಾವತಿಯಲ್ಲಿ ತುಂಬ ಸಂಭ್ರಮದ ವಾತಾವರಣ ನಿರ್ಮಾಣವಾಯಿತೆಂದರೂ, ಕೃಷ್ಣನಿಲ್ಲದ ಕೊರತೆಯೊಂದು ಕಡೆ! ಪಾಂಡವರು ಇನ್ನೇನು ಕಾಡಿಗೆ ಹೊರಟರೆಂಬ ವಾರ್ತೆಯೊಂದು ಕಡೆ!!. ಹೀಗಾಗಿ ಅದು ಮಿಶ್ರಸಂದರ್ಭವಾಗಿತ್ತು. ಅಂದಿನ ಸಭೆಯಲ್ಲಿ ಸಪ್ತರ್ಷಿಗಳೂ ಹಾಜರಿದ್ದುದು ವಿಶೇಷ. ಧೌಮ್ಯರ ಪುತ್ರ ಇನ್ನು ಅಲ್ಲಿ ಪುರೋಹಿತ! ಧೌಮ್ಯರು ತಾವು ಮತ್ತೆ ಅರಣ್ಯವಾಸ ಬಯಸುವುದಾಗಿ ಖಡಾಖಂಡಿತವಾಗಿ ಹೇಳಿಬಿಟ್ಟರು!

ಗರ್ಗಾಚಾರ್ಯರು ಹಾಗೆ ಮಾಡಲಾಗದೆ, ಹೊಸ ದೊರೆ, ಶಿಶು ವಜ್ರ, ಪ್ರಾಪ್ತ ವಯಸ್ಕನಾಗುವವರೆಗೆ ತಮಗೆ ಆಯುಷ್ಯವಿರುವುದಾದರೆ, ಈ ಎಳೆದೊರೆಯನ್ನು ಕೈಬಿಡದೆ ರಕ್ಷಿಸುವುದಾಗಿ ಮಾತುಕೊಟ್ಟ ಮೇಲೆಯೇ ಧರ್ಮಜ ಕೊಂಚ ನಿಶ್ಚಿಂತನಾದ!... ದ್ರೌಪದೀದೇವಿ ದಾನಧರ್ಮಾದಿಗಳನ್ನು ಆರಂಭಿಸಿದಳು!... ಸತ್ಯಭಾಮಾದೇವಿಯನ್ನು ತಾನು ಕಾಣದೆಯೇ, ಅವಳು ಬೇರೆತ್ತಲೋ ವಾನಪ್ರಸ್ಥಹೊರಟದ್ದು ಅವಳಿಗೆ ಆಗ ತಡೆಯದ ದುಃಖವಾಗಿತ್ತು!.... ಧರ್ಮಜನನ್ನು ಅವಿವೇಕದಿಂದ ದೂಷಿಸುತ್ತಿದ್ದವರಿಗೂ ಪಶ್ಚಾತ್ತಾಪವಾಗಿ ಹಲವರು ಕ್ಷಮೆ ಕೇಳಿ ಆಗಿತ್ತು! ಸೆರೆಮನೆಯಲ್ಲಿದ್ದ ದುರಾಚಾರಿಗಳಲ್ಲೂ ಪರಿವರ್ತನೆ ಕಂಡು ಚಾರರು ಅರಸನಿಗೆ ಅರುಹಿದರು! ದೊರೆ ಅವರ ಬಿಡುಗಡೆಗೆ ಏರ್ಪಡಿಸಿ, ಸದುಪದೇಶ ಮಾಡಿದ!... ಈಗ ವಿದುರ ಇಲ್ಲ! ಸಂಜಯನ ಮಗನೇ ಈಗ ಇನ್ನು ಮಹಾಪ್ರಧಾನಿ!... ಪರೀಕ್ಷಿತನಿಗೆ ಉಪದೇಶ ಕೊಡುವುದು ಉಳಿಯಿತು!

*****

ವೇದವ್ಯಾಸರು ಹೊರಟ ದಿನದಿಂದಲೇ ಧರ್ಮಪುತ್ರ ಪರೀಕ್ಷಿತನನ್ನು ಹತ್ತಿರ ಕುಳ್ಳಿರಿಸಿಕೊಂಡು ಅವನಿಗೆ ಉಪದೇಶ ಕೊಡಲಾರಂಭಿಸಿದ್ದ: ತಾನು ಭೀಷ್ಮರಿಂದ ಕೇಳಿದ್ದು, ವಿದುರನಿಂದ ಅರಿತಿದ್ದು, ವ್ಯಾಸರಿಂದ ಉಪದೇಶ ಪಡೆದದ್ದು, ಅನುಭವದಿಂದ ಕಂಡುಕೊಂಡದ್ದು, ಓದಿದ್ದು, ಆಪತ್ಕಾಲ ನಿಯಮಗಳು, ಸದಾ ಉಪಯುಕ್ತ ಸೂತ್ರಗಳು... ಎಲ್ಲವನ್ನೂ ಉಪದೇಶಿಸಿದ:

"ಮಗು! ಗುರುವು ಹೇಳಿಕೊಡುವುದು ಕೇವಲ ಒಂದು ಭಾಗ ಮಾತ್ರ! ಅನುಭವದಿಂದ ಕಾಣಬೇಕಾದ್ದು ಅದಕ್ಕೆ ಮೂರರಷ್ಟು ಇರುತ್ತದೆ!... ನಿನಗೂ ಶಿಕ್ಷಣ ಆಗಿಯೇ ಇದೆ! ನನ್ನದು ಕೊನೆಯ ಕಿವಿ ಮಾತು ಮಾತ್ರ! .... ಧರ್ಮವನ್ನು ಎಂದೂ ಬಿಡಬೇಡ! ಕಾಮಕ್ರೋಧ ವಶವಾದವನಿಗೆ ಅದು ಕಣ್ಣಿಗೆ, ಮನಸ್ಸಿಗೆ ಕಾಣಲಾರದು! ರಾಜನಿಗೆ ಈ ಕಾಮಕ್ರೋಧಗಳಿರಬಾರದು!... ಲೋಕವನ್ನು ನಡೆಸುವ, ಉಳಿಸುವ ಎಲ್ಲ ಇತರ ಧರ್ಮಗಳಿಗೂ ರಾಜಧರ್ಮವೇ ಆಧಾರವಾಗಿ ಅದನ್ನು ಲೋಕಜ್ಯೇಷ್ಠ ಎನ್ನುವರು! ದೊರೆಗೆ ಆತ್ಮತ್ಯಾಗ ಮಹಾಗುಣ! ಸ್ವಂತ ಸುಖವೆಂಬುದೇ ಅವನಿಗೆ ಇಲ್ಲ! ಅರಸುಪಟ್ಟವೆಂಬುದು ಭೋಗಸ್ಥಾನವಲ್ಲ! ಹಾಗೆ ಅದನ್ನು ಭೋಗಕ್ಕೆ ಬಳಸಿದವರಾರನ್ನೂ ಕಾಲಪುರುಷ ಕ್ಷಮಿಸಿಲ್ಲ! ಗರ್ಭಿಣಿ ಸ್ತ್ರೀಯು, ಗರ್ಭಸ್ಥ ಶಿಶುವು ಕೇಳದೆಯೇ ಅದನ್ನು ಬಗೆ ಬಗೆಯಲ್ಲಿ ರಕ್ಷಿಸುವಂತೆ ದೊರೆಯೂ ಜನರ ಕ್ಷೇಮವನ್ನು ತಾನಾಗಿ ಅರಿತೇ ಮಾಡಬೇಕು!... ದೊರೆ ಬರೀ ಶಾಂತಿಪಾಲಕನಲ್ಲ! ಲೋಕ ಗುರುವೂ ಹೌದು! ಪ್ರಜೆಗಳ ಸೌಕರ್ಯವೇ ಧರ್ಮವಾಗುವುದಿಲ್ಲ! ಅಸೌಕರ್ಯವೆನಿಸಿದರೂ ಜನರಲ್ಲಿ ಧರ್ಮವನ್ನು ಜಾರಿಗೆ ತರುವುದೇ ಅವನ ಅಪ್ರಿಯ ಕರ್ಮ, ಧರ್ಮ! ಜನರನ್ನು ತಿದ್ದ ಹೊರಡುವುದು ತುಂಬಾ ಅಪ್ರಿಯ ಕರ್ತವ್ಯ! ಆದರೆ ಅವಶ್ಯ!... ಸಮೂಹಜೀವನದ ರೀತಿ, ವ್ಯಕ್ತಿಯ ಆವಿಷ್ಕಾರಕ್ಕೆ ತೊಂದರೆ ಮಾಡುವಂತಿರಬಾರದು! ಇದೇ ಅದರ ಗುರಿ!! ಎಲ್ಲ ವ್ಯಕ್ತಿಗಳಿಗೂ ಆ ಆವಿಷ್ಕಾರ ಒಂದೇ ರೀತಿ ಇರಲಾರದು! ಅದೇ ಬೇಡವೆನ್ನುವವರೂ ಇರುತ್ತಾರೆ! ಈ ವೈವಿಧ್ಯಕ್ಕೆ ಕೊಂಚ ಅವಕಾಶವಿರಬೇಕಾದುದು ಅವಶ್ಯವಾದರೂ, ಆ ಆವಿಷ್ಕಾರವೇ ಜೀವನದ ಗುರಿ ಎಂಬ ಪರಮ ಪುರುಷಾರ್ಥ ಜ್ಞಾನವನ್ನು ದೊರೆ ಕಳಕೊಳ್ಳಬಾರದು! ಆ ದಾರಿಗೆ ತಾವೇ ಬರುವವರನ್ನು ದೊರೆ ತುಂಬಾ ಗೌರವಿಸಬೇಕು!! ಅವರಲ್ಲಿ ಸಿದ್ಧಿಪಡೆದವರೆಲ್ಲ ದೊರೆಗೆ ಮಾನ್ಯರೇ ಆಗಬೇಕು!... ಅವರಲ್ಲಿ ಹಿರಿಯರೇ ಅವನಿಗೆ ಗುರುಗಳು!... ಆ ಆವಿಷ್ಕಾರವನ್ನು ವಿರೋಧಿಸುವವರನ್ನು ಸಾಮದಾನಾದಿಗಳಿಂದ ದಾರಿಗೆ ತರಬೇಕು!... ಯಾವುದಕ್ಕೂ ಬಗ್ಗದಾದರೆ ದಂಡ ಇದ್ದೇ ಇದೆ!... ಸಮಾಜ ವಿರೋಧಿಗಳೂ ಪುರುಷಾರ್ಥ ವಿರೋಧಿಗಳೂ ಒಗ್ಗೂಡದಂತೆ, ನಿನ್ನ ಗೂಢಚಾರಪಡೆಯ ಸಹಾಯದಿಂದ, ಸದಾ ಜಾಗರೂಕನಾಗಿರು!... ಋಷಿಮುನಿಗಳನ್ನು ಎಂದೂ ಅಪಮಾನಿಸಬೇಡ!...

...ಇನ್ನೊಂದು ಮಾತು! ದುರ್ಯೋಧನಪ್ರಿಯರು ಇನ್ನೂ ಸಮಾಜದಲ್ಲಿದ್ದಾರೆ! ಕೃಷ್ಣದೂಷಕರೂ ಸಹ! ಕೃಷ್ಣಪತ್ನಿಯರಿಗಾದ ಪರಿಭವವನ್ನು ಮರೆಯಬೇಡ! ಸೌರಾಷ್ಟ್ರ, ಸೌವೀರ, ಸಿಂಧು, ಪಂಚನದ, ಮುಂತಾದ ಕಡೆಯೇ ಆ ದಸ್ಯುಗಳು ಬಹು ಸಂಖ್ಯೆಯಲ್ಲಿರುತ್ತಾರೆ! ಭೋಗವತಿಯಲ್ಲೂ, ಗಾಂಧಾರಾದಿ ವಾಯುವ್ಯ ಪ್ರಾಂತ್ಯಗಳಲ್ಲಿಯೂ ಅನಾಗರೀಕ ನಾಗರಿದ್ದಾರೆ! ಅಂಗವಂಗಗಳಲ್ಲಿಯೂ ಅಂಚು ಪ್ರದೇಶಗಳಲ್ಲೂ ನನ್ನ ಸಾರ್ವಭೌಮತ್ವವನ್ನು ಐವತ್ತು ವರ್ಷದ ಹಿಂದೆ, ಇಷ್ಟವಿಲ್ಲದೆ ಒಪ್ಪಿಕೊಂಡವರಿದ್ದಾರೆ! ಈಗ ನಾವು ವಾನಪ್ರಸ್ಥ ಹೊರಟೊಡನೆಯೇ ಅವರು ಮತ್ತೆ ಏಳುವ ಪ್ರಸಕ್ತಿ ಉಂಟು! ಶುಭ ವಿಜಯದಶಮಿ ದಿನ ಮೊದಲು ನಿನ್ನ ದಿಗ್ವಿಜಯ ಇಂಥ ಕಡೆಗಳಲ್ಲಿ ಆಗಲಿ. ನಾಲ್ಕೂ ದಿಕ್ಕಿನಿಂದ ಆಪ್ತ, ಸಾಧು, ಪ್ರಜಾಪಾಲಕರನ್ನು ನೇಮಿಸಿಕೊಂಡು, ಕ್ರಮೇಣ ದುಷ್ಟರನ್ನು ಕಿತ್ತೆಸೆಯುತ್ತಾ ಬರಬೇಕು! ಪ್ರಜಾಪಾಲನದಲ್ಲಿ, ಜನಾವಶ್ಯಕ ಕಾರ್ಯದಲ್ಲಿ ಮೊದಲು ತೊಡಗಿ ಪ್ರಜಾ ಪ್ರೀತಿಗಳಿಸು! ಇದಲ್ಲದೆ ಬರೀ ದಂಡನೆ ಏನೂ ಮಾಡದು... ನೂರುಕಾಲ ಚೆನ್ನಾಗಿ ಬಾಳು... ಮೇಲಾಗಿ ಶ್ರೀಕೃಷ್ಣನನ್ನು ನೆನೆ.... ನಿನ್ನ ತಾತಂದಿರಾದ ನಾವು ನಡೆದ ಹಾದಿಯನ್ನು ಮರೆಯಬೇಡ... ವಜ್ರ ದೊಡ್ಡವನಾಗುವ ತನಕ ಅವನ ಭಾರ ನಿನ್ನದೇ!... ಅವನ ಸುತ್ತ ಸರ್ಪಗಾವಲಿರಲಿ! ಬೆಳೆಯುತ್ತಾ ಅವನಿಗೆ ಒಳ್ಳೆಯ ಸಹವಾಸ ಇರಲಿ!..."

... ಹೀಗೆ ಧರ್ಮಜ ಒಳ್ಳೆಯ ಉಪದೇಶವನ್ನು ದಿನ ದಿನವೂ ಹೇಳಿದ!

ಶುಭಮುಹೂರ್ತದಲ್ಲಿ ಇತ್ತ ಪರೀಕ್ಷಿತನಿಗೆ ಪಟ್ಟಾಭಿಷೇಕವಾಯಿತು!... ಎರಡು ದಿನ ಬಿಟ್ಟು ಅತ್ತ ವಜ್ರನಿಗೂ ಸಹ!... ಎರಡೂ ಮುಹೂರ್ತಗಳಿಗೆ ವ್ಯಾಸರೇ ಬಂದು ಹರಸಿದರು! ಸಪ್ತರ್ಷಿಗಳೂ

ಉಪಸ್ಥಿತರಿದ್ದರು! ಪ್ರಜಾಮುಖ್ಯರೂ, ಸೈನ್ಯಾಧಿಕಾರಿಗಳೂ, ಬೊಕ್ಕಸದ ಅಧಿಕಾರಿಯೂ, ಮಹಾಮಂಡಳೇಶ್ವರರೂ, ವಣಿಕ್ ಮುಖ್ಯರೂ, ಗೂಢಚಾರರ ಪಡೆಯ ನಾಯಕರೂ,... ಎಲ್ಲರೂ ಕಾಣಿಸಿಕೊಂಡು ಕಾಣಿಕೆ ಇತ್ತರು!... ಧರ್ಮಜನನ್ನು ಅಶಾಂತ ಮನಸ್ಸಿನಲ್ಲೂ ಒಂದು ಶಾಂತಿಯ ಜ್ಯೋತಿ ಮೂಡಿತ್ತು!... ಒಂದು ಆಶಾಕಿರಣ ಉದಿಸಿತ್ತು!... ಪರೀಕ್ಷಿತ ತನ್ನ ನೀತಿಯನ್ನು ಘೋಷಿಸಿದ!... ಊರಲ್ಲಿ ಗೋರಥದಲ್ಲಿ ಹೊಸ ದೊರೆಗಳ ಮೆರವಣಿಗೆಯಾಯಿತು! ವೈಶಂಪಾಯನರು ದೊರೆಯ ಆಸ್ಥಾನದಲ್ಲಿರಲು ಒಪ್ಪಿದರು! ಎಂಥ ಭಾಗ್ಯ!!

*****

ಧರ್ಮಜ ಯಾದವರೆಲ್ಲರ ಶ್ರಾದ್ಧಗಳನ್ನೂ ಮಾಡಿ ಆಗಿತ್ತು!... ಇನ್ನು ತಂತಮ್ಮ ಆತ್ಮಶ್ರಾದ್ಧಗಳನ್ನು ಮಾಡಿಕೊಳ್ಳಲು ದಿನವನ್ನು ಗೊತ್ತು ಮಾಡಿಕೊಂಡರು!

ಧೌಮ್ಯರು ಇದನ್ನು ಮಾಡಿಸಲು ತುಂಬಾ ದುಃಖಪಟ್ಟರು! ವ್ಯಾಸರ ಆದೇಶದಂತೆ ವೈಶಂಪಾಯನರೂ ಜೊತೆಗಿದ್ದು, ಅದನ್ನು ಸಾಂಗವಾಗಿ ಮಾಡಿಸಿ ಆಯಿತು! ಸ್ವಯಾರ್ಜಿತ ಧನವನ್ನೆಲ್ಲ ಪಾಂಡವರು ಸತ್ಪಾತ್ರದಲ್ಲಿ ದಾನಮಾಡಿ ಮುಗಿಸಿ, ಉಟ್ಟ ನಾರುಮಡಿ ಹೊರತು ಎಲ್ಲವನ್ನೂ ತ್ಯಾಗ ಮಾಡಿದ್ದರು! ದ್ರೌಪದಿ ನಾರುಮಡಿಯುಟ್ಟದ್ದನ್ನು ಕಂಡು ಊರವರೆಲ್ಲ ಅತ್ತರು!

ಧರ್ಮಜ, ಸಭೆ ಸೇರಿಸಿ, ಕೈಮುಗಿದು ಪ್ರಜೆಗಳಿಗೆ ಹೇಳಿದ!

"ಪ್ರಜೆಗಳೇ! ಈ ಮುವ್ವತ್ತಾರುವರ್ಷ ನನಗೆ ಧರ್ಮದಿಂದ ರಾಜ್ಯವಾಚರಿಸಲು ನಿಮ್ಮ ಸಹಕಾರ ತುಂಬಾ ಮುಖ್ಯವಾಯಿತು! ನಾನೇನೂ ಶ್ರೀರಾಮನಲ್ಲ! ನನ್ನ ಆಡಳಿತದಲ್ಲಿ ಕುಂದುಕೊರತೆಗಳು ಇದ್ದಾವೆಂಬುದನ್ನು ನಾನು ಬಲ್ಲೆ! ಆದರೆ, ತ್ರಿಕರಣಗಳಲ್ಲಿ ನಿಮ್ಮ ಉನ್ನತಿಯನ್ನೇ ಬಯಸಿದೆನೇ ವಿನಾ ನನ್ನ ಸುಖವನ್ನಲ್ಲ!... ಈಗ ನಮ್ಮ ಪರೀಕ್ಷಿತನಿಗೆ ಅದೇ ಸಹಕಾರ ನೀಡಿ, ಉತ್ತಮವಾಗಿ ಆಳಲು ಪ್ರೋತ್ಸಾಹಿಸಿ; 'ಯಥಾ ಪ್ರಜಾ: ತಥಾ ರಾಜಾ' ಎಂಬ ಕಾಲ ಬರುತ್ತಿದೆ!... ನಮ್ಮ ದೋಷಗಳನ್ನು ಕ್ಷಮಿಸಿ!..." ಎನ್ನುತ್ತಾ, ಕೈಮುಗಿದು, ಜನ ಕಾಲಿಗೆ ಬೀಳುವುದನ್ನು ನಿಧಾನವಾಗಿ ಸ್ವೀಕರಿಸಿ, ಒಂದೊಂದೇ ಹೆಜ್ಜೆಯಾಗಿ ಮುಂದೆ ಮುಂದೆ ನಡೆಯುತ್ತಿದ್ದ! ತಮ್ಮಂದಿರೂ ದ್ರೌಪದಿಯೂ ಹಿಂಬಾಲಿಸಿದರು!...

ಬೆಳಿಗ್ಗೆ ನಿರಾಹಾರನಾಗಿ ಹೊರಟಿದ್ದ ದೊರೆಯನ್ನು ತಮ್ಮಂದಿರೂ ದ್ರೌಪದಿಯೂ ಅನುಸರಿಸಿದರು!... ಮಧ್ಯಾಹ್ನದವರೆಗೆ ಊರನ್ನು ದಾಟುವುದೇ ಆಗಲಿಲ್ಲ!... ಊರ ಬಾಗಿಲಲ್ಲಿ ಒಂದು ಕಪ್ಪುನಾಯಿ ಯುಧಿಷ್ಠಿರನನ್ನು ಹಿಂಬಾಲಿಸಿತು!

ಪ್ರಜೆಗಳು ಹಲವರು ತುಂಬಾ ದೂರ ಪಾಂಡವರನ್ನು ಹಿಂಬಾಲಿಸಿದರು. ಸಂಜೆಯ ವೇಳೆಗೆ ದೊರೆ ಅವರನ್ನು ಒಡಂಬಡಿಸಿ ಹಿಂದಿರುಗಿಸಿದ! ಕೃಪ, ಯುಯುತ್ಸು ಮೊದಲಾದವರೂ ಸಹ! ಚಿತ್ರಾಂಗದೆ ಮಣಿಪುರಕ್ಕೆ ಹೊರಟಳು!

ಮೊದಲು ಪೂರ್ವದತ್ತ ಹೊರಟ ಪಾಂಡವರು ಕ್ರಮೇಣ ಹಿಮಾಲಯದತ್ತ ತಿರುಗಿದರು! ಅರ್ಜುನ ಗಾಂಡೀವವನ್ನು ಪರಿತ್ಯಜಿಸಿರಲಿಲ್ಲ!... ಅಗ್ನಿದೇವ ಎದುರಿಗೆ ಪ್ರತ್ಯಕ್ಷನಾದ! "ಗಾಂಡೀವವನ್ನು ನೀನು ಕೊಂಡೊಯ್ಯುವುದು ಯುಕ್ತವಲ್ಲ! ವರುಣನ ದೆಸೆಯಿಂದ ನಿನಗೆ ಅದನ್ನು ತೆಗೆದುಕೊಟ್ಟಿದ್ದೆ. ನೀನೇ ವರುಣನಿಗೊಪ್ಪಿಸು" ಎಂದ. ಮೊದಲು ಇಷ್ಟವಿಲ್ಲವಾದರೂ, ಸೋದರರ ಒತ್ತಾಯದಿಂದ ಅರ್ಜುನ ಹಾಗೇ ಮಾಡಿದ!... ಯಾತ್ರೆ ಹೊರಟಿತು!... ಹಿಮವತ್‌ಪರ್ವದಲ್ಲಿ ಬದರೀ ಕ್ಷೇತ್ರವನ್ನೂ ಕೇದಾರವನ್ನೂ ಸಂದರ್ಶಿಸಿ ಪಾಂಡವರು ಮುಂದೆ ನಡೆಯುತ್ತಾ, ಕ್ರಮವಾಗಿ ದ್ರೌಪದೀ, ಸಹದೇವ, ನಕುಲ, ಅರ್ಜುನ, ಭೀಮಸೇನ ಇವರು ಅಸು ನೀಗಿದರು! ಧರ್ಮಪುತ್ರನೊಬ್ಬನೇ ಸಶರೀರವಾಗಿ ಸ್ವರ್ಗವನ್ನು ತಲುಪಿದ.!

*****

# ೨೦. ಧರ್ಮಜ ಸ್ವರ್ಗಕ್ಕೇರಿದ್ದು!
## -ಉಪಸಂಹಾರ

ಸ್ವರ್ಗದ್ವಾರದಲ್ಲಿ ಧರ್ಮಪುತ್ರನಿಗೆ ಅಚ್ಚರಿಯೊಂದು ಕಾದಿತ್ತು! ಒಂದೊಂದು ಬಗೆಯ ಅಪೂರ್ಣತೆಯಿಂದ ತಮ್ಮಂದಿರೈವರೂ ದ್ರೌಪದಿಯೂ ಸತ್ತು, ದೇಹವನ್ನು ಬಿಟ್ಟರೂ, ಅವನ ಹಿಂದೆ ಅನುಸರಿಸಿ ಬಂದಿದ್ದ ಆ ನಾಯಿ ಮಾತ್ರ ಸಾಯದೇ ಇತ್ತು!

"ತಮ್ಮಂದಿರು ನಾಯಿಗಿಂತ ಕಡೆಯಾದರೇ!" ಎಂದು ಯುಧಿಷ್ಠಿರ ಚಿಂತಿಸಿದ! ಅಷ್ಟರಲ್ಲಿ ಸ್ವಯಂ ಇಂದ್ರನೇ ಬಂದು, ದಿವ್ಯರಥವನ್ನು ತಂದು ಅವನನ್ನು ಸ್ವಾಗತಿಸಿ, ಆ ರಥದಲ್ಲಿ ಹತ್ತಿ ಕುಳ್ಳಿರುವಂತೆ ಹೇಳಿದ.

ಧರ್ಮಜ ಇಷ್ಟ ಪಡಲಿಲ್ಲ! "ನನ್ನ ತಮ್ಮಂದಿರಿಲ್ಲದೆ ಸ್ವರ್ಗಕ್ಕೆ ಹೇಗೆ ಬರಲಿ? ಕಷ್ಟಸುಖಗಳನ್ನು ಈ ವರೆಗೆ ಅವರೊಡನೆಯೇ ಹಂಚಿಕೊಂಡಾಗಿದೆ! ನಾನೂ ಇಲ್ಲೇ ನಿಲ್ಲುತ್ತೇನೆ, ಅವರಿಲ್ಲದ ಸ್ವರ್ಗ ನನಗೆ ಬೇಡ!" ಎಂದ.

ಇಂದ್ರ ಹೇಳಿದ: "ಅವರೆಲ್ಲ ಶರೀರ ಬಿಟ್ಟು ನಿನಗಿಂತ ಮೊದಲೇ ಇಲ್ಲಿ ಒಳಗೆ ಬಂದು ಸೇರಿದ್ದಾರೆ! ನೀನೇ ತಡ. ಬೇಗ ಬಾ."

ಧರ್ಮಪುತ್ರ ಒಪ್ಪಲಿಲ್ಲ! "ಈ ನಾಯಿಯೊಂದು ನನ್ನನ್ನು ನಂಬಿ ಹಸ್ತಿನಾವತಿಯಿಂದ ಹಿಂಬಾಲಿಸಿದೆ! ಅದಕ್ಕೂ ಸ್ವರ್ಗ ಪ್ರವೇಶವಿದ್ದರೆ ನಾನೂ ಬರುತ್ತೇನೆ. ಜೊತೆಯಲ್ಲಿರುವವರನ್ನು ಬಿಟ್ಟು ಸುಖ ಪಡುವುದು ಉತ್ತಮ ಸ್ವಭಾವವಲ್ಲ!"

ಇಂದ್ರ ಹೇಳಿದ: "ಸ್ವರ್ಗವೆಂದರೆ, ಮರಣ ಹೀನ ಲೋಕ! ನೀನು ನನಗೆ ಸಮನಾಗಿ ಬಾಳಬೇಕಾದವನು ಈ ನಾಯಿಯಲ್ಲಿ ಏಕೆ ಈ ವ್ಯಾಮೋಹವಿಡುವೆ?"

ಧರ್ಮಜ: "ಏನೇ ಕಾರಣದಿಂದ, ನಂಬಿದ ಇದನ್ನು ನಾನು ಕೈಬಿಡಲಾರೆ. ಅದೇ ಧರ್ಮ. ಅದೇ ಆರ್ಯಮಾರ್ಗ."

ಇಂದ್ರ: "ಅಯ್ಯಾ! ಪುಣ್ಯಾತ್ಮನೇ! ಸ್ವರ್ಗದಲ್ಲಿ ನಾಯಿಯುಂಟೆಂದು ಎಲ್ಲಾದರೂ ಕೇಳಿರುವೆಯಾ? ಪುಣ್ಯವಂತರಿಗೆ ಮಾತ್ರ ಇಲ್ಲಿ ನಿವಾಸ!"

ಧರ್ಮಜ: "ನಂಬಿದವರನ್ನು ಕೈ ಬಿಡುವುದು ಬ್ರಹ್ಮ ಹತ್ಯೆಗೆ ಸಮಪಾಪವೆನ್ನುತ್ತಾರೆ. ನನ್ನ ಸುಖ ನನಗೆ ಮುಖ್ಯವಲ್ಲ! ಭಯದಲ್ಲಿರುವವನನ್ನೂ, ನಂಬಿದವನನ್ನೂ, ಬೇರೆ ಗತಿಯಿಲ್ಲವೆಂದು ಶರಣಾದವನನ್ನೂ, ಪ್ರಾಣಾರ್ಥಿಯಾದವನನ್ನೂ - ನಾನು ನನ್ನ ಪ್ರಾಣ ಬಿಟ್ಟಾದರೂ ಕಾಪಾಡಿಯೇನೇ ಹೊರತು, ಕೈಬಿಡಲಾರೆ! ಇದೇ ನನ್ನ ನಿಶ್ಚಯ!!

ಇಂದ್ರ: "ಅಯ್ಯಾ! ತಮ್ಮಂದಿರನ್ನೇ ಬಿಟ್ಟು ಬಂದವನಿಗೆ ಈ ನಾಯಿ ಹುಚ್ಚು ಹೇಗೆ ಹಿಡಿಯಿತಯ್ಯಾ!"

ಧರ್ಮಜ: "ದೇವೇಂದ್ರ! ಸತ್ತವರಿಗೂ ಬದುಕಿದವರಿಗೂ ಯುದ್ಧವೋ, ಸಂಧಿಯೋ ಅಸಂಭವವೆಂಬುದು ನಿಜ! ನನ್ನ ಸಂಬಂಧ ನನ್ನ ತಮ್ಮಂದಿರೊಡನೆ ಹರಿದುದು, ಅವರೆಲ್ಲ ಸತ್ತಾಗ!... ಈ ನಾಯಿ ಹಾಗಲ್ಲ!! ಇನ್ನೂ ಬದುಕಿದೆ! ಸತ್ತ ತಮ್ಮಂದಿರನ್ನು ನಾನು ಬದುಕಿಸಲಾರೆ, ಇಲ್ಲಿಗೆ

ಕರ್ಣ್ಶೇರಲಾರೆನೆಂಬುದು ನಿಜವಾದರೂ, ಈ ನಾಯಿ ಇನ್ನೂ ಬದುಕಿದೆಯಲ್ಲವೇ? ತಮ್ಮಂದಿರನ್ನು ನಾನು ಬಿಟ್ಟುದು ಅನಿವಾರ್ಯವಾದರೆ, ಈ ನಾಯಿಯನ್ನು ನಾನೇ ನಿವಾರಿಸಬೇಕು, ಏಕೆ? ಶರಣು ಬಂದವನನ್ನು 'ಶತ್ರುವಿಗೆ ಒಪ್ಪಿಸುತ್ತೇನೆ! ನೋಡು!' ಎಂದು ಹೆದರಿಸುವುದು ಎಷ್ಟು ಪಾಪವೋ, ಸ್ತ್ರೀಯರನ್ನು ಕೊಲ್ಲುವುದೂ, ಬ್ರಾಹ್ಮಣನ ವಸ್ತುಗಳನ್ನು ಕದಿಯುವುದೂ ಎಷ್ಟು ಪಾಪವೋ, ಈ ಹಂಬಲಿಸಿದ್ದನ್ನು ಕೈಬಿಡುವುದೂ ಅಷ್ಟೇ ಪಾಪ.!"

ಆ ನಾಯಿ ಆಗ ಯಮಧರ್ಮಸ್ವರೂಪವನ್ನು ತಳೆದು, ಯುಧಿಷ್ಠಿರನನ್ನು ಬೆರಗುಗೊಳಿಸುತ್ತದೆ! "ಮಗು! ತಂದೆಗೆ ಸರಿಯಾದ ಮಗ ನೀನು! ಇದು ನಿನ್ನ ಎರಡನೆಯ ಪರೀಕ್ಷೆ. ದ್ವೈತವನದಲ್ಲಿ ಯಕ್ಷನಾಗಿ ವಿಷ ಸರೋವರದಲ್ಲಿ ನಿನ್ನನ್ನು ಪರೀಕ್ಷಿಸಿದವನೂ ನಾನೇ!... ನಾಯಿಗಾಗಿ ದೇವರಥವನ್ನೂ ಬಿಡಲು ಸಿದ್ಧವಿದ್ದ ನೀನು ಅನುಪಮ! ಸಶರೀರವಾಗಿ ಈ ರೀತಿ ಸ್ವರ್ಗ ಏರುತ್ತಿರುವವನು ನೀನೇ ಮಾತ್ರ" ಎಂದು ಹರಸುತ್ತಾನೆ.

* * * * *

ಸ್ವರ್ಗದಲ್ಲಿ ಯುಧಿಷ್ಠಿರನಿಗೆ ಮತ್ತೊಂದು ಅಚ್ಚರಿ ಕಾದಿರುತ್ತದೆ!... ದುರ್ಯೋಧನ ಅಲ್ಲಿ ಅಮಿತಕಾಂತಿಯಿಂದ ಕೂಡಿ ಉತ್ತಮಾಸನದಲ್ಲಿ ಕುಳಿತಿದ್ದಾನೆ!!

ಧರ್ಮಜ, ಯುಧಿಷ್ಠಿರ, ಇಂದ್ರನಿಗೆಂದ: "ಇಲ್ಲಿ ಈ ಪಾಪಿಗೂ ಸ್ಥಾನವಿರುವುದಾದರೆ, ನನಗೆ ಸ್ವರ್ಗವೇ ಬೇಡ! ಪಾಪಕ್ಕೂ ಪುಣ್ಯಕ್ಕೂ ಈಗ ವ್ಯತ್ಯಾಸವೇನು ಉಳಿಯಿತು? ಲೋಭಿಯೂ, ತನ್ನೆಲ್ಲ ಬಂಧುಗಳನ್ನೂ ತನ್ನ ಸ್ವಾರ್ಥಕ್ಕೆ ಕೊಲ್ಲಿಸಿದವನೂ, ನಮ್ಮನ್ನು ನಾನಾವಿಧ ಕಷ್ಟಗಳಿಗೊಳಪಡಿಸಿದವನೂ, - ವಿಶೇಷವಾಗಿ ದ್ರೌಪದಿಯನ್ನು ಬಳಲಿಸಿ, ಆಪತ್ತುಗಳಿಗೆ ಸಿಲುಕಿಸಿ ಸಂತಸಪಟ್ಟವನೂ ಆದ ಈ ಪಾಪಿಯ ಮುಖವನ್ನು ನಾನು ನೋಡಲಾರೆ!... ನನ್ನ ತಮ್ಮಂದಿರೆಲ್ಲಿದ್ದಾರೋ ಅಲ್ಲಿಗೇ ನನ್ನನ್ನು ಕಳುಹು."

ನಾರದರು ನಡುವೆ ಬಂದು ಹೇಳುತ್ತಾರೆ. "ಧರ್ಮಪುತ್ರ! ಇವನು ಯುದ್ಧದಲ್ಲಿ ಹಿಂದೇಟು ಹಾಕದೆ, ವೀರನಾಗಿ ಹೋರಾಡಿ ಸತ್ತು ಈ ವೀರ ಸ್ವರ್ಗವನ್ನು ಪಡೆದಿದ್ದಾನೆ. ನೀನೂ ಅದೇ ಕ್ಷಾತ್ರಧರ್ಮದಂತೆಯೇ ಇಲ್ಲಿ ಬಂದಿರುವೆ. ಸ್ವರ್ಗದಲ್ಲಿ ವೈರಕ್ಕೆ ಅವಕಾಶವಿಲ್ಲ! ಹಳೆಯದನ್ನೆಲ್ಲ ಮರೆತು ಬಿಡು! ಅದೆಲ್ಲ ಬರೀ ಮಾನುಷ ಭಾವ ಮಾತ್ರ!!"

ಯುಧಿಷ್ಠಿರ ಬಿಡಲಿಲ್ಲ! "ಈ ಪಾಪಿಗೇ ಈ ಪದವಿಯಾದರೆ, ಧರ್ಮಾತ್ಮರಾಗಿ ಬಾಳಿದ ನನ್ನ ತಮ್ಮಂದಿರಿಗೆ ಬೇರೆಂಥಾ ಉತ್ತಮ ಗತಿಯೆಂದು ನೋಡಬಯಸುತ್ತೇನೆ!"

ಯಧಿಷ್ಠಿರನಿಗೆ ಕರ್ಣ, ಅಭಿಮನ್ಯು, ವಿರಾಟ, ದ್ರುಪದ, ಸಾತ್ಯಕಿ ಮೊದಲಾದವರನ್ನು ನೋಡುವ ಬಯಕೆಯೂ ಆಯಿತು! ಅದನ್ನು ಪೂರೈಸಲು ಇಂದ್ರ ದೇವದೂತರನ್ನು ಅವನೊಡನೆ ಕಳುಹುತ್ತಾನೆ.!

ದೇವದೂತರೊಡನೆ ಹೊರಟ ಧರ್ಮಜ ಒಂದು ಅಮಂಗಳಕರವಾದ ದಾರಿಯಲ್ಲಿ ಹಾಯಬೇಕಾಗುತ್ತದೆ! ಅಲ್ಲಿ ಬರೀ ದುರ್ಗಂಧ! ಹೆಣಗಳು!! ಕತ್ತಲೆ! ಸತ್ತವರ ಎಲುಬು, ಮಾಂಸ, ತಲೆಗೂದಲು, ರಕ್ತದ ಕೆಸರು, ನೊಣ, ಸೊಳ್ಳೆಗಳು, ಕ್ರಿಮಿ-ಕೀಟಗಳು, ಎತ್ತಲೂ ಹರಡಿ, ದಾರಿಯೇ ದುರ್ಗಮವಾಗಿತ್ತು!... ಮುಂದೆ ಪ್ರೇತಗಳು!!... ಮುಂದೆ ನರಕದ ನಾನಾ ವಿಭಾಗಗಳು! ಅಸಿಪತ್ರವನ, ಕುಂಭೀಪಾಕ, ರೌರವ, ಕೂಟಶಾಲ್ಮಲೀ... ಇನ್ನೂ ನಾನಾ ಪ್ರಕಾರಗಳು!!

"ಇದೇನಯ್ಯಾ? ಎಲ್ಲಿಗೆ ಹೋಗುತ್ತಿದ್ದೇವೆ? ನನ್ನ ತಮ್ಮಂದಿರೆಲ್ಲಿ?" ಧರ್ಮಜ ಪ್ರಶ್ನಿಸಿದ.

ದೂತರೆಂದರು: "ಪ್ರಭು! ನೀವು ಈ ಪ್ರಶ್ನೆ ಕೇಳುವವರೆಗೆ ಮಾತ್ರ ನಾವು ಕರೆದುಕೊಂಡು ಹೋಗಬೇಕೆಂದು ಇಂದ್ರದೇವನ ಆಜ್ಞೆಯಾಗಿತ್ತು! ಈಗ ಹಿಂದಿರುಗಬಹುದು.!"

ಧರ್ಮಜನಿಗೆ ಅಲ್ಲಿ ನಿಲ್ಲಲಾಗದಷ್ಟು ದುರ್ಗಂಧವೊಂದು ಕಡೆ! ದುಃಖಶೋಕಗಳೊಂದು ಕಡೆ! ಮೂರ್ಛೆ ಬರುವಂತಾಗಿತ್ತು!... ತಮ್ಮಂದಿರನ್ನು ಕಾಣದ ನಿರಾಸೆಯೂ ಸೇರಿ, ಇನ್ನೇನು ಹಿಂದಿರುಗಬೇಕೆಂಬಷ್ಟರಲ್ಲಿ, ಕೆಲವು ಧ್ವನಿಗಳು ಕೇಳಿ ಬಂದವು!

"ಅಯ್ಯಾ! ಧರ್ಮಾತ್ಮನೇ! ಹೋಗಬೇಡ! ನಿನ್ನ ಮೈ ಸುಗಂಧ ಇಲ್ಲಿ ನಮ್ಮ ಯಾತನೆಯನ್ನು ಕಡಿಮೆಯಾಗಿಸುತ್ತಿದೆ!! ನಿನ್ನನ್ನು ಕಂಡೇ ನಮಗೆ ಸಂತೋಷವಾಗಿದೆ! ನೀನಿನ್ನೂ ಇಲ್ಲೇ ಇದ್ದರೆ ನಮಗೆ ಉಪಕಾರ.!"

ಹೃದಯವೇ ಕಿತ್ತು ಬಂದ ಯುಧಿಷ್ಠಿರ "ಇದಾರ ಧ್ವನಿ?" ಎಂದು ಕೇಳುತ್ತಾನೆ. ಆ ಧ್ವನಿಗಳು ಹೇಳುತ್ತವೆ: "ನಾನೇ ಕರ್ಣ!", "ನಾನೇ ಭೀಮ", "ನಾನೇ ಅರ್ಜುನ", "ನಕುಲ", "ಸಹದೇವ", "ದ್ರೌಪದೀ"... ಇತ್ಯಾದಿ!

ಧರ್ಮಜ ಚಿಂತಾಕ್ರಾಂತನಾಗಿ "ಇವರಿಗೇಕೆ ಈ ದುರ್ಗಂಧ ಪ್ರದೇಶವಾಸ?" ಎಂದು ಕೇಳುತ್ತಾನೆ: "ದುರ್ಯೋಧನನಿಗೆ ಉತ್ತಮಸ್ಥಾನವೂ, ನನ್ನ ಸೋದರರಿಗೆ ಈ ಅಧಮ ಸ್ಥಾನವೂ ನ್ಯಾಯವೇ?"...

ಚಿಂತೆ, ಕೋಪವಾಗಿ, ಕ್ರೋಧವಾಗಿ ತಿರುಗಿತು! ದೇವದೂತನಿಗೆ ಹೇಳುತ್ತಾನೆ! "ನನ್ನ ಸೋದರರಿಗೆ ನರಕವಾಸವಾದರೂ ಚಿಂತೆಯಿಲ್ಲ! ನಾನಿಲ್ಲೇ ಇರುತ್ತೇನೆ. ನೀವು ಹೋಗಿಬಿಡಿ!! ದೂತರು ಹೊರಟುಹೋದರು! ಯುಧಿಷ್ಠಿರನಿಗೆ ಅದು ಕನಸೋ ನನಸೋ ತಿಳಿಯಲಿಲ್ಲ!

* * * * *

ಇಂದ್ರಾದಿಗಳೂ, ಯಮಧರ್ಮನೂ ಆಗ ಅಲ್ಲಿಗೆ ಬರುತ್ತಾರೆ! ಆಗ ಮತ್ತೊಂದು ಅಚ್ಚರಿ ಆಗುತ್ತದೆ! ಯುಧಿಷ್ಠಿರ ಕಂಡ "ನರಕ ದೃಶ್ಯ" ಮಾಯವಾಗಿ ಬಿಡುತ್ತದೆ!!

ಇಂದ್ರ ಹೇಳುತ್ತಾನೆ: "ಧರ್ಮಪುತ್ರ! ಮನುಷ್ಯ ಸತ್ತ ಮೇಲೆ ಪುಣ್ಯ, ಪಾಪಗಳೆಂಬ ಎರಡು ರಾಶಿ ಕರ್ಮಫಲಗಳುಂಟಲ್ಲ! ಈ ಪೈಕಿ, ಒಬ್ಬನು ಮೊದಲು ಪುಣ್ಯಫಲ ಅನುಭವಿಸಲು ಇಷ್ಟಪಟ್ಟರೆ ಆಮೇಲೆ ಪಾಪಫಲ ಅನುಭವಿಸಬೇಕಾಗುತ್ತದೆ! ಮೊದಲೇ ಪಾಪಫಲ ಅನುಭವಿಸಿದರೆ, ಆಮೇಲೆ ಪುಣ್ಯಫಲಕ್ಕೆ ಬರಬೇಕಾಗುತ್ತದೆ. ಅತ್ಯಂತ ಪಾಪಿಗೆ ಮೊದಲೇ ಕಿಂಚಿತ್ ಸುಖಾನುಭವವುಂಟು! (ದುರ್ಯೋಧನ ಹಿಮ್ಮೆಟ್ಟದೇ ಯುದ್ಧ ಮಾಡಿದ್ದಕ್ಕೆ ಆ ಸುಖ ಆಯಿತು!) ನೀನು ಇಷ್ಟವಿಲ್ಲದೆಯೇ ಆಡಿದ 'ಅಶ್ವತ್ಥಾಮಾ ಹತಃ! (ಕುಂಜರಃ) ಎಂಬ ಮಾತು ಅನರ್ಥ ಮಾಡಿ ದ್ರೋಣರ ಮರಣಕ್ಕೆ ಕಾರಣವಾದುದರಿಂದ, ನಿನಗೆ ಇಷ್ಟವಿಲ್ಲದೆಯೇ ಈ ಮಾಯಾನರಕವನ್ನು ಸೃಷ್ಟಿಸಿ ತೋರಿಸಬೇಕಾಯ್ತು! ನಿನ್ನ ಸೋದರಾದಿಗಳನ್ನು ತೋರಿಸಿದ ನೆಪದಲ್ಲಿಯೇ ಈ ದರ್ಶನ ನಿನಗಾಯ್ತು! ನಿನ್ನ ಸೋದರರಾರಿಗೂ ಈಗ ಪಾಪ ಸಂಬಂಧವಿಲ್ಲ! ನಿನ್ನ ಕಡೆ ನಿಂತು ಯುದ್ಧ ಮಾಡಿದವರೆಲ್ಲ ಈಗ ಸ್ವರ್ಗಕ್ಕೇ ಬಂದಿದ್ದಾರೆ... ಕರ್ಣನಿಗೂ ಈ ಲೋಕಪ್ರಾಪ್ತಿ ಆಗಿದೆ! ಎಷ್ಟಾದರೂ ಅವನೂ ದೇವನೇ! ಅನೇಕ ಯಾಗಗಳ ಮೂಲಕ ಪಡೆದಿರುವ ಈ ಸ್ವರ್ಗದಲ್ಲಿ ನೀನು ಬಹುಕಾಲ ವಿಹರಿಸುವೆ... ಇದೋ ದೇವಗಂಗೆ! ಇಲ್ಲಿ ಸ್ನಾನಮಾಡು! ನಿನ್ನ ಮಾನುಷಭಾವವೇ ಈಗ ಹೋಗಿ ಬಿಡುತ್ತದೆ."

ಯಮಧರ್ಮ ಹೇಳುತ್ತಾನೆ: "ಮಗನೇ! ನಿನ್ನನ್ನು ಇದೇ ಈಗ ಮೂರನೆಯ ಬಾರಿ ಪರೀಕ್ಷಿಸಲಾಯಿತು! ನೀನು ಗೆದ್ದೆ!... ನರಕವನ್ನು ನೋಡದೇ ಸ್ವರ್ಗಾನುಭವಕ್ಕೆ ಅರ್ಥವೇ ಇಲ್ಲ! ಬಾ! ನಿನ್ನ ತಮ್ಮಂದಿರನ್ನು ನೋಡು!"

* * * * *

ಗಂಗಾಸ್ನಾನ ಮಾಡಿದ ಯುಧಿಷ್ಠಿರನಿಗೆ ಅಲ್ಲಿ ಬ್ರಾಹ್ಮಣ ಶರೀರದಲ್ಲಿ ಶ್ರೀಕೃಷ್ಣ ದರ್ಶನವಾಗಿ ಪುಲಕಿತನಾಗುತ್ತಾನೆ! ತನ್ನ ತಮ್ಮಂದಿರು ಸ್ವಸ್ವರೂಪದಲ್ಲಿ ದೇವತೆಗಳಾಗಿರುವುದನ್ನು ನೋಡಿ ಆನಂದಿಸುತ್ತಾನೆ!

ಧರ್ಮಜ: "ಪ್ರಭು! ಕೃಷ್ಣ! ನಿನ್ನನ್ನು ದರ್ಶನ ಮಾಡಿದ ಆನಂದವು ಈ ಸ್ವರ್ಗದ ಎಲ್ಲಾ ಇತರ ಸುಖಗಳಿಗಿಂತ ಶ್ರೇಷ್ಠವೆನಿಸುತ್ತದೆ!... ಪ್ರಭು! ನನಗೆ ಈ ಸ್ವರ್ಗ ಬೇಡ! ನಿನ್ನ ಸೇವೆಯೇ ಸದಾ ಇರುವ ಭಾಗ್ಯವನ್ನು ಅನುಗ್ರಹಿಸು."

ಶ್ರೀಕೃಷ್ಣ: "ಯುಧಿಷ್ಠಿರ! ನಿನ್ನ ಅಪೇಕ್ಷೆಯಂತೆ ನಾನಿಲ್ಲಿ ದರ್ಶನವಿತ್ತೆ! ಇದು ಬರೀ ಭೋಗಕರ್ಮ ಲೋಕ! ಪುಣ್ಯ ಸಂಚಯವಿರುವವರು ಅದು ಇರುವ ತನಕ ಇಲ್ಲಿರಬೇಕಾದುದು ಅನಿವಾರ್ಯ!"

ಯುಧಿಷ್ಠಿರ: "ಆ ನಿನ್ನ ಲೋಕ ಸೇರುವ ಬಗೆ?"

ಶ್ರೀಕೃಷ್ಣ: "ಅದಕ್ಕೆ ಈ ನಾನಾ ದೇವತಾ ಉಪಾಸನೆಗಳೂ, ಯಾಗಯಜ್ಞ ಫಲಗಳೂ, ಇಷ್ಟಾಪೂರ್ತಗಳೂ ವಿಘ್ನಕರ!... ನನ್ನೊಬ್ಬನನ್ನೇ ಉಪಾಸಿಸುವ ಪರಮೈಕಾಂತಿಗಳ ಮಾರ್ಗ ಇದಲ್ಲ! ಉಪನಿಷತ್ತುಗಳಲ್ಲಿ ಹೇಳಿರುವ ಮುಪ್ಪತ್ತೆರಡು ಉಪಾಸನೆಗಳ ದಾರಿಯಲ್ಲೋ ಅಥವಾ ಅರ್ಜುನನಿಗೆ ನಾನು ಉಪದೇಶಿಸಿದ ಶರಣಾಗತಿಯ ಮಾರ್ಗದಲ್ಲೋ ಮಾತ್ರ ನನ್ನೊಬ್ಬನನ್ನೇ ಆಶ್ರಯಿಸಿದರೆ ಆ ನನ್ನ ಲೋಕಪ್ರಾಪ್ತಿ, ನನ್ನ ಕೈಂಕರ್ಯ ಸಿಗುವುದು!... ನೀನಿರಲಿ! ಈ ದೇವತೆಗಳಿಗೂ ಅದು ದುರ್ಲಭ! ವೇದವೋದಿದವರಿಗೆಲ್ಲ ಅದು ಸಿಗಲಾರದು!

***ಶ್ರೂಯತೇ ಕಿಲ ಗೋವಿಂದೇ ಭಕ್ತಿಮುದ್ವಹತಾಂ ನೃಣಾಂ।***
***ಸಂಸಾರನ್ಯೂನತಾ ಭೀತಾ. ತ್ರಿದಶಾ: ಪರಿಪನ್ಥಿನ:॥***

ಎಂಬ ಸೂಕ್ತಿಯನ್ನು ಕೇಳಿಲ್ಲವೇ? ಗೋವಿಂದನೆಂಬ ನನ್ನಲ್ಲಿ ಭಕ್ತಿಯುಳ್ಳವರನ್ನು ಕಂಡರೆ, ದೇವತೆಗಳು 'ಈ ಸಂಸಾರ ಮಂಡಲವು ಎಲ್ಲಿ ಮುಗಿದು ಹೋಗುವುದೋ!' ಎಂಬ ಭಯದಿಂದ, ಅವರಿಗೆ ನನ್ನಲ್ಲಿ ಭಕ್ತಿಯನ್ನು ತಪ್ಪಿಸಲು ವಿಘ್ನಗಳನ್ನು ಒಡ್ಡುತ್ತಾರೆ! ಆಗ ಮಾತ್ರ ಅವರ ಲೋಕಗಳೂ, ಅವರೂ ಉಳಿಯುತ್ತಾರೆಂಬ ಭ್ರಾಂತಿ ಅವರಿಗೆ!... ಸರಿಯಲ್ಲವೇ ನೋಡು? ನನ್ನ ಲೋಕದ ಸುಖದ ಹನಿ ಸಿಕ್ಕವನಿಗೆ ಈ ಇಂದ್ರಾದಿ ಲೋಕಗಳು ಸುಖವಾಗಿ ಕಾಣುತ್ತವೆಯೇ? ಈ ಇಂದ್ರಾದಿ ಪದವಿಗಳೂ ಬಾಧಕವಲ್ಲವೇ? ಇವರೆಲ್ಲ ಬದ್ಧ ಪುರುಷರು!... ಈ ಲೋಕವೂ ಕ್ಷಯಿಷ್ಣು!...

***ಮಾಮುಪೇತ್ಯತು ಕೌಂತೇಯ ಪುನರ್ಜನ್ಮ ನ ವಿದ್ಯತೇ।***

ಎಂದು ನಿನ್ನ ತಮ್ಮನಿಗೆ ಹೇಳಿದೆ! ನನ್ನನ್ನಾಶ್ರಯಿಸಿದರೆ ಮಾತ್ರ ಪುನರ್ಜನ್ಮವಿಲ್ಲವೆಂದೆ!

***ಮಾಮೇವ ಯೇ ಪ್ರಪದ್ಯಂತೆ। ಮಾಯಾಂ ಏತೇ! ತರನ್ತಿತೇ।***

ಎಂಬ ಪ್ರಪತ್ತಿಯ ಉಪಾಯವನ್ನು ಹೇಳಿದೆ! ಮಾಡಿದನೇ? ನೀನಾದರೂ ಶರಣಾಗತಿ ಮಾಡಿದೆಯಾ? ನೀವು ಒಬ್ಬರಾದರೂ ಮಾಡಿದಿರಾ? ಭಗವದ್ಗೀತೆಯ ಏಳನೆಯ ಅಧ್ಯಾಯಪೂರ್ತಾ ಇತರ ದೇವತಾಂತರಗಳಿಂದ ಕೇವಲ ಅಲ್ಪ, ನಶ್ವರ ಫಲಮಾತ್ರವೆಂದೂ, ಆ ಆಸೆ ಬಿಟ್ಟವನಿಗೆ ನನ್ನೊಬ್ಬನಲ್ಲೇ ಭಕ್ತಿಯಾದರೆ ಮಾತ್ರ ಈ ಶಾಶ್ವತಸುಖವೆಂದೂ ಉಪದೇಶಿಸಿದೆ! ಎಷ್ಟು ಜನರಿಗೆ ತಿಳಿಯುತ್ತದೆ, ನೋಡಿದೆಯಾ? ಇದೆಲ್ಲ ಅತಿರೇಕವೆನ್ನುವವರೂ, ಮತಾಂಧತೆ ಎನ್ನುವವರೂ, ದೇವತಾಂತರ ಪರಿತ್ಯಾಗವೆಂದರೆ ಅಧೀರರಾಗುವವರೂ, ನಂಬದವರೂ, ನಾನಾ ಕುತರ್ಕ ಮಾಡುವವರೂ ಇಲ್ಲವೆ? ಯುಧಿಷ್ಠಿರ! ನೀನು ಮಾಡಿದ ಸತ್ಕರ್ಮ ಫಲವನ್ನು ಇಲ್ಲಿ ಮೊದಲು ಪಡೆ! ಆಮೇಲೆ ನಿನ್ನ ಸ್ವಸ್ವರೂಪವಾದ ಯಮಧರ್ಮನನ್ನು ಸೇರು! ಅಲ್ಲಿ ಜ್ಞಾನೋದಯವಾದರೆ ಮತ್ತೆ ನನ್ನನ್ನು ಉಪಾಸಿಸು!"

ಧರ್ಮಜ: "ಪ್ರಭು! ಒಂದು ದೇವತೆಯಾಗಿ ಒಂದು ಲೋಕಪಾಲ ಪದವಿಯನ್ನು ಪಡೆದು, ಆ ಲೋಕವನ್ನು ಸೇರಿ, ಆಳಿಕೆಯ ಭರದಲ್ಲಿ ಸಿಕ್ಕವನು, ಅಲ್ಲಿ ನಿನ್ನನ್ನುಪಾಸಿಸುವುದೆಂತು?"

ಶ್ರೀಕೃಷ್ಣ: "ಅದು ಶಕ್ಯವೇ ಇಲ್ಲ! ಮತ್ತೆ ಇಲ್ಲಿ ಭೂಮಿಗೆ ಬಂದೇ ಅದನ್ನು ಮಾಡಬೇಕು! ಅದು ನಿನಗೆ ಸಿಕ್ಕೂ ನೀನೇಕೆ ಮಾಡಲಿಲ್ಲ?

*ರುದ್ರಾದಿತ್ಯವಸೂನಾಂ ಚ ತಥಾನ್ಯೇಷಾಂ ದಿವೌಕಸಾಂ।*
*ಏತೇ ವೈ ನಿರಯಾಸ್ತಾತ! ಸ್ಥಾನಸ್ಯ ಪರಮಾತ್ಮನಃ॥*

ಎಂದು ಭೀಷ್ಮನೇ ನಿನಗುಪದೇಶಿಸಲಿಲ್ಲವೇ? ಇಂದ್ರ, ವರುಣ, ಬ್ರಹ್ಮ ರುದ್ರಾದಿತ್ಯಾರಾದಿ ಎಲ್ಲ ದೇವತೆಗಳ ಲೋಕಗಳ ಅನುಭವವನ್ನು, ಪರಮಾತ್ಮನಾದ ನನ್ನ ಲೋಕಾನುಭವಕ್ಕೆ ಹೋಲಿಸಿದರೆ, ಅವೆಲ್ಲ ನರಕಗಳಾಗಿ ತೋರುವುವೆಂದು ಹೇಳಲಿಲ್ಲವೇ? ಆಗಲೂ ನಿನಗೆ ಈ ಬುದ್ಧಿ ಬರಲಿಲ್ಲ! ಬಿಡು! ಈಗಾದರೂ ತಾತ್ಕಾಲಿಕವಾಗಿ, ನನ್ನನ್ನಿಲ್ಲಿ ಕಂಡೊಡನೆಯೇ ಮಾತ್ರ ನಿನಗೆ ಈ ಆಸೆ ಬಂದಿತೇ ಹೊರತ , ನಿನ್ನ ನೈಜ ಆಸೆ ನಿನ್ನ ತಮ್ಮಂದಿರನ್ನು ಕಂಡು, ಈ ಸ್ವರ್ಗಸುಖವನ್ನು ಅವರೊಡನೆ ಅನುಭವಿಸಬೇಕೆಂಬುದೇ ಆಗಿದೆ. ತಥಾಸ್ತು!" ಶ್ರೀಕೃಷ್ಣ ಅಂತರ್ಧಾನನಾದ!

*****

# ಉಪಸಂಹಾರ

ಅಮೋಘವಾದ ಶ್ರೀಕೃಷ್ಣವತಾರವೂ ಒಂದು ದಿನ ಮುಗಿಯಿತೆಂದರೆ, ಅಂದು ಆ ಅತಿಮಾನುಷ ವ್ಯಾಪಾರಗಳನ್ನು ಕಂಡವರು ಯಾರಾದರೂ ನಂಬುತ್ತಿದ್ದರೇ? ಅದು ನಡೆಯಿತೆಂದೇ ಇಂದಿನ ನಾವು ನಂಬದಾಗಿದ್ದೇವೆ ಅಲ್ಲವೇ?

ಇತಿಹಾಸದಲ್ಲಿ ನಡೆದುದೇ ಮತ್ತೆ ಮತ್ತೆ ನಡೆಯುವುದು ವಿಚಿತ್ರ! ದಾಯಾದಿಗಳ ಜಗಳ ಮನೆಮನೆಯಲ್ಲೂ ನಡೆಯುತ್ತಿರುವ ದಿನದಿನದ ಮಹಾಭಾರತದ ನಿತ್ಯಾವರ್ತನೆ!

ಯಾದವೀಕಲಹ, ಭಾರತದ ರಾಜಕೀಯದಲ್ಲಿ, ಧುರೀಣರಲ್ಲಿ, ಸಮಾಜದ ಮುಂದಾಳುಗಳಲ್ಲಿ, ಸದಾ ಆವರ್ತನೆಯಾಗುತ್ತಿರುವ ದುರ್ಘಟನೆ!

ಕುಡಿತ, ಸೇಡು, ವ್ಯಭಿಚಾರ, ಜೂಜು, ದ್ವೇಷ ಇವು ಅಂದು ಯಾದವರನ್ನು ಇಂದು ಭಾರತೀಯ ಧುರೀಣರನ್ನು- ನಾನಾ ಪಕ್ಷಗಳವರನ್ನೂ, ಬಲಿ ತೆಗೆದುಕೊಳ್ಳುತ್ತಿರುವ ಕಲಿ ಅಂಶಗಳು. "ಕಲಿ"ತ ವರಲ್ಲೇ "ಕಲಿ" ಪ್ರಭಾವವೆಂದರೆ, ಈ ಶಬ್ದವನ್ನಾಡಲೂ ಅಂಜಿಕೆ ಬರಬೇಕು!

ದೇವರೇ ಇಳಿದು ಬಂದರೂ ಇಂಥ ಜನಾಂಗವನ್ನು ಉಳಿಸುವ ಬದಲು ಅಳಿಸಿ, ಮುಗಿಸಿಯೇ ಹೋಗುತ್ತಾನೆಂಬುದು ಮೌಸಲ ಪರ್ವದ, ಮಹಾಭಾರತ ಭಾಗವತಗಳ ಒಳ ಅರ್ಥ!

ಯಾದವರು ಸತ್ತದ್ದೂ, ಶ್ರೀಕೃಷ್ಣ ದೇಹ ಬಿಟ್ಟುದೂ, ಕೃಷ್ಣಪತ್ನಿಯರಿಗಾದ ಕಥೆಯೂ ಇವು ಓದಬಾರದ, ಹೇಳಬಾರದ, ಬರೆಯಬಾರದ ಕತೆಗಳು ಎಂಬುದು ಹಳೆಯ ತಲೆಮಾರುಗಳ ನಂಬಿಕೆ! ಜೀವನದಲ್ಲಿ ಬದುಕಬೇಕೆಂಬ ಶ್ರದ್ಧೆಯೇ ಕಳೆದುಹೋದೀತೆಂಬ ಶಂಕೆ ಅವರದು! ಅದು ನಮಗೆ ಇಂದು ಇಲ್ಲ! ಏಕೆಂದರೆ ನಮಗೆ ಆ ಶ್ರದ್ಧೆಯೇ ಇಲ್ಲ!

ಒಂದು ಜನಾಂಗದಲ್ಲಿ ಕೆಲವರಿಗೆ ಜೀವನಶ್ರದ್ಧೆ ಕಳೆದರೆ ಅವರು ನತದೃಷ್ಟರು! ಹಲವರಿಗೆ ಹಾಗಾದರೆ ಅದು ಆ ಸಮಾಜದ ದುರದೃಷ್ಟ! ಎಲ್ಲರಿಗೂ ಹಾಗಾದರೆ ಅದು ಯುಗಪ್ರಳಯದ, ಮಹಾಪ್ರಳಯದ ಲಕ್ಷಣ!

ಯಾದವರು ಹುಟ್ಟಿದ್ದೇ ಕೃಷ್ಣ ಸಹಾಯಕ್ಕೆಂದೂ, ದೇವಾಸುರ ಯುದ್ಧದಲ್ಲಿ ಹತರಾದ ದೈತ್ಯರೇ ಕ್ಷತ್ರಿಯರೂಪದಿಂದ ಹುಟ್ಟಿ ಬಂದುದರಿಂದ, ಅವರ ಸಂಹಾರದಿಂದ ಭೂಭಾರಾವತರಣ ಮಾಡಲು ಶ್ರೀಕೃಷ್ಣಾವತಾರವಾಯಿತೆಂದೂ, ಈ ಯಾದವರ ಎಲ್ಲ ಆಗುಹೋಗುಗಳಿಗೂ ಕೃಷ್ಣನೇ ಪ್ರಮಾಣವಿದ್ದನೆಂದೂ ಹೇಳುವ ಪರಾಶರರು

*ಸಂಖ್ಯಾನಂ ಯಾದವಾನಾಂ ಕಃ ಕರಿಷ್ಯತಿ ಮಹಾತ್ಮನಾಂ?*

ಎಂದು ಕೇಳುತ್ತಾರೆ! "ಇವರು ಎಷ್ಟು ಜನರೆಂದು ಯಾರು ಹೇಳಬಲ್ಲರು?"

ಇಂಥವರನ್ನು ಬೆಳೆಸಿದ ಕೃಷ್ಣನ ಕಥೆಯನ್ನೂ ಯಾದವರ ಕುಲವೃದ್ಧಿಯ ಕಥೆಯನ್ನೂ ಕೇಳುವವರಿಗೆ ಪಾಪಮುಕ್ತಿಯೂ ವಿಷ್ಣುಸ್ಥಾನ ಪ್ರಾಪ್ತಿಯೂ ಉಂಟೆಂದೂ ಹೇಳಿದ್ದಾರೆ!

*ವಿಷ್ಣುರ್ರೇಷಾಂ ಪ್ರಮಾಣೇಚ ಪ್ರಭುತ್ವೇ ಚ ವ್ಯವಸ್ಥಿತಃ।*
*ನಿದೇಶಸ್ಥಾಯಿನಸ್ತಸ್ಯ ವವೃಧುಃ ಸರ್ವಯಾದವಾಃ॥*

*ಇತಿ ಪ್ರಸೂತಿಂ ವೃಷ್ಣೀನಾಂ ಯಃಶೃಣೋತಿ ನರಃಸದಾ।*
*ಸ ಸರ್ವೈಃ ಪಾತಕೈರ್ಮುಕ್ತೋ ವಿಷ್ಣುಲೋಕಂ ಪ್ರಪದ್ಯತೇ॥*

ಹಾಗಾದರೆ ಇದೇ ಯಾದವರು ಕೃಷ್ಣಮಾರ್ಗವನ್ನು ಬಿಟ್ಟು ಭ್ರಷ್ಟರಾಗಿ ಸತ್ತ ಕಥೆ ಕೇಳಿದರೆ ಏನು ಫಲ? ಎಂದು ಕೇಳಬೇಕಲ್ಲವೇ?

ಒಬ್ಬ ಮಹಾತ್ಮನು ಸತ್ಯ, ಅಹಿಂಸೆ, ಧರ್ಮ, ದೈವಭಕ್ತಿ, ತ್ಯಾಗ ಇವುಗಳ ಬೆಳಕಿನಲ್ಲಿ ಒಂದು ರಾಷ್ಟ್ರೀಯ ಪುನರುತ್ಥಾನದ ಹಾದಿಯನ್ನು ತೋರಿಸುತ್ತಾನೆ! "ಮದ್ಯಪಾನ ಮಾಡಬೇಡಿ" ಎಂದು ಚಳುವಳಿ ಮಾಡುತ್ತಾನೆ! "ಜೂಜಾಡಬೇಡಿ" ಎಂದು ಬೋಧಿಸುತ್ತಾನೆ! ಬ್ರಹ್ಮಚರ್ಯದ ಮಹಿಮೆಯನ್ನೂ ಬದುಕುವ ದಾರಿಯನ್ನೂ ತೋರಿಸುತ್ತಾನೆ!

ಅವನ ಹೆಸರನ್ನೇ ಹೇಳುತ್ತಾ, ಅವನ ಅನುಯಾಯಿಗಳೆಂಬ ಇಂದಿನ ನಾವು ದೇವಾಲಯ, ಶಾಲೆ ಕಾಲೇಜುಗಳ ಪಕ್ಕದಲ್ಲೇ ಮದ್ಯದ ಅಂಗಡಿಗಳನ್ನಿಡುತ್ತೇವೆ! ಅವನ ಹೆಸರಲ್ಲೇ, ಸರ್ಕಾರದ ಆಶ್ರಯದಲ್ಲೇ, ರಾಷ್ಟ್ರಮಟ್ಟದಲ್ಲಿ, ರಾಜ್ಯಮಟ್ಟದಲ್ಲಿ ಜೂಜಾಡುತ್ತೇವೆ! ಸ್ತ್ರೀಯರ ಮಾನಭಂಗಕ್ಕೆ ಸರ್ಕಾರಿ ಬಂದೋಬಸ್ತಿರುವಂತೆ ಮಾಡುತ್ತೇವೆ! ಮದೋನ್ಮತ್ತರಾಗಿ, ಮೌಲ್ಯಗಳನ್ನು ಗಾಳಿಗೆ ತೂರುತ್ತೇವೆ! ದೇವರಿಲ್ಲವೆನ್ನುತ್ತೇವೆ! ಕೈಯೆತ್ತಿದ್ದೇ ಸರಿ ಎನ್ನುತ್ತೇವೆ!...

ಇದೆಲ್ಲ ಯಾದವರ ವಿನಾಶದ ದಾರಿಯೇ ಅಲ್ಲವೇ? ಕಚ್ಚಾಟವಂತೂ ಅಸಹ್ಯದ ಮಿತಿಯನ್ನು ಎಂದೋ ಮುಟ್ಟಿ ಆಗಿದೆ! ಯಾರಿಗೂ ಯಾವನಿಷ್ಠೆಯೂ ಇಲ್ಲ! ಈಗ ಎಲ್ಲರೂ ಕೃತವರ್ಮರೇ! ಸಾತ್ಯಕಿಗಳೇ!

ಸಾಂಬನ ಅಂದಿನ ಕುಚೋದ್ಯ!.... ಇಂದು ಋಷಿಮುನಿ ವಾಣಿಗೆ ಅಗೌರವ ತರುವ ಘಟನೆಗಳಲ್ಲಿ, ಧೋರಣೆಗಳಲ್ಲಿ, ರಾಜಕೃತ್ಯಗಳಲ್ಲಿ, ಕಾಣಬರುತ್ತಿದೆ!

ಇಂದಿನ ರಾಜಕಾರಣೆ, ಕುಲಕ್ಷಯಕರವಾದ ಕಬ್ಬಿಣದ ಒನಕೆಯನ್ನು ಹಡೆದಾಗಿದೆ! ಜೊಂಡೂ ಬೆಳೆದು ನಿಂತಿದೆ!

ಮಹಾತ್ಮ ಉದಾಸೀನನಾಗಿ ನೋಡುತ್ತಿದ್ದಾನೆ! ಅಕೋ, ಅಂತರ್ಯುದ್ಧ ಪ್ರಾರಂಭವಾಗಿದೆ!!

* * * * *

ಶ್ರೀಕೃಷ್ಣ: "ಪ್ರಜೆಗಳೇ, ಮತ್ತೆ ಅವತರಿಸಲೇ! ನನ್ನನ್ನನುಸರಿಸುವಿರಾ?"

ಪ್ರಜೆ! "ಬೇಡ, ಬೇಡ! ನೀನೊಮ್ಮೆ ಬಂದು ಮಾಡಿದುದನ್ನೇ ಜೀರ್ಣಿಸಿಕೊಳ್ಳಲಾರದಾಗಿದ್ದೇವೆ! ನೀನು ಮತ್ತೆ ಬಂದು ನಮ್ಮ ಸುಖವನ್ನು ಕೆಡಿಸಬೇಡ! ನೀನೂ ಕಷ್ಟಪಡಬೇಡ!!"

ಶ್ರೀಕೃಷ್ಣ: "ನನ್ನ ಕಥೆಗೆ ಅರ್ಥ ಇದೇನೇ?"

ಪ್ರಜೆ: "ಹೌದು! ನಮ್ಮ ಮತಿಗೆ ಎಟುಕುವುದು ಇಷ್ಟೇಯೇ!"

* * * * *

ಇದು ಭಾರತದ ಪ್ರಜೆಯ, ಅವನ ಸತ್ತೆಯ, ಪ್ರಜಾಸತ್ತೆಯ, ಸತ್ತಪ್ರಜೆಯ, "ಪ್ರಜ್ಞೆ"! ಯಾದವೀ ಕಲಹವನ್ನು ಕೃಷ್ಣನೇ ಪರಿಹರಿಸಲಿಲ್ಲ! ಪ್ರಜೆಗಳ ಸಂಕಟ ಪರಿಹಾರಕ್ಕೆ ಅಂದು ಅವರನ್ನು ಸಾಯ ಬಿಡುವುದೇ ಪರಿಹಾರವಾಗಿತ್ತು! ಇಂದು ನಮಗೂ ಇದೇ ಪಾಠವೇ?

## "ಶುಭಮಸ್ತು"

## "ಶ್ರೀಕೃಷ್ಣಾರ್ಪಣಮಸ್ತು"